




# ಶ್ರೀ ಸಿ. ಆರ್. ಕೃಷ್ಣರಾವ್ ಅವರಿಗೆ ಅಭಿವಂದನೆ ಹಾಗೂ ಅವರ 'ಬದುಕಿನ ತಿರುವುಗಳು' ಕೃತಿ ಲೋಕಾರ್ಪಣೆ

ನವಕರ್ನಾಟಕ ಪ್ರಕಾಶನದ ಸ್ಥಾಪಕ ನಿರ್ದೇಶಕರೂ, ಹಿರಿಯ ಸಂಪಾದಕರೂ, 'ಹೊಸತು' ಪತ್ರಿಕೆಯ ಸಹ ಸಂಪಾದಕರೂ ಆಗಿರುವ ಶ್ರೀ ಸಿ. ಆರ್. ಕೃಷ್ಣರಾವ್ (ಸೀಯಾರ್ಕೆ) ಅವರ ೯೦ನೇ ಹುಟ್ಟು ಹಬ್ಬದ ಸಂದರ್ಭದಲ್ಲಿ ಅವರನ್ನು ಅಭಿನಂದಿಸಲು ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ ಮತ್ತು ನವಕರ್ನಾಟಕ ಪ್ರಕಾಶನ ಸಂಸ್ಥೆ ಜಂಟಿ ಆಶ್ರಯದಲ್ಲಿ ಕಾರ್ಯಕ್ರಮವನ್ನು ಏರ್ಪಡಿಸಲಾಯಿತು. ದಿನಾಂಕ ೨೩.೦೬.೨೦೧೯ ರಂದು ಬೆಂಗಳೂರಿನ ಗಾಂಧಿಭವನದಲ್ಲಿ ಜರುಗಿದ ಈ ಸಮಾರಂಭದಲ್ಲಿ ಸೀಯಾರ್ಕೆಯವರ ಅನುಭವ ಕಥನ 'ಬದುಕಿನ ತಿರುವುಗಳು' ಕೃತಿಯನ್ನು ನಾಡೋಜ ಪ್ರೊ॥ ಎಂ. ಎಚ್. ಕೃಷ್ಣಯ್ಯ ಬಿಡುಗಡೆ ಮಾಡಿದರು. ಡಾ॥ ವಸುಂಧರಾ ಭೂಪತಿಯವರ ಅಧ್ಯಕ್ಷತೆಯಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ ಡಾ॥ ಜಿ. ರಾಮಕೃಷ್ಣ, ಡಾ॥ ವಿಜಯಾ, ಡಾ॥ ಟಿ. ಆರ್. ಅನಂತರಾಮು, ಡಾ॥ ಸಿದ್ದನಗೌಡ ಪಾಟೀಲ ಮುಂತಾದವರು ಅಭಿವಂದನಾ ನುಡಿಗಳನ್ನಾಡಿ ಸೀಯಾರ್ಕೆ ದಂಪತಿಗಳನ್ನು ಸನ್ಮಾನಿಸಿದರು. ಭಾರತ ಕಮ್ಯುನಿಸ್ಟ್ ಪಕ್ಷ, ಪತ್ರಕರ್ತರ ಸಂಘ ಹಾಗೂ ಸೀಯಾರ್ಕೆಯವರ ಬಂಧು-ಬಳಗದವರೂ ಸನ್ಮಾನಗಳನ್ನು ಮಾಡಿದರು. ಸೀಯಾರ್ಕೆ ದಂಪತಿಗಳ ಮಕ್ಕಳಾದ ಪ್ರತಿಭಾ ಮತ್ತು ಕಿರಣ್ ಈ ಸಂದರ್ಭದಲ್ಲಿ ಮಾತನಾಡಿದರು. ಸಮಾರಂಭವು ಬಹಳ ಆತ್ಮೀಯವಾಗಿತ್ತು.









# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ, ವಿ. ಗೋಪಾಲ್, ತನು, ಜಿ. ಎಂ. ಬೊಮ್ನಳ್ಳಿ, ಆದರ್ಶ ಪೈ

**ಮುಖಪುಟ : ಗಿರೀಶ ಕಾರ್ನಾಡ**

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು



ಉಗ್ರ ರಾಷ್ಟ್ರೀಯ ದುರಭಿಮಾನ, ಜನಾಂಗ ಶ್ರೇಷ್ಠತಾವಾದ ಮತ್ತು ಕಮ್ಯೂನಿಸಂ ವಿರೋಧ ಫಾಸಿಸಂನ ವಿಶಿಷ್ಟ ಲಕ್ಷಣ. ಅದು ಪ್ರಜಾಸತ್ತಾತ್ಮಕ ಸ್ವಾತಂತ್ರ್ಯಗಳನ್ನು ಧ್ವಂಸ ಮಾಡುತ್ತದೆ. ಸಾಮಾಜಿಕ ಸುಧಾರಣೆಗಳ ಬಗ್ಗೆ ಪೊಳ್ಳು ಆಶ್ವಾಸನೆಗಳನ್ನು ನೀಡುತ್ತದೆ. ನಾಗರಿಕರ ಸಾರ್ವಜನಿಕ ಮತ್ತು ಖಾಸಗಿ ಜೀವನದ ಬಗ್ಗೆ ಕಟ್ಟುನಿಟ್ಟಾದ ನಿಗಾ ಇರಿಸುತ್ತದೆ. ಫಾಸಿಸಂನ ಈ ವಿವರಣೆ ಭಾರತದ ಇಂದಿನ ಪರಿಸ್ಥಿತಿಗೆ ಒಪ್ಪುತ್ತದೆ. ಒಂದೇ ದೇಶ, ಒಂದೇ ಧರ್ಮ, ಒಂದೇ ಚುನಾವಣೆ, ಒಂದೇ ಭಾಷೆ ಇತ್ಯಾದಿಗಳು ಆರೆಸ್ಸೆಸ್ ಮತ್ತು ಅದರ ರಾಜಕೀಯ ಮುಖದ ಗುರಿ. ಹಿಂದಿ ಹೇರಿಕೆ ಅಂಥವುಗಳಲ್ಲಿ ಒಂದು. ಭಾಜಪ ಅಧಿಕಾರಕ್ಕೆ ಬಂದಾಗಿನಿಂದ ಪರೋಕ್ಷವಾಗಿ ಹಿಂದಿ ಹೇರಿಕೆಯ ಪ್ರಯತ್ನ ನಡೆಯುತ್ತಲೇ ಇದೆ. ಕೇಂದ್ರ ಸರಕಾರದ ಎಲ್ಲ ಸುತ್ತೋಲೆಗಳಲ್ಲೂ, ರಾಷ್ಟ್ರೀಕೃತ ಬ್ಯಾಂಕ್ ಚಲನ್‌ಗಳಲ್ಲಿ ಸರಕಾರಕ್ಕೆ ಸಂಬಂಧಿಸಿದ ಪ್ರಕಟಣೆಗಳಲ್ಲಿ, ಜಾಹೀರಾತುಗಳಲ್ಲಿ ಹಿಂದಿಗೆ ಪ್ರಾಧಾನ್ಯತೆ ಇತ್ತು. ಸರಕಾರ ಅದನ್ನು ಶಿಕ್ಷಣ ಕ್ಷೇತ್ರಕ್ಕೂ ವಿಸ್ತರಿಸಲು ನೋಡಿತು. ಆದರೆ ಹಿಂದಿಯೇತರ ರಾಜ್ಯಗಳಲ್ಲಿ ಭುಗಿಲೆದ್ದ ಪ್ರತಿಭಟನೆಯಿಂದಾಗಿ ಪ್ರಯತ್ನವನ್ನು ಕೈಬಿಟ್ಟಿತು. ಕಣ್ತಪ್ಪಿನಿಂದಾಗಿ ಆದ ದೋಷ ಎಂದು ನುಣುಚಿಕೊಂಡಿತು. ಐವತ್ತರ ದಶಕದಲ್ಲಿ ಕಾಂಗ್ರೆಸ್ ಹಿಂದಿ ಹೇರಿಕೆಯ ಪ್ರಯತ್ನ ನಡೆಸಿ ತಮಿಳುನಾಡಿನಲ್ಲಿ ಆಡಳಿತವನ್ನು ಕಳೆದುಕೊಂಡುದನ್ನು ನೆನಪಿಸಿಕೊಳ್ಳಬಹುದು. ಬೇರೆಲ್ಲೂ ನಡೆಯದಿದ್ದಷ್ಟು ಪ್ರತಿಭಟನೆ ತೀವ್ರವಾಗಿ ಜರುಗಿತು ತಮಿಳುನಾಡಿನಲ್ಲಿ. ದ್ರಾವಿಡಮುನ್ನೇತ್ರ ಕಳಗಂ ಅಧಿಕಾರಕ್ಕೇರಿದ್ದೆ ಹಿಂದಿ ವಿರೋಧಿ ಚಳವಳಿಯಿಂದ. ಭಾರತೀಯ ಜನತಾ ಪಕ್ಷ ಇದನ್ನು ಗಮನಿಸಬೇಕು. ಹಿಂದಿ ಹೇರಿಕೆಯ ಪ್ರಯತ್ನವನ್ನು ಕೈಬಿಡಬೇಕು. ಹಾಗೆಯೇ ಏಕಕಾಲದಲ್ಲಿ ರಾಜ್ಯ ವಿಧಾನಸಭೆಗಳಿಗೆ ಮತ್ತು ಲೋಕಸಭೆಗೆ ಚುನಾವಣೆ ನಡೆಸಬೇಕೆಂಬ ಸೂಚನೆಯನ್ನೂ ಹಿಂದಕ್ಕೆ ತೆಗೆದುಕೊಳ್ಳುವುದು ಸೂಕ್ತ. ಪ್ರತಿಪಕ್ಷಗಳು ಇದಕ್ಕೆ ಸರ್ವಥಾ ಸಮ್ಮತಿಸುವುದಿಲ್ಲ. ಎಡಪಕ್ಷಗಳು ಈಗಾಗಲೇ ಈ ಬಗ್ಗೆ ತಮ್ಮ ನಿಲುವನ್ನು ಸ್ಪಷ್ಟಪಡಿಸಿವೆ.

✴ ✴ ✴

ಕರ್ನಾಟಕದಲ್ಲಿ ಕೊನೆಗೂ ಮಂತ್ರಿಮಂಡಲದ ವಿಸ್ತರಣೆಯಾಗಿದೆ. ಅಳೆದು ಸುರಿದು ನೋಡಿ ಪಕ್ಷೇತರರಿಬ್ಬರಿಗೆ ಮಣೆ ಹಾಕಿ, ಮಂತ್ರಿಗಿರಿ ನೀಡಲಾಗಿದೆ. ಆದರೆ ಇನ್ನೂ ಯಾವ ಖಾತೆ ಎಂಬುದು ನಿಗದಿಯಾಗಿಲ್ಲ. ಸಂಪುಟ ಪುನಾರಚನೆಯಾದಾಗ ಆಡಳಿತ ಪಕ್ಷದಲ್ಲಿ ಅದರಲ್ಲೂ ಸಮ್ಮಿಶ್ರ ಸರಕಾರದಲ್ಲಿ ಸಚಿವಾಕಾಂಕ್ಷಿಗಳಲ್ಲಿ ಅತೃಪ್ತಿ ಉಂಟಾಗುವುದು ಸಹಜ. ಹಾಗಾಗಿ ಕಾಂಗ್ರೆಸ್, ಜೆಡಿಎಸ್‌ಗಳಲ್ಲಿ ಹತಾಶೆ ಆಕಾಂಕ್ಷಿಗಳಲ್ಲಿ ಎದ್ದುಕಾಣುತ್ತಿದೆ. ಹಿರಿಯ ಕಾಂಗ್ರೆಸ್ ನಾಯಕರುಗಳು ಬಹಿರಂಗವಾಗಿ ತಮ್ಮ ಆಕ್ರೋಶ ವ್ಯಕ್ತಗೊಳಿಸಿರುವುದೀಗ ಮಹತ್ವದ ಬೆಳವಣಿಗೆ. ಮೂಲ ಕಾಂಗ್ರೆಸ್ಸಿಗರು ಮತ್ತು ವಲಸಿಗರ ನಡುವೆ ತಿಕ್ಕಾಟ ಕಾಂಗ್ರೆಸ್ ಪಕ್ಷದಲ್ಲಿ ಇದ್ದದ್ದೇ. ಲೋಕಸಭೆ ಚುನಾವಣೆಗಳಲ್ಲಿ ಮೈತ್ರಿ ಸರಕಾರದ ಸೋಲು ಅನಿರೀಕ್ಷಿತ. ಸರಕಾರದ ಮುಖಭಂಗ. ಪರಸ್ಪರ ಕೆಸರೆರೆಚಾಟ ನಡೆದಿದೆ. ಭಾಜಪದ ಅದ್ಭುತ ವಿಜಯ ಸರಕಾರದ ಭವಿಷ್ಯದ ಮೇಲೆ ಪರಿಣಾಮ ಬೀರದಿರದು. ಹಾಗೆಂದ ಮಾತ್ರಕ್ಕೆ ಸರಕಾರ ಪತನವಾಗುತ್ತದೆ ಎಂದೇನಲ್ಲ. ಏನೇ ಭಿನ್ನಾಭಿಪ್ರಾಯಗಳಿದ್ದಾಗ್ಯೂ ಅಸಮಾಧಾನವಿದ್ದಾಗ್ಯೂ ಬಗೆಹರಿಸಿಕೊಂಡು ಸಮ್ಮಿಶ್ರ ಸರಕಾರ ಮುಂದುವರಿಯಬೇಕಾದ ಅನಿವಾರ್ಯತೆ ಇದೆ. ಒಂದು ವರ್ಷ ಮುಗಿಸಿರುವ ಕುಮಾರಸ್ವಾಮಿ ಸರಕಾರ ಪೂರ್ಣಾವಧಿ ಮುಗಿಸುವುದು ಮುಖ್ಯ. ಅನಿಶ್ಚಿತತೆ ಏನೇ ಇದ್ದರೂ ಸರಕಾರ ಜನಪರ, ರೈತಪರ ನೀತಿಗಳನ್ನು ಅನುಸರಿಸುವುದಕ್ಕೆ ಆದ್ಯತೆ ನೀಡುವುದು ಅಗತ್ಯ. ಮಾಧ್ಯಮಗಳ ಮೂಲಕ ಬೇಕಾಬಿಟ್ಟಿಯಾಗಿ ಶಾಸಕರು, ನಾಯಕರು ಮಾತನಾಡುವುದನ್ನು ನಿಲ್ಲಿಸಿದರೆ ಒಳಿತಾದೀತು. ಚುನಾವಣೆಗಳಲ್ಲಿ ಸೋಲು ಗೆಲುವು ರಾಜಕೀಯ ಪಕ್ಷಗಳ ನಾಯಕರಿಗೆ ಹೊಸದೇನಲ್ಲ. ಕರ್ನಾಟಕದ ರಾಜಕಾರಣ ಕುತೂಹಲಕಾರಿಯಾಗಿದೆ. ಮಾಧ್ಯಮಗಳಿಗೆ ಪ್ರತಿದಿನದ


**(೬ನೇ ಪುಟಕ್ಕೆ)**



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೨೦ ಸಂಚಿಕೆ-೧೨ ಜುಲೈ ೨೦೧೯

■ ***ಗೌರವ ಸಂಪಾದಕ***

ಜಿ. ರಾಮಕೃಷ್ಣ

■ ***ಸಂಪಾದಕ-ಮುದ್ರಕ-ಪ್ರಕಾಶಕ***

ಸಿದ್ದನಗೌಡ ಪಾಟೀಲ

■ ***ಸಹಸಂಪಾದಕರು***

ಎಂ. ಅಬ್ದುಲ್ ರೆಹಮಾನ್ ಪಾಷ
ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಎಸ್. ಸುರೇಂದ್ರ

■ ***ವ್ಯವಸ್ಥಾಪಕ***

ಎ. ರಮೇಶ ಉಡುಪ

■ ***ಮುದ್ರಣ***

**ಶ್ರೀ ವಿನಾಯಕ ಪ್ರಿಂಟರ್ಸ್**
೭೫೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦

■ ***ಹೊಸತು ಕಚೇರಿಯ ವಿಳಾಸ***




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೨೨೧೬೧೯೧೧, ೨೨೧೬೧೯೧೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**



# ಸಂಪಾದಕೀಯ

## ಪ್ರತಿಗಾಮಿ ಬಲಪಂಥಕ್ಕೆ ಮಾನ್ಯತೆ

**ಭಾ**ರತದ ಸಂಸದೀಯ ವ್ಯವಸ್ಥೆ ಪ್ರತಿಗಾಮಿ ಬಲಪಂಥೀಯ ಶಕ್ತಿಗಳ ನಿಯಂತ್ರಣಕ್ಕೆ ಬಂದಿದೆ. ಅದಕ್ಕೆ ಜನತೆಯ ಮಾನ್ಯತೆಯೂ ದೊರೆತಿದೆ. ಅಲ್ಲಿಗೆ ವಿಶ್ವ ಕಾರ್ಪೊರೇಟ್ ವಲಯದ ಕಾರ್ಯಸೂಚಿ ಆರಂಭವಾಗಿದೆ. ಹಿಂದಿನ ಕೇಂದ್ರ ಸರಕಾರದ ಅವಧಿಯಲ್ಲಿ ಮೋದಿಯವರ ನಾಯಕತ್ವದಲ್ಲಿ ಅನುಸರಿಸಿದ ಕಾರ್ಪೊರೇಟ್ ಪರ ನೀತಿಗಳಿಗೆ ಮಾನ್ಯತೆ ಸಿಕ್ಕಿದೆ. ಈ ಮಾನ್ಯತೆಗಾಗಿ ಕೋಮುವಾದ ಮತ್ತು ರಾಷ್ಟ್ರೀಯತೆಗಳನ್ನು ಒಂದು ತಂತ್ರವಾಗಿ, ಪರಿಣಾಮಕಾರಿಯಾಗಿ ಬಳಸಿಕೊಳ್ಳಲಾಯಿತು. ಭಾರತದ ಸಂಸತ್ತನ್ನು ಏಕತ್ರವಾಗಿ ಕಾರ್ಪೊರೇಟೀಕರಣಗೊಳಿಸುವುದು ಸುಲಭದ ಮಾತಾಗಿರಲಿಲ್ಲ. ಈ ದೇಶದಲ್ಲಿ ಬಿಜೆಪಿಗೆ ಬಲ ಬರುವವರೆಗೂ ಕಾಂಗ್ರೆಸ್ ಮೂಲಕವೇ ತಮ್ಮ ಹಿತಾಸಕ್ತಿಗೆ ಪ್ರಭುತ್ವವನ್ನು ಕಾರ್ಪೊರೇಟ್ ಕಂಪನಿಗಳು ಬಳಸಿಕೊಂಡವು. ವಾಸ್ತವವಾಗಿ ಭಾರತೀಯ ಪ್ರಭುತ್ವವನ್ನು ಬಲಪಂಥೀಕರಣಕ್ಕೊಳಪಡಿಸುವ ಪ್ರಕ್ರಿಯೆ ಎಂಬತ್ತರ ದಶಕದಿಂದಲೇ ಆರಂಭವಾಗಿದೆ. ಮೊದಲ ಚುನಾವಣೆಯಿಂದ ತನ್ನ ಸ್ವಶಕ್ತಿಯಿಂದಲೇ ಅಧಿಕಾರಕ್ಕೆ ಬಂದ ಕಾಂಗ್ರೆಸ್ ಇಂದಿರಾ ಗಾಂಧಿ ನಿಧನದ ನಂತರ ಮತ್ತು ರಾಜೀವ ಗಾಂಧಿ ನಿಧನದ ನಂತರ ಅನುಕಂಪದ ಕಾರಣಕ್ಕಾಗಿ ಬಹುಮತ ಪಡೆದದ್ದನ್ನು ಬಿಟ್ಟರೆ ಏಕಪಕ್ಷ ಆಡಳಿತ ಕಂಡಿರಲಿಲ್ಲ. ಕಾಂಗ್ರೆಸ್ ನಾಯಕತ್ವದ ಮೈತ್ರಿಕೂಟ, ಬಿಜೆಪಿ ನಾಯಕತ್ವದ ಮೈತ್ರಿಕೂಟ ಮಧ್ಯೆ ಪೈಪೋಟಿ ನಿರಂತರವಾಗಿತ್ತು. ಈ ಮಧ್ಯೆ ಎಪ್ಪತ್ತರ ತುರ್ತುಪರಿಸ್ಥಿತಿಯ ನಂತರ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ಜನತಾ ಪಕ್ಷದ ಮೈತ್ರಿಸರಕಾರ, ೧೯೮೯ರಲ್ಲಿ ಬಂದ ವಿ. ಪಿ. ಸಿಂಗ್ ನಾಯಕತ್ವದ ರಾಷ್ಟ್ರೀಯ ವೇದಿಕೆ (ನ್ಯಾಶನಲ್ ಫ್ರಂಟ್) ಸರಕಾರ, ೧೯೯೦ರ ಚಂದ್ರಶೇಖರ ಸರಕಾರ, ೧೯೯೬ರಲ್ಲಿ ರಚನೆಯಾದ ದೇವೇಗೌಡರ ನಾಯಕತ್ವದ ತೃತೀಯ ರಂಗದ (ಸಂಯುಕ್ತ ರಂಗ) ಸರಕಾರ, ಈ ನಡುವೆ ರಚನೆಯಾದ ಅಲ್ಪಕಾಲದ ಚರಣಸಿಂಗ್, ಐ. ಕೆ. ಗುಜ್ರಾಲ್ ಆಡಳಿತ ಹೀಗೆ ಭಾರತದ ಸಂಸತ್‌ನಲ್ಲಿ ಯಾವ ಬದಲಾವಣೆಗಳು ಬಂದರೂ ಅದರ ಹಿಂದೆ ಕಾಂಗ್ರೆಸ್ ಮತ್ತು ಬಿಜೆಪಿ ನಿರ್ಣಾಯಕ ಶಕ್ತಿಗಳಾಗಿದ್ದವು. ವಿ. ಪಿ. ಸಿಂಗ್‌ರ ರಾಷ್ಟ್ರೀಯ ವೇದಿಕೆ ಸರಕಾರ ಎಪ್ಪತ್ತರ ಕೊನೆಯಲ್ಲಿ ಆಡಳಿತಮಾಡಿದ ಮೊರಾರ್ಜಿ ದೇಸಾಯಿಯವರ ಒಕ್ಕೂಟದ, ಕಾಂಗ್ರೆಸ್ ವಿರೋಧಿ ಬಣಗಳ ವಿಸ್ತೃತ ರೂಪವಾಗಿತ್ತು. ೧೯೯೮ರ ಸಾರ್ವತ್ರಿಕ ಚುನಾವಣೆ ಸಮಯಕ್ಕೆ ೧೮೨ ಸ್ಥಾನ ಪಡೆದ ಬಿಜೆಪಿ, ೧೪೭ ಸ್ಥಾನ ಪಡೆದ ಕಾಂಗ್ರೆಸ್ ಇತರೆ ಪಕ್ಷಗಳನ್ನು ಜೊತೆ ಸೇರಿಸಿಕೊಂಡು ಮೈತ್ರಿಕೂಟದ ಪ್ರಮುಖ ಆಟಗಾರರಾದರು. ಜಯಪ್ರಕಾಶ ನಾರಾಯಣರ ಕಾಂಗ್ರೆಸ್ ವಿರೋಧಿ ಚಳುವಳಿಯಲ್ಲಿ ಜನತಾ ಪಕ್ಷದ ಭಾಗವಾದ ಜನಸಂಘ (ನಂತರದ ಬಿಜೆಪಿ) ಗಾಂಧಿ ಹತ್ಯೆಯ ಶಾಪದಿಂದ ಮುಕ್ತವಾಯಿತು ಮಾತ್ರವಲ್ಲ ವ್ಯಾಪಕ ರಾಜಕೀಯ ಮಾನ್ಯತೆ ಪಡೆಯಿತು. ೧೯೮೪ರಲ್ಲಿ ಪಾರ್ಲಿಮೆಂಟ್‌ನಲ್ಲಿ ಕೇವಲ ಎರಡು ಸ್ಥಾನ ಪಡೆದಿದ್ದ ಬಿಜೆಪಿ ೧೯೮೯ರಲ್ಲಿ ವಿ. ಪಿ. ಸಿಂಗ್ ಅವರ ರಾಷ್ಟ್ರೀಯ ವೇದಿಕೆ ಜೊತೆ ಸೇರಿ ೮೬ ಸ್ಥಾನ ಪಡೆದು ಪ್ರಮುಖ ರಾಜಕೀಯ ಪಕ್ಷವಾಯಿತು. ಮುಂದೆ ಮಂಡಲ್ ವರದಿ, ೧೯೯೦ರಲ್ಲಿ ಗುಜರಾತದ ಸೋಮನಾಥ ಪುರದಿಂದ ಅಯೋಧ್ಯೆಯವರೆಗೆ ಹೊರಟ ರಥಯಾತ್ರೆಯ ನಾಯಕ ಅದ್ವಾನಿಯವರ ಬಂಧನಗಳನ್ನು ನೆಪವಾಗಿಟ್ಟುಕೊಂಡ ಬಿಜೆಪಿ ತನ್ನ ರಾಜಕೀಯ ವಿಸ್ತರಣೆಗೆ ಕಾರಣರಾದ ವಿ. ಪಿ. ಸಿಂಗ್ ಸರಕಾರವನ್ನು ಪತನ ಮಾಡಿ ಹೊರಬಂದಿತು. ಆ ಮೆಟ್ಟಲಿನಿಂದಲೇ ಬಾಬ್ರಿ ಮಸೀದಿ ಪತನ, ದೇಶದಾದ್ಯಂತ ಕೋಮು ಗಲಭೆ ನಡೆಸಿ, ಧರ್ಮಾಂಧತೆಯನ್ನೆ ಮಂತ್ರವಾಗಿಸಿಕೊಂಡು ೧೯೯೮ರ ಲೋಕಸಭಾ ಚುನಾವಣೆಯಲ್ಲಿ ೧೮೨ ಸ್ಥಾನ ಪಡೆದು ಎ.ಐ.ಡಿ.ಎಂ.ಕೆ., ತೆಲಗುದೇಶಂ, ತೃಣಮೂಲ ಕಾಂಗ್ರೆಸ್ ಬೆಂಬಲ ಪಡೆದು ಅಟಲ್ ಬಿಹಾರಿ ವಾಜಪೇಯಿಯವರ ನಾಯಕತ್ವದಲ್ಲಿ ಸರಕಾರ ರಚಿಸಿತು. ಅಲ್ಲಿಯವರೆಗೆ ಬೇರೆ ಪಕ್ಷಗಳ ನಾಯಕತ್ವದಲ್ಲಿ ಪಾಲುದಾರನಾದ ಬಿಜೆಪಿ ತನ್ನ ನಾಯಕತ್ವದಲ್ಲಿ ಎನ್.ಡಿ.ಎ. ಕೂಟ ರಚಿಸಿತು. ಇದೇ ಸಂದರ್ಭದಲ್ಲಿ ಗುಜರಾತದಲ್ಲಿ ಬಿಜೆಪಿ ಅಧಿಕಾರಕ್ಕೆ ಬಂದು ನರೇಂದ್ರ ಮೋದಿಯವರು ಮುಖ್ಯಮಂತ್ರಿಯಾದರು.

ವಾಜಪೇಯಿಯವರು ಪ್ರಧಾನಿಯಾದ ಸಂದರ್ಭದಲ್ಲಿ ಆರ್.ಎಸ್.ಎಸ್, ವಿಶ್ವ ಹಿಂದೂ ಪರಿಷತ್, ಬಜರಂಗ ದಳದಂಥ ಸಂಘಟನೆಗಳು ಬಹಿರಂಗವಾಗಿ, ಆಂತರಿಕವಾಗಿ ಆಡಳಿತ ದುರುಪಯೋಗಪಡಿಸಿಕೊಂಡು ಕ್ರಿಯಾಶೀಲ ವಾದವು. ಬಹಿರಂಗವಾಗಿ ಕೋಮುಗಲಭೆಗಳನ್ನು ಹೆಚ್ಚಿಸುತ್ತ, ಧರ್ಮಕೇಂದ್ರಿತ ರಾಜಕಾರಣವನ್ನು ಬಲಪಡಿಸಿದವು. ವಾಜಪೇಯಿಯವರ ಸಂಪುಟದಲ್ಲಿ ಎಚ್.ಆರ್.ಡಿ. ಮಂತ್ರಿಯಾಗಿದ್ದ ಮುರಳಿಮನೋಹರ ಜೋಷಿಯವರು ಇಡೀ ಶಿಕ್ಷಣ ವ್ಯವಸ್ಥೆಯನ್ನೇ ಕೇಸರಿಕರಣಗೊಳಿಸಿದರು. ಹೀಗೇ ಇತರ ಇಲಾಖೆಗಳ ಆಡಳಿತ ಯಂತ್ರದ ಆಯಕಟ್ಟಿನ ಸ್ಥಳಗಳಲ್ಲಿ ಮತೀಯವಾದಿಗಳನ್ನು ತುಂಬಿದರು. ಅದೇ ಸಂದರ್ಭದಲ್ಲಿ ಸಂಸತ್ತಿನ ಕೇಂದ್ರ ಸಭಾಂಗಣದಲ್ಲಿದ್ದ ಗಾಂಧಿ ಭಾವಚಿತ್ರದ ಎದುರುಗಡೆಯೇ ಗಾಂಧಿ ಹತ್ಯೆಯ ಸಂಚುಗಾರ ಎಂಬ ಆರೋಪ ಹೊತ್ತಿದ್ದ ವಿ.ಡಿ. ಸಾವರಕರ ಅವರ ಭಾವಚಿತ್ರ ಅನಾವರಣ ಮಾಡಲಾಯಿತು. ಸಭ್ಯ ಪ್ರಧಾನಿ ವಾಜಪೇಯಿಯವರು ವಿರೋಧ ಪಕ್ಷಗಳ ತೀವ್ರವಾದ ವಿರೋಧವನ್ನು ಕಡೆಗಣಿಸಿದರು. ಅಂದು ಸಾವರಕರ ಅವರ ಭಾವಚಿತ್ರದ ಅನಾವರಣ ಭಾರತದ ಸಂಸತ್ತಿನ ಭವಿಷ್ಯವನ್ನು ಸಾಂಕೇತಿಕವಾಗಿ ಹೇಳಿತ್ತು. ದೇಶದಾದ್ಯಂತ ಧಾರ್ಮಿಕ ಭಾವನೆಗಳನ್ನು ಕೆರಳಿಸುತ್ತಲೇ ಗುಜರಾತ

ಹತ್ಯಾಕಾಂಡ ನಡೆಯಿತು. ಇವೆಲ್ಲ ಬಿಜೆಪಿ ತಾನು ಇಲ್ಲಿಯವರೆಗೆ ಪಡೆದ ರಾಜಕೀಯ ಶಕ್ತಿಯನ್ನು ಉಳಿಸುವ ಮತ್ತು ಬೆಳೆಸುವ ಭಾಗವಾಗಿ ನಡೆದವು. ಆದರೂ 'ಭಾರತ ಪ್ರಕಾಶಿಸುತ್ತಿದೆ' ಎಂದು ಘೋಷಿಸಿದ ವಾಜಪೇಯಿಯವರ ಸರಕಾರ ಗುಜರಾತ ಹತ್ಯಾಕಾಂಡ, ತೆಹಲ್ಕಾ, ಯು.ಟಿ.ಐ.ದಂಥ ಹಗರಣಗಳ ಸುಳಿಯಲ್ಲಿ ಸಿಕ್ಕಿ, ವಿರೋಧ ಪಕ್ಷಗಳ ಐಕ್ಯತೆಯ ಪರಿಣಾಮದಿಂದ ೨೦೦೪ರ ಸಾರ್ವತ್ರಿಕ ಚುನಾವಣೆಯಲ್ಲಿ ಪತನವಾಯಿತು. ಆದರೆ ಈ ಅವಧಿಯಲ್ಲಿ ತನ್ನ ರಾಜಕೀಯ, ಸಂಘಟನಾಶಕ್ತಿಯನ್ನು ಬೆಳೆಸಿಕೊಂಡಿತ್ತು.

೨೦೦೪ರ ಸಾರ್ವತ್ರಿಕ ಚುನಾವಣೆಯಲ್ಲಿ ೧೪೫ ಸ್ಥಾನ ಪಡೆದ ಕಾಂಗ್ರೆಸ್, ಎಡ ಹಾಗೂ ಜಾತ್ಯತೀತ, ಪ್ರಾದೇಶಿಕ ಪಕ್ಷಗಳ ಬೆಂಬಲ ಪಡೆದು ಯು.ಪಿ.ಎ. ಮೈತ್ರಿಕೂಟದ ಅಡಿ ಸರಕಾರ ರಚಿಸಿತು. ಪ್ರಧಾನಿ ಸ್ಥಾನವನ್ನು ಸೋನಿಯಾ ಗಾಂಧಿ ವಹಿಸಿಕೊಳ್ಳಬೇಕೆಂದಾಗ ಬಿಜೆಪಿ ತನ್ನ ಸಂಘ ಪರಿವಾರದ ಜೊತೆ ಸೇರಿ ಗಲಭೆಗಳನ್ನು ನಡೆಸಿತು. ಸೋನಿಯಾ ವಿದೇಶಿ ಎಂದು ಘೋಷಿಸಿತು. ಸುಷ್ಮಾ ಸ್ವರಾಜ್‌ರಂಥ ಮುಂಚೂಣಿ ನಾಯಕಿ 'ಸೋನಿಯಾ ಪ್ರಧಾನಿಯಾದರೆ ನಾನು ತಲೆ ಬೋಳಿಸಿಕೊಳ್ಳುತ್ತೇನೆ' ಎಂದರು. ದೇಶದಾದ್ಯಂತ ಗೊಂದಲ ಉಂಟುಮಾಡಿದರು. ಅಂತಿಮವಾಗಿ ಮನಮೋಹನ ಸಿಂಗ್ ಪ್ರಧಾನಿಯಾದರು. ಮನಮೋಹನ ಸಿಂಗ್ ಅವರ ಮೊದಲ ಅವಧಿಯ ಆಡಳಿತ ಸರಿಯಾಗಿಯೇ ಇತ್ತು. ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ, ಮಾಹಿತಿ ಹಕ್ಕು, ಶಿಕ್ಷಣದ ಹಕ್ಕು, ಇಂಥ ಹಲವಾರು ಜನಪರ ಕಾನೂನುಗಳನ್ನು ಜಾರಿಗೆ ತಂದರು. ಕಮ್ಯುನಿಸ್ಟ್ ಪಕ್ಷಗಳು ಬಾಹ್ಯ ಬೆಂಬಲದೊಂದಿಗೆ ಇಂಥ ಕಾನೂನುಗಳ ಜಾರಿಗೆ ಕಾರಣರಾದರು. ಮನಮೋಹನ ಸಿಂಗ್ ಮೂಲತಃ ಬಲಪಂಥೀಯ ಆರ್ಥಿಕ ತಜ್ಞ, ೧೯೯೦ರಲ್ಲಿ ಅಂದಿನ ಪ್ರಧಾನಿ ನರಸಿಂಹರಾವ್ ಆಡಳಿತದಲ್ಲಿ ಅರ್ಥಮಂತ್ರಿಯಾಗಿದ್ದ ಇವರು ದೇಶದ ಸ್ವಾವಲಂಬನೆಯನ್ನು ನಾಶ ಮಾಡುತ್ತಿರುವ ಉದಾರವಾದಿ ನೀತಿಗಳ ಜಾರಿಗೆ ಕಾರಣರಾದವರು. ಎಡಪಕ್ಷಗಳ ಬೆಂಬಲವನ್ನು ಅನಿವಾರ್ಯವಾಗಿ ಒಪ್ಪಿಕೊಂಡವರು. ಅಮೆರಿಕದ ಒತ್ತಡಕ್ಕೆ ಮಣಿದು ಪರಮಾಣು ಒಪ್ಪಂದದ ವಿಷಯದಲ್ಲಿ ಎಡಪಕ್ಷಗಳು ದೂರವಾಗುವಂತೆ ಮಾಡಿದರು. ಮುಂದಿನ ಚುನಾವಣೆಯಲ್ಲಿ ಮೊದಲ ಅವಧಿಯ ಆಡಳಿತದ ಪರಿಣಾಮವಾಗಿ ಯು.ಪಿ.ಎ. ಸರಕಾರ ಪುನರಾಯ್ಕೆ ಆಯಿತು. ಆದರೆ ಕಮ್ಯುನಿಸ್ಟ್ ಪಕ್ಷಗಳು ಜೊತೆಗಿಲ್ಲದ ಎರಡನೆ ಅವಧಿಯ (ಯು.ಪಿ.ಎ. ೨) ಸರಕಾರ ಭ್ರಷ್ಟಾಚಾರಗಳಿಂದ, ಹಗರಣಗಳಿಂದ ಜನಬೆಂಬಲ ಕಳೆದುಕೊಂಡಿತು.

ಗುಜರಾತ್‌ನಲ್ಲಿ ಮುಖ್ಯಮಂತ್ರಿಯಾಗಿದ್ದ ಮೋದಿಯವರು ಗುಜರಾತ್ ಹತ್ಯಾಕಾಂಡದಿಂದ ಕುಖ್ಯಾತ ರಾಗಿದ್ದರೂ ಕಾರ್ಪೊರೇಟ್ ಕಂಪನಿಗಳ ಪಾಲಿಗೆ ಮುದ್ದಿನ ನಾಯಕರಾಗಿದ್ದರು. ಗುಜರಾತ್ ಜನತೆಯನ್ನು ಇಸ್ಲಾಂ, ಪಾಕಿಸ್ತಾನ ಕಡೆ ನೋಡುವಂತೆ ಮಾಡಿ ರಾಜ್ಯವನ್ನು ಕಾರ್ಪೊರೇಟ್ ಕಂಪನಿಗಳ ಹಿಡಿತಕ್ಕೆ ಒಪ್ಪಿಸಿದ್ದರು. ಇಂಥ ನಾಯಕತ್ವವನ್ನು ಕಾರ್ಪೊರೇಟ್ ವಲಯ ಹಾಗೂ ಆರ್.ಎಸ್.ಎಸ್. ಏಕಕಾಲಕ್ಕೆ ಒಪ್ಪಿಕೊಂಡವು. ಕಾರ್ಪೊರೇಟ್ ಮಾಧ್ಯಮಗಳು ರಾತ್ರೋ ರಾತ್ರಿ ನರೇಂದ್ರ ಮೋದಿಯವರನ್ನು ಕೊಂಡಾಡತೊಡಗಿದವು. ಗುಜರಾತ್ ಹತ್ಯಾಕಾಂಡ ನೋಡಿ ರೋಮಾಂಚನಗೊಂಡಿದ್ದ ಬಿ.ಜೆ.ಪಿ. ಮತ್ತು ಸಂಘ ಪರಿವಾರ ಮೋದಿಯವರ ಗುಜರಾತ ಮಾದರಿ ದೇಶಕ್ಕೆ ಬೇಕು ಎಂದು ತೀರ್ಮಾನಿಸಿದರು. ಕಾಂಗ್ರೆಸ್ ನಾಯಕತ್ವದ ಯು.ಪಿ.ಎ. ಸರಕಾರದ ಹಗರಣ, ನಿಷ್ಕ್ರಿಯತೆಯಿಂದ ಬೇಸತ್ತ ಜನತೆ ಮಾಧ್ಯಮಗಳ ಮತ್ತು ಬಿ.ಜೆ.ಪಿ.ಯ ಕೋಮುವಾದಿ ನೀತಿಗಳ ಪ್ರಭಾವದಿಂದ ಮುಂದಿನ ಚುನಾವಣೆಯಲ್ಲಿ ಎನ್.ಡಿ.ಎ.ಗೆ ಅದರಲ್ಲೂ ಬಿ.ಜೆ.ಪಿ.ಗೆ ಬಹುಮತ ಕೊಟ್ಟರು. ಗುಜರಾತ ಮಾದರಿ ಎಂದರೆ ಪ್ರತಿಗಾಮಿತನ ಮತ್ತು ಕಾರ್ಪೊರೇಟ್ ಗುಲಾಮಿತನ ಎಂದೇ ಅರ್ಥ. ೨೦೦೫ರಲ್ಲಿ ಗುಜರಾತ ಹತ್ಯಾಕಾಂಡ ನಡೆದಾಗ ಮುಖ್ಯಮಂತ್ರಿ ನರೇಂದ್ರ ಮೋದಿ ಅವರಿಗೆ ಅಮೇರಿಕ ಮತ್ತು ಇಂಗ್ಲೆಂಡ್‌ಗಳು ವೀಸಾ ನಿರಾಕರಿಸಿದ್ದವು. ಆದರೆ ಅವರು ಪ್ರಧಾನಿಯಾದ ಮೇಲೆ, ಅವರಿಗೆ ಕೆಂಪು ಕಾರ್ಪೆಟ್ ಸ್ವಾಗತ ಕೊಟ್ಟವು. ಕಾರಣ ಅವರು ಕಾರ್ಪೊರೇಟ್ ಕಂಪನಿಗಳ ನಮ್ರ ಸೇವಕ ಎನ್ನುವುದು ಅವರಿಗೂ ಮನವರಿಕೆಯಾಗಿತ್ತು.

ಪ್ರಧಾನಿಯಾಗಿ ಮೋದಿಯವರು ಮಾಡಿದ ಸಾಧನೆ ಕುರಿತು ಸಾಕಷ್ಟು ಚರ್ಚೆಯಾಗಿದೆ. ಬಿ.ಜೆ.ಪಿ. ತನ್ನ ಬಲವನ್ನು ಹೆಚ್ಚಿಸಿಕೊಂಡ ವಿಶೇಷ ಸಂದರ್ಭಗಳನ್ನು ಗಮನಿಸಿದರೆ ಅದರ ಬಣ್ಣ ತಿಳಿಯುತ್ತದೆ. ಅಡ್ವಾನಿಯವರ ರಥಯಾತ್ರೆ, ಮಂಡಲ್ ವರದಿ, ಬಾಬ್ರಿ ಮಸೀದಿ, ಮತಾಂತರ ವಿವಾದಗಳು, ರಾಮ ಜನ್ಮಭೂಮಿ, ಕಾರ್ಗಿಲ್, ಪುಲ್ವಾಮಾ, ಬಾಲಾಕೋಟ್, ಪಾಕಿಸ್ತಾನ, ಇಸ್ಲಾಂ, ಗೋಮಾಂಸ ಈ ವಿಷಯಗಳ ಕುರಿತೇ ಅವರ ಪ್ರಚಾರಗಳಿರು ತ್ತವೆಯೋ ಹೊರತು, ಬಡತನ, ನಿರುದ್ಯೋಗ, ಹಸಿವು, ಭ್ರಷ್ಟಾಚಾರ, ಕಾರ್ಮಿಕ ಸಮಸ್ಯೆ, ಬರಗಾಲ, ರೈತರ ಆತ್ಮಹತ್ಯೆ, ಮಹಿಳೆಯರ ಮೇಲಿನ ಅತ್ಯಾಚಾರ, ದಲಿತರ ಮೇಲಿನ ಹಲ್ಲೆ ಇವು ಯಾವುವೂ ಅವರ ಆದ್ಯತೆಯ ವಿಷಯಗಳಲ್ಲ. ಇಂಥ ಪಕ್ಷ ಅದರ ಆಡಳಿತಾತ್ಮಕ ವೈಫಲ್ಯದೊಂದಿಗೂ ಮತ್ತೆ ಅತಿ ಹೆಚ್ಚು ಬಲದಿಂದ ಆಯ್ಕೆಯಾಗು ತ್ತದೆಂದರೆ ಅದರ ಪ್ರತಿಗಾಮಿತನದ ನೀತಿಯ ವೈಭವೀಕರಣ ಮತ್ತು ಕಾರ್ಪೊರೇಟ್ ಕಂಪನಿಗಳ ಕಾವಲುಗಾರು ತನದ ನೀತಿ ಕಾರಣ. ಇಂಥ ಪಕ್ಷವನ್ನು ಎದುರಿಸಲು ರಾಜಕೀಯವಾಗಿ, ಸಂಘಟನಾತ್ಮಕವಾಗಿ, ತಾತ್ವಿಕವಾಗಿ ಬಲವಾದ ವಿರೋಧ ಪಕ್ಷ ಬೇಕು. ಆದರೆ ಅಖಿಲಭಾರತ ಮಟ್ಟದಲ್ಲಿ ಅಂಥ ಪರ್ಯಾಯ ಇಂದು ಕಾಣುತ್ತಿಲ್ಲ.

ದೇಶದಲ್ಲಿ ಜನಾಂಗೀಯ ವಿಂಗಡನೆ ಮಾಡುವಲ್ಲಿ ಬಿ.ಜೆ.ಪಿ. ಯಶಸ್ವಿಯಾಗಿದೆ. ಇದು ಬರುವ ದಿನಗಳಲ್ಲಿ ದೇಶದ ಏಕತೆಗೂ ಅಪಾಯಕಾರಿಯಾಗಿದೆ. ಕೇಂದ್ರ ಸರಕಾರದ ವ್ಯಾಪ್ತಿಯಲ್ಲಿ ಮತ್ತು ಬಿ.ಜೆ.ಪಿ. ಅಧಿಕಾರದಲ್ಲಿರುವ ರಾಜ್ಯಗಳಲ್ಲಿ ಶಿಕ್ಷಣದ ಕೇಸರೀಕರಣವಾಗಿದೆ. ಪರಿಣಾಮವಾಗಿ ಯುವಜನತೆಯ ಮನಸುಗಳನ್ನು ಕಲುಷಿತ ಗೊಳಿಸಲಾಗಿದೆ. ಆ ಕಾರಣಕ್ಕೆ ಕಳೆದ ಬಾರಿಯ ಬಿ.ಜೆ.ಪಿ. ಸರಕಾರದ ವೈಫಲ್ಯಗಳು ಅವರಿಗೆ ಕಾಣಿಸುತ್ತಿಲ್ಲ. ಇನ್ನು ಸಾಮಾಜಿಕವಾಗಿ ಸಂಘ ಪರಿವಾರ ತನ್ನ ಕಾರ್ಯಸೂಚಿಯೊಂದಿಗೆ ಸಕ್ರಿಯವಾಗಿದೆ. ಮಾಧ್ಯಮಗಳು ಸ್ವತಂತ್ರ





**■ ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಅನಸೂಯ ಕಾಂಬಳೆ
ಎಂ. ಡಿ. ಒಕ್ಕುಂದ
ಎಚ್. ಎಸ್. ಗೋಪಾಲ ರಾವ್
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಜಿ. ನಾಗಕುಮಾರ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬಿ. ಪೀರ ಬಾಷಾ
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮುರಳಿಧರ್
ಎಸ್. ಮಂಜುನಾಥ
ಎಸ್. ಎಸ್. ರೇಣುಕಾರಾಧ್ಯ
ವಿಜಯಾ
ಶಿವಗಂಗ ರುಮ್ಮ
ಬಿ. ಶ್ರೀನಿವಾಸ ಕಕ್ಕಿಲ್ಲಾಯ
ಎಲ್. ಹನುಮಂತಯ್ಯ

**■ ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೫/- |
| ವಾರ್ಷಿಕ ಚಂದಾ | ₹ ೩೦೦/- |
| ಮೂರು ವರ್ಷಕ್ಕೆ | ₹ ೬೦೦/- |

**■ ನವಕರ್ನಾಟಕ ಶಾಖೆಗಳು**

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಆಗಿರದೇ ಕಾರ್ಪೊರೇಟ್ ಕಂಪನಿಗಳ ಒಂದು ವಿಭಾಗ (ಡಿಪಾರ್ಟ್‌ಮೆಂಟ್) ಆಗಿ ಪರಿವರ್ತನೆಗೊಂಡಿವೆ. ಇದನ್ನೆದುರಿಸಲು ಪ್ರತಿಗಾಮಿ ಬಲಪಂಥೀಯ ನೀತಿಯನ್ನು ಒಪ್ಪದ ರಾಜಕೀಯ ಶಕ್ತಿ ದೇಶದಲ್ಲಿ ಬಲಗೊಳ್ಳಬೇಕು. ಕಾಂಗ್ರೆಸ್ ಆರ್ಥಿಕವಾಗಿ ಇಂದು ಒಂದು ಬಲಪಂಥೀಯ ರಾಜಕೀಯ ಪಕ್ಷ. ಜಾಗತೀಕರಣದ ನೀತಿಯನ್ನು ಜಾರಿಗೆ ತಂದ ಅದು ಕಾರ್ಪೊರೇಟ್ ವಲಯವನ್ನು ವಿರೋಧಿಸುವುದಿಲ್ಲ. ಧಾರ್ಮಿಕ ವಿಷಯದಲ್ಲಿ ಅದರದೂ ಸೌಮ್ಯ ಹಿಂದುತ್ವ, ಸಂಘಟನಾತ್ಮಕವಾಗಿ ನೆಲೆ ಕಳೆದುಕೊಳ್ಳುತ್ತಿದೆ. ಭ್ರಷ್ಟಾಚಾರದಲ್ಲಿ ಆ ಪಕ್ಷವೇನೂ ಹಿಂದೆ ಬಿದ್ದಿಲ್ಲ. ನಾಯಕತ್ವದ ಕೊರತೆಯಿಂದ ಬಳಲುತ್ತಿದೆ. ಕಾಂಗ್ರೆಸ್ ಜೊತೆಗಿರುವ ಮತ್ತು ಬಿ.ಜೆ.ಪಿ.ಯನ್ನು ವಿರೋಧಿಸುವ ಪ್ರಾದೇಶಿಕ ಪಕ್ಷಗಳು ಸಮಯ ಸಾಧಕತನ, ಅವಕಾಶವಾದ, ಕುಟುಂಬ ರಾಜಕಾರಣ, ಭ್ರಷ್ಟಾಚಾರದಿಂದಾಗಿ ಪರ್ಯಾಯವಾಗುವ ಶಕ್ತಿಯನ್ನು ಕಳೆದುಕೊಂಡಿವೆ ಮತ್ತು ಇದ್ದ ಪ್ರಭಾವವೂ ಕೇವಲ ಒಂದು ಪ್ರದೇಶಕ್ಕೆ ಸೀಮಿತವಾಗಿದೆ. ಇದರಾಚೆಗೂ ಪ್ರಾದೇಶಿಕ ಪಕ್ಷಗಳ ನಾಯಕರ ಮಹತ್ವಾಕಾಂಕ್ಷೆಯಿಂದಾಗಿ ಬಿಜೆಪಿ ವಿರೋಧಿಗಳ ಐಕ್ಯತೆ ಅಸಾಧ್ಯವಾಗಿದೆ. ಎಡಪಕ್ಷಗಳು ಪರ್ಯಾಯ ನೀತಿ, ತಾತ್ವಿಕತೆ, ಜನಪರ ಸಿದ್ಧಾಂತ ಇದ್ದರೂ ದೇಶದ ಜನಪ್ರತಿನಿಧಿ ವೇದಿಕೆಗಳಲ್ಲಿ ತಮ್ಮ ಶಕ್ತಿಯನ್ನು ನಗಣ್ಯ ಎನ್ನುವಷ್ಟು ಕಳೆದುಕೊಂಡಿವೆ. ದೇಶದಲ್ಲಿ ಛಿದ್ರಗೊಂಡಿರುವ ಎಡಪಕ್ಷಗಳು ಒಂದಾಗದಿದ್ದರೆ ಮುಂದೆ ಅಸ್ತಿತ್ವಕ್ಕಾಗಿ ಪರದಾಡಬೇಕಾಗುತ್ತದೆ. ೧೯೬೪ರಿಂದ ಆರಂಭವಾದ ಎಡಪಕ್ಷಗಳ ವಿಘಟನೆ ಯಾರು ಕ್ರಾಂತಿಕಾರಿ ಎಂಬುದನ್ನು ಸಾಬೀತುಪಡಿಸಲು. ಆದರೆ ಇಂದು ಪ್ರತಿಗಾಮಿ ಬಲಪಂಥೀಯ ಸರಕಾರ ಬಂದಿರುವುದರಿಂದ ಅದರ ಮೊದಲ ಗುರಿ ಎಡಪಂಥವನ್ನು ನಿರ್ನಾಮ ಮಾಡುವುದಾಗಿದೆ. ಎಡಪಕ್ಷಗಳು ಒಂದಾಗುವ ಅನಿವಾರ್ಯತೆ ಎಂದಿಗಿಂತ ಇಂದು ಹೆಚ್ಚಾಗಿದೆ. ದೇಶದಲ್ಲಿ ಪ್ರಭುತ್ವದ ಜನವಿರೋಧಿ ನೀತಿಗಳ ವಿರುದ್ಧ ಕೋಟ್ಯಂತರ ಜನರನ್ನು ಬೀದಿಗಿಳಿಸುವ ಶಕ್ತಿ ಇಂದಿಗೂ ಎಡಪಕ್ಷಗಳಿಗೆ, ಸಂಘಟನೆಗಳಿಗಿದೆ. ಆದರೆ ತಮ್ಮ ಹಿಂದಿರುವ ಜನಸಮೂಹಕ್ಕೆ ರಾಜಕೀಯ ಹೇಳಿಕೊಡುವಲ್ಲಿ ಅವು ಸೋತಿವೆ.

ದೇಶದ ಎಡ, ಪ್ರಜಾಸತ್ತಾತ್ಮಕ, ಜಾತ್ಯತೀತ ಶಕ್ತಿಗಳಿಗೆ ಸಂಸತ್ತಿನಲ್ಲಿ ಬಲ ಕಡಿಮೆಯಾಗಿರಬಹುದು, ಆದರೆ ಬೀದಿಗಳ ಮೂಲಕ ಜನರ ಪರವಾಗಿ ಸಂಸತ್ತನ್ನು ನಿಯಂತ್ರಿಸುವ ಶಕ್ತಿಯನ್ನು ಅವು ಪಡೆಯಬೇಕು. ಆ ಕೆಲಸವನ್ನು ಸಮರ್ಥವಾಗಿ ಮಾಡಿದರೆ ಮುಂದಿನ ದಿನಗಳಲ್ಲಿ ಖಂಡಿತ ಸಂಸತ್ತನ್ನು ದೇಶದ ಜನತೆಯ ನಿಜಾರ್ಥದ ಸಂಸತ್ತನ್ನಾಗಿ ಮಾಡಬಹುದು.

[signature]

---

*(೩ನೇ ಪುಟದಿಂದ ಈ ತಿಂಗಳು)*

ಬೆಳವಣಿಗೆಗಳಿಂದ ಸುಗ್ಗಿಯೋ ಸುಗ್ಗಿ. ಸಿದ್ದರಾಮಯ್ಯ, ವಿಶ್ವನಾಥ, ದೇವೇಗೌಡ, ಕುಮಾರಸ್ವಾಮಿ ಹಾಗೂ ಇತರ ನಾಯಕರುಗಳ ಗುದ್ದಾಟ ನೋಡುವುದು ಕರ್ನಾಟಕದ ಜನರ ಪಾಡು.

* * *

ಕೇಂದ್ರದಲ್ಲಿ ಮತ್ತೆ ಮೋದಿ ಸರಕಾರ ಅಸ್ತಿತ್ವಕ್ಕೆ ಬಂದಿದೆ. ಸಚಿವರುಗಳು ನೇಮಕಗೊಂಡು ತಮ್ಮ ಖಾತೆಗಳಲ್ಲಿ ಅಧಿಕಾರಾರೂಢರಾಗಿದ್ದಾರೆ. ಸಾಕಷ್ಟು ಹೊಸ ಮುಖಗಳು ಸಚಿವ ಸಂಪುಟದಲ್ಲೂ ಲೋಕಸಭೆಯಲ್ಲೂ ಕಾಣುತ್ತಿವೆ. ವಿದೇಶೀ ಪ್ರವಾಸವನ್ನೂ ಮುಗಿಸಿಬಂದಿರುವ ಪ್ರಧಾನಿ ಮೋದಿ ಲೋಕಸಭೆಯ ಅಧಿವೇಶನವನ್ನು ಪ್ರಾರಂಭ ಮಾಡಿದ್ದಾರೆ. ಪ್ರತಿ ಪಕ್ಷದ ಮಾನ್ಯತೆ ಪಡೆಯುವ ಹಕ್ಕು ಯಾವ ಪಕ್ಷಕ್ಕೂ ಲಭ್ಯವಾಗಿಲ್ಲ. ಭಾಜಪದ ಹಿರಿಯ ನಾಯಕರುಗಳು ಮೂಲೆಗುಂಪಾಗಿದ್ದಾರೆ. ನೂತನ ಅರ್ಥಮಂತ್ರಿ ಪದವಿ ನಿರ್ಮಲಾ ಸೀತಾರಾಮನ್ ಗಿಟ್ಟಿಸಿಕೊಂಡರೆ, ಮಾಜಿ ವಿದೇಶಾಂಗ ಕಾರ್ಯದರ್ಶಿ ಜೈಶಂಕರ್ ವಿದೇಶಿ ಸಚಿವರಾಗಿ ನೇಮಕಗೊಂಡಿದ್ದಾರೆ. ಎಲ್ಲ ಮೋದಿ – ಷಾ ಜೋಡಿ ಹೇಳಿದಂತೆ ಕೇಳುವವರೇ. ಹಳಬರ ಪೈಕಿ ಉಳಿದಿರುವವರು ರಾಜನಾಥ್‌ಸಿಂಗ್ ಒಬ್ಬರೆ. ಸಂಪುಟದ ಉಪಸಮಿತಿಗಳನ್ನು ನೇಮಕ ಮಾಡಿದಾಗ ಅವರ ಹೆಸರು ಬಿಟ್ಟುಹೋಗಿತ್ತು. ಅದು ಬೇಕಂತಲೇ ಮೂಲೆಗೊತ್ತುವ ಪ್ರಯತ್ನ. ಅಚಾತುರ್ಯದಿಂದ, ಮರೆತುಹೋಗಿದ್ದರಿಂದ ಹಾಗಾಯಿತು ಎಂಬ ಸಬೂಬು ಯಾರನ್ನೂ ಮೆಚ್ಚಿಸದು. ಅಂತೂ ಮೋದಿ – ಷಾ ಜೋಡಿಯ ಕರಾಮತ್ತು ಜೋರಾಗಿಯೇ ಇದೆ. ಈಗಾಗಲೇ ಕಾರ್ಮಿಕ ಕಾಯಿದೆಗೆ ತಿದ್ದುಪಡಿಯಾಗುವ ಸೂಚನೆ ಬಂದಿದೆ. ಇರುವ ಹಲವು ಕಾನೂನುಗಳಿಗೆ ಪ್ರತಿಯಾಗಿ ಮೂರು–ನಾಲ್ಕು ಕಾನೂನುಗಳನ್ನು ತರಲು ಸರಕಾರ ಸಿದ್ಧತೆ ನಡೆಸಿದೆ. ಇದು ಕಾರ್ಪೊರೇಟ್ ವಲಯಕ್ಕೆ ಅನುಕೂಲ ಮಾಡಿಕೊಡುವುದಕ್ಕೆ ನಡೆಸಿರುವ ಕಸರತ್ತು. ಕಾರ್ಮಿಕರ ಪರವಂತೂ ಆಗಿರದು ಎನ್ನುವುದನ್ನು ಈಗಲೇ ಹೇಳಬಹುದು. ಇನ್ನು ಹೊಸ ಆರ್ಥಿಕ ನೀತಿ ಹೇಗಿರುವುದೆಂಬುದನ್ನು ನೋಡಬೇಕಾಗಿದೆ. ಜುಲೈ ಮೊದಲ ವಾರದಲ್ಲೇ ಹೊಸ ಬಜೆಟ್ ಮಂಡನೆಯಾಗಲಿದೆ. ದುರ್ಬಲ, ಒಡೆದು ಚೂರಾಗಿರುವ ಪ್ರತಿಪಕ್ಷಗಳು ಮೋದಿ ಸರಕಾರಕ್ಕೆ ಸವಾಲಾಗುವುದು ಕನಸಿನ ಮಾತು. ಸಂಖ್ಯಾಬಲವನ್ನು ಹೊಂದಿರುವ ಭಾಜಪದ ವರಸೆ ಈ ಬಾರಿ ಬೇರೆಯೇ ಆಗುವುದನ್ನು ನಿರೀಕ್ಷಿಸಬಹುದು.

* * *

ಹಣದುಪ್ಪಟ್ಟು ಮಾಡಲು ಹೋಗಿ ಕೈ ಸುಟ್ಟುಕೊಂಡವರು ಶಿವಾಜಿನಗರದ ಆಸುಪಾಸಿನಲ್ಲಿರುವ ಜನರಷ್ಟೇ ಮೊದಲಿಗರಲ್ಲ. ಇಂಥ ಪ್ರಕರಣಗಳು ಬಹಳ ಹಿಂದಿನಿಂದ ಬಂದಿರುವಂಥವು. ಹಸಿರೆಲೆಗಳಿಂದ ಬಂಗಾರ ತಯಾರಿಸುವ ಕೈಚಳಕವನ್ನು ನೆನಪು ಮಾಡಿಕೊಳ್ಳಬಹುದು. ಸ್ವಾತಂತ್ರ್ಯಪೂರ್ವದ ಕಾಲದಲ್ಲಿ ಬಿ. ಎನ್. ಗೋಪಾಲರಾವ್ ಎಂಬುವರು ದುಬಾರಿ ಬಡ್ಡಿ ನೀಡುವ ಆಮಿಷ ಒಡ್ಡಿ ಮೋಸ ಮಾಡಿ ದಿವಾಳಿಯಾದ್ದು ಒಂದು ರೋಚಕ ಕಥೆ. ಇವರ ಬಲೆಗೆ ಬಿದ್ದವರಲ್ಲಿ ನೊಬೆಲ್ ಪುರಸ್ಕೃತ ಸಿ. ವಿ. ರಾಮನ್ ಕೂಡ ಒಬ್ಬರು. "ನನಗೆ ನೊಬೆಲ್ ಪದಕ ದಕ್ಕಿತು, ಆದರೆ ಹಣ ಅವರಿಗೆ ಲಭಿಸಿತು" ಎಂಬುದಾಗಿ ಚಟಾಕಿ ಹಾರಿಸಿದ್ದರು ಎಂಬುದು ಒಂದು ರೋಚಕ ಇತಿಹಾಸ. ಈಗೆಲ್ಲ ಹಣ ಕಳೆದುಕೊಳ್ಳುವವರ ಸಂಖ್ಯೆಯೂ ಸಾವಿರಾರು, ಹಣವೂ ಸಾವಿರಾರು ಕೋಟಿಗೂ ಮೀರಿದ ವ್ಯವಹಾರ. ಕೆಲ ವರ್ಷಗಳ ಹಿಂದೆ ವಿನಿವಿಂಕ್ ಎಂಬ ಸಂಸ್ಥೆಯ ಮಾಲಿಕ ಶಾಸ್ತ್ರಿ ಎಂಬುವವ ಸಾವಿರಾರು ಜನರಿಗೆ ಪಂಗನಾಮ ಹಾಕಿದ್ದ. ಅವನೇನೋ ಜೈಲು ಪಾಲಾದ, ಕಳೆದುಕೊಂಡವರಿಗೆ ಮಾತ್ರ ಹಣ ದೊರೆಯಲಿಲ್ಲ. ಸಾಕಷ್ಟು ಸಂಖ್ಯೆಯಲ್ಲಿ ಬಡಜನರೇ ಇದ್ದರು. ಈಗ ಐಎಂಎ ಚಿನ್ನ ಬೆಳ್ಳಿ ವ್ಯಾಪಾರಿ ಶಿವಾಜಿನಗರದ ಮನ್ಸೂರ ಕಥೆಯೂ ಅದೇ. ಈತ ಈಗ ಪರಾರಿಯಾಗಿದ್ದಾನೆ ಏಕಾಏಕಿ. ಹಣ ಕಳೆದುಕೊಂಡವರೆಲ್ಲ ಹೆಚ್ಚಾಗಿ ಬಡಜನರೇ. ಇದುವರೆಗೆ ಪೊಲೀಸರು ೩೦ ಸಾವಿರಕ್ಕೂ ಹೆಚ್ಚು ದೂರು ದಾಖಲಿಸಿಕೊಂಡಿದ್ದಾರೆ. ಪತ್ರಿಕೆಗಳಲ್ಲಿ ಮಾಧ್ಯಮಗಳಲ್ಲಿ ವಾರಗಟ್ಟಲೇ ಇದೇ ಸುದ್ದಿ, ಗೋಳು ಕರೆಯ ದೃಶ್ಯಗಳು. ಅಂತೂ ಮೋಸ ಮಾಡುವವರೂ ಮೋಸ ಹೋಗುವವರೂ ಸಾರ್ವಕಾಲಿಕ.

* * *

ಮಹಾತ್ಮಾಗಾಂಧಿ ಕಗ್ಗೊಲೆಯಾದಾಗ ಆರೆಸ್ಸೆಸ್‌ನವರು ಲಾಡು ಹಂಚಿ ಸಂಭ್ರಮಿಸಿದ್ದನ್ನು ಕಣ್ಣಾರೆ ಕಂಡಿದ್ದೇನೆ. ಆಗಿನ್ನೂ ನಾನು ಕಾಲೇಜು ವಿದ್ಯಾರ್ಥಿ. ಈಗ ಗಾಂಧಿ ಕೊಲೆಗಾರ ನಾಥೂರಾಮ್ ಗೋಡ್ಸೆಗೆ ದೇವಾಲಯ ಕಟ್ಟುವ ಮಾತುಗಳನ್ನು ಕೇಳುತ್ತಿದ್ದೇವೆ. ಗೋಡ್ಸೆ ಆರಾಧಕಿ ಪ್ರಗ್ಯಾ ಸಿಂಗ್ ಠಾಕೂರ್ ಈಗ ಪಾರ್ಲಿಮೆಂಟ್ ಸದಸ್ಯೆ. ಹಾಗೆಯೇ ಡಾ॥ ಕಲಬುರ್ಗಿ, ಗೌರಿ ಲಂಕೇಶ್, ನರೇಂದ್ರ ದಾಭೋಲ್ಕರ್, ಗೋವಿಂದ ಪಾನ್ಸರೆ ಇವರುಗಳು ಕೊಲೆಯಾದಾಗ ಸಂಭ್ರಮಿಸಿದವರನ್ನೂ ನೋಡಿದ್ದೇವೆ. ಈಗ ಇತ್ತೀಚೆಗೆ ನಿಧನರಾದ ಜ್ಞಾನಪೀಠ ಪ್ರಶಸ್ತಿ ವಿಜೇತ ನಾಟಕಕಾರ ಗಿರೀಶ ಕಾರ್ನಾಡ ಅವರ ಸಾವನ್ನೂ ಸಂಭ್ರಮಿಸಿದವರ ವಿಕೃತರನ್ನೂ ನೋಡಿದ್ದೇವೆ. ಸಾಮಾಜಿಕ ಜಾಲತಾಣದಲ್ಲಿ ಕಂಡುಬಂದ ಕೆಲವು ನಿದರ್ಶನಗಳನ್ನು ಓದಿದರೆ ಅಸಹ್ಯಬರುತ್ತದೆ. ನಾವು ಶ್ರೇಷ್ಠರು ಎನಿಸಿಕೊಳ್ಳುವವರು ಮಾಡುವ, ಮಾಡುತ್ತಿರುವ ಪ್ರತಿಕ್ರಿಯಿಸುವ ರೀತಿ ತೀರಾ ಕೆಳಮಟ್ಟದ್ದಾಗಿದೆ.

ಒಂದೆರಡು ಉದಾಹರಣೆಗಳನ್ನು ನೋಡೋಣ : "ಸದಾ ಹಿಂದೂ ಧರ್ಮ, ಹಿಂದೂ ದೇವರು ಆಚರಣೆಗಳನ್ನು ನಿಂದಿಸಿ ಅವಹೇಳನ ಮಾಡುತ್ತಿದ್ದ ದುಷ್ಟನು ಅಂಗಾಂಗ ವೈಫಲ್ಯದಿಂದ ಸತ್ತುಹೋದ ಎಂದು ಗೊತ್ತಾಯಿತು. ಈ ದುಷ್ಟನ ಪ್ರೇತಾತ್ಮ ನೇರವಾಗಿ ನರಕಕ್ಕೆ ಹೋಗಿ ಪ್ರಕೃತಿ, ಸೂರ್ಯ,

ಚಂದ್ರ, ಗಾಳಿ, ಬೆಳಕು, ನೀರು ಇರುವತನಕ ನರಕದಲ್ಲಿ ನರಳಾಡುತ್ತಿರಲೆಂದು.... ದೇಶಭಕ್ತರಲ್ಲಿ ಪ್ರಾರ್ಥಿಸೋಣ." "ಇನ್ನೂ ಕೆಲವು ಅರ್ಬನ್ ನಕ್ಸಲರಿದ್ದಾರೆ, ಅವರನ್ನು ಇವನ ಜೊತೆ ಬೇಗ ಕರ್ಕೊಳ್ಳಪ್ಪ ಭಗವಂತ" "ನಗರ ನಕ್ಸಲನೆಂದು ಕುತ್ತಿಗೆಗೆ ಬೋರ್ಡು ನೇತು ಹಾಕಿಕೊಂಡು ಬಹಿರಂಗ ಬೆಂಬಲ ಸೂಚಿಸುವ ಬುದ್ಧಿಗೇಡಿ ಸಾವಿಗೆ ಯಾವೊಬ್ಬ ದೇಶಪ್ರೇಮಿಯೂ ಸಂತಾಪಪಡುವುದಿಲ್ಲ. ಅಂಥ ದೇಶ ಪ್ರೇಮಿಗಳಲ್ಲಿ ನಾನೂ ಒಬ್ಬ. ಲದ್ದಿ ಬುದ್ಧಿ ಜೀವಿಗಳಿಗೆ ಪ್ರಗತಿಪರರಿಗೆ ಅರ್ಪಣ" "ದುರಾತ್ಮಗಳಿಗೆ ಸಂಸ್ಕಾರ ಬೇಕಿಲ್ಲ. ನರಕಕ್ಕೆ ಹೋಗುವುದಕ್ಕೆ ವಿಧಿವಿಧಾನ ಬೇಕಿಲ್ಲ." ಇಷ್ಟು ಕ್ರೌರ್ಯವಾಗಿ ಪ್ರತಿಕ್ರಿಯಿಸಿರುವದು ಹೆಚ್ಚು ಮಂದಿ ವಿದ್ಯಾವಂತರೆ.

✶ ✶ ✶

ಕೇಂದ್ರದಲ್ಲಿ ಹಳೆಯ ಸರ್ಕಾರ ಹೊಸದಾಗಿ ಅಧಿಕಾರಕ್ಕೆ ಬಂದ ತರುವಾಯದಲ್ಲಿ ಶಿಕ್ಷಣ ನೀತಿಯನ್ನು ಪ್ರಕಟಿಸಿತು. ಚುನಾವಣೆಗೆ ಮೊದಲೇ ಅದು ಸಿದ್ಧವಾಗಿದ್ದು, ಭಾಗಶಃ ಪ್ರಚಾರಕ್ಕೆ ಬಂದಿದ್ದಿತು. ಚುನಾವಣೆಯ ಫಲಿತಾಂಶದ ಮೇಲೆ ಅಡ್ಡಪರಿಣಾಮ ಉಂಟಾಗಬಹುದೆಂಬ ಸಂಶಯದಿಂದಾಗಿ ನೀತಿಯ ಮಾತನ್ನು ಹಠಾತ್ತನೆ ನಿಲ್ಲಿಸಲಾಗಿತ್ತು. ಫಲಿತಾಂಶದ ಮೇಲೆ ಅದರಿಂದ ಯಾವ ಪರಿಣಾಮ – ದುಷ್ಪರಿಣಾಮವೂ ಸಾಧ್ಯವಿರಲಿಲ್ಲ. ಏಕೆಂದರೆ ಇಲೆಕ್ಟ್ರಾನಿಕ್ ವೋಟಿಂಗ್ ಮಶೀನುಗಳಿಗೆ ಸೂಕ್ತ ಬುದ್ಧಿ ಕಲಿಸುವ ಕೆಲಸ ಆಗಲೇ ಜಾರಿಗೆ ಬಂದಿತ್ತು. ಈಗ ಪ್ರಕಟವಾಗಿರುವ ಶಿಕ್ಷಣ ನೀತಿಯು ಎಷ್ಟು ಶ್ರೇಯಸ್ಕರವೆಂದು ಡಾ॥ ಕಸ್ತೂರಿರಂಗನ್ ವಿವರಿಸಿ ಹೇಳಿದ್ದಾರೆ. ಸಾಮಾನ್ಯವಾಗಿ ಚರ್ಚೆಗೆ ಬಂದಿರುವ ವಿಷಯ ಭಾಷೆಗಳಿಗೆ ಸಂಬಂಧಿಸಿದ್ದು, ಹಿಂದಿ ಭಾಷೆಗೆ ಕಿರೀಟ ತೊಡಿಸುವ ಹುನ್ನಾರಕ್ಕೆ ಸಂಬಂಧಿಸಿದ್ದು. ಅಷ್ಟೇ ಉಗ್ರವಾದ ಬೇರೆ ಸಲಹೆಗಳೂ ಇವೆ, ಆದರೆ ಅವಿನ್ನೂ ಮುನ್ನೆಲೆಗೆ ಬಂದಿಲ್ಲ. ಹಿಂದಿಯ ಪ್ರಶ್ನೆ ವ್ಯಾಪಕವಾಗಿ ಎತ್ತಲಾಯಿತಾದ್ದರಿಂದ ಸದ್ಯಕ್ಕೆ ಅದನ್ನು ಹೇರುವುದು ಆರೋಗ್ಯಕರವಲ್ಲವೆಂಬ ಕಾರಣಕ್ಕೆ ಅದನ್ನು ಚಾಪೆಯಡಿ ತೂರಿಸಿಡಲಾಗಿದೆ. ಕೇರಳದಿಂದ ಲೋಕಸಭೆಗೆ ಆಯ್ಕೆಯಾಗಿರುವ ಒಬ್ಬ ಕಾಂಗ್ರೆಸ್ ಧುರೀಣ ಪ್ರಮಾಣವಚನವನ್ನು ಹಿಂದಿಯಲ್ಲಿ ಓದಿ ಸ್ವೀಕರಿಸಿದನಂತೆ, ಕರ್ನಾಟಕದಿಂದ ಚುನಾಯಿತರಾಗಿ ಕೇಂದ್ರ ಸಚಿವರಾಗಿರುವವರು ಮತ್ತು ಆಗದೆ ನಿರಾಶರಾದವರಲ್ಲಿ ಕೆಲವರು ಹಿಂದಿ ರಾಷ್ಟ್ರೀಯ ಐಕ್ಯತೆಗೆ ವಜ್ರಲೇಪವೆಂಬಂತೆ ಹೇಳಿಕೆ ನೀಡಿದ್ದಾರೆ. ವಜ್ರಲೇಪವೋ ಚಳ್ಳೇಹಣ್ಣೋ ಎಂಬುದು ಯಾರಿಗೂ ಅರ್ಥವಾಗದ ವಿಚಾರವಲ್ಲ. ಕೆಲವು ದಿನಗಳು ಕಳೆಯಲಿ, ಮತ್ತೆ ಹಿಂದಿ ಹೇರಿಕೆ ಮಾಡಿದರಾಯಿತು, ಎಂಬ ಭಾವನೆಯಿಂದ ಸದ್ಯಕ್ಕೆ ಅದನ್ನು ಹಿಂಬದಿಗೆ ಸರಿಸಲಾಗಿದೆ. ವಾಜಪೇಯಿಯವರು ಪ್ರಧಾನಿ ಯಾಗಿದ್ದಾಗ ಹಿಂದಿ ಭಾಷಿಕ ಸಂಸದರ ತಂಡಗಳನ್ನು ಹತ್ತಾರು ವಿದೇಶಗಳಿಗೆ ಕಳಿಸಿ ಆ ದೇಶಗಳಲ್ಲಿ ನಮ್ಮ ರಾಯಭಾರ ಕಚೇರಿಗಳು ಹಿಂದಿಯನ್ನು ಎಷ್ಟು ಬಳಸುತ್ತಿವೆಯೆಂಬ ತನಿಖೆ ನಡೆಸಿದರು. ಅದಕ್ಕಾಗಿ ಒಂದಷ್ಟು ಕೋಟಿ ರೂಪಾಯಿಗಳನ್ನು ವ್ಯರ್ಥ ಮಾಡಿದರು. ಅಧಿಕಾರಕ್ಕೆ ಬಂದಿರುವ ಪಕ್ಷವು ಹಿಂದಿ ಹೇರಿಕೆಯ ಕಾರ್ಯಸೂಚಿಯನ್ನು ಕೈಬಿಟ್ಟಿಲ್ಲ, ಕೈಬಿಡುವುದಿಲ್ಲ. ಸಂವಿಧಾನ ರಚನಾ ಸಭೆಯ ಕಾಲದಿಂದಲೂ ಅದರ ವಿಚಾರ ಜೀವಂತವಾಗಿ ಇರಿಸಲ್ಪಟ್ಟಿದೆ. ಪುರುಷೋತ್ತಮದಾಸ ಟಂಡನ್ ಮತ್ತು ರಾಜೇಂದ್ರ ಪ್ರಸಾದ್ ಆ ಸಭೆಯಲ್ಲಿ ಹಿಂದಿ ಹೇರಿಕೆಯ ವಕ್ತಾರರಾಗಿದ್ದರು, ಈಗ ಅವರ ಸಂತಾನ ಬೆಳೆದಿದೆ ಮತ್ತು ಕ್ರಿಯಾಶೀಲವಾಗಿದೆ.

ಕರ್ನಾಟಕದ ಸರ್ಕಾರವು ಇಂಗ್ಲಿಷ್ ಬಗೆಗಿನ ತನ್ನ ವ್ಯಾಮೋಹವನ್ನು ಸದ್ಯಕ್ಕೆ ಹಿಂದಿಗೆ ವ್ಯಾಪಿಸಲು ಕಾತುರವಾಗಿಲ್ಲ. ಆದರೆ ಮುಂದಿನ ದಿನಗಳಲ್ಲಿ ಇದೇ ನಿಲುವನ್ನು ಸಮರ್ಥಿಸುವ ಸರ್ಕಾರಗಳು ಮಾತ್ರವೇ ಅಸ್ತಿತ್ವದಲ್ಲಿರುತ್ತವೆಂದು ಹೇಳಲಾಗದು. ಈಗಿನ ಸರ್ಕಾರವು ಭಾಷಾಸೂತ್ರವನ್ನು ಪರಿಷ್ಕರಿಸಿ ಕನ್ನಡ ಮತ್ತು ಇಂಗ್ಲಿಷ್ ಮಾತ್ರ ಬೋಧನಾ ವಿಷಯ ಗಳಾಗಿರಬೇಕೆಂದು ಆಜ್ಞೆ ಹೊರಡಿಸುವುದು ಯೋಗ್ಯವಾದ ಕ್ರಮ. ಎಂಟನೆಯ ತರಗತಿಯ ನಂತರ ಆಸಕ್ತ ವಿದ್ಯಾರ್ಥಿಗಳು ಯಾವುದೇ ಬೇರೆ ಭಾಷೆಯನ್ನು ಕಲಿಯಲು ಅವಕಾಶವಿರಬೇಕು. ಶಾಲೆಯ ಹೊರಗೆ ಮೊದಲ ಹಂತದಿಂದಲೇ ಆಸಕ್ತರು ಸ್ವೀಡಿಷ್ ಭಾಷೆಯನ್ನಾದರೂ ಕಲಿಯಲಿ, ಹಿಂದಿಯನ್ನಾದರೂ ಕಲಿಯಲಿ, ಅದಕ್ಕೇನೂ ಅಡಚಣೆ ಇರುವುದಿಲ್ಲ. ಉತ್ತರ ಪ್ರದೇಶಾದಿ ರಾಜ್ಯಗಳ ವಿದ್ಯಾರ್ಥಿಗಳೆಂದೂ ದಕ್ಷಿಣದ ಭಾಷೆಗಳನ್ನು ಕಲಿಯುವುದಿಲ್ಲ, ಕಲಿಯದಿದ್ದರೆ ನಾವೇನೂ ಹತಾಶರಾಗಬೇಕಾಗಿಲ್ಲ. ಬೆಂಗಳೂರಿನ ನೀರನ್ನು ಮೂವತ್ತು ವರ್ಷ ಕುಡಿದರೂ ಮೂರು ಕನ್ನಡ ಪದಗಳನ್ನಾಡದ 'ವರೇಣ್ಯ'ರು ಆ ರಾಜ್ಯಗಳವರು.

ಜೊತೆಗೆ, ಶಿಕ್ಷಣ ನೀತಿಯು ಕೇಂದ್ರ ಮಂಡಲಿಯು ಸಿದ್ಧಗೊಳಿಸಿದ ಪುಸ್ತಕಗಳನ್ನು ನಮ್ಮ ರಾಜ್ಯದ ಮೇಲೆ ಹೇರಲಿದೆ. ಆಗ ಹೊಯ್ಸಳರು, ಕದಂಬರು, ಯಾರೂ ಇತಿಹಾಸದ ಪಠ್ಯಪುಸ್ತಕ ಗಳಲ್ಲಿರುವುದಿಲ್ಲ. ಆ ಬಗ್ಗೆ ನಮ್ಮ ರಾಜ್ಯ ಸರ್ಕಾರವು ಈಗಲೇ ತನ್ನ ನಿಲುವನ್ನು ಪ್ರಕಟಿಸಬೇಕು. ಈಗಾಗಲೆ ಆಂಗ್ಲ ಮಾಧ್ಯಮ ಶಾಲೆಗಳಲ್ಲಿ 'ಬೂತುಗ'ನು 'ಬುಟುಗ'ನಾಗಿದ್ದಾನೆ. ಅದಕ್ಕೆ ಪರಿಹಾರ ಆ ಹೆಸರುಗಳೇ ಇಲ್ಲದ ಪಠ್ಯಪುಸ್ತಕಗಳಲ್ಲ. ನಮ್ಮ ರಾಜ್ಯದ ಶಿಕ್ಷಣ ಸಚಿವಾಲಯವು ಇಂತಹ ವಿಷಯಗಳನ್ನು ಕುರಿತು ಗಂಭೀರವಾಗಿ ಚಿಂತನೆ ನಡೆಸುವ ಅಗತ್ಯವಿದೆ.

✶ ✶ ✶

ಇತ್ತೀಚೆಗೆ ವಿಶ್ವ ಸಂಸ್ಥೆಯಲ್ಲಿ ಭಾರತವು ಅಮೆರಿಕಾ ಮತ್ತು ಇಸ್ರೇಲ್ ಜೊತೆ ಕೈಜೋಡಿಸಿ ಪ್ಯಾಲೆಸ್ಟೈನ್ ವಿರೋಧಿ ನಿರ್ಣಯವೊಂದಕ್ಕೆ ಮತ ಚಲಾಯಿಸಿದ್ದು ಅವಿವೇಕ ಮತ್ತು ದ್ರೋಹ. ದೌರ್ಜನ್ಯಗಳಿಗೆ ಗುರಿಯಾದವರ ಪರವಾಗಿ ನಿಲ್ಲುವ ನಮ್ಮ ದೇಶದ ಪರಂಪರೆಗೆ ಇದರಿಂದ ಕಠಾರಿ ಪ್ರಯೋಗ ನಡೆದಂತಾಗಿದೆ. ಅದರ ತರುವಾಯದಲ್ಲಿ ಅಧ್ಯಕ್ಷ ಟ್ರಂಪ್‌ನ ಒಬ್ಬ ಪ್ರತಿನಿಧಿ ಬೇರಾವುದೋ ವ್ಯವಹಾರಕ್ಕೆಂದು ಭಾರತಕ್ಕೆ ಬಂದಿದ್ದವನು ಕೇಂದ್ರ ಸರ್ಕಾರಕ್ಕೆ ಒಂದು ಪುಕ್ಕಟೆ ಸಲಹೆ ನೀಡಿ ತೊಲಗಿದ್ದಾನೆ. ಮಾನ್ಯ ಜಯಶಂಕರ ಅವರು ವಿದೇಶಾಂಗ ಸಚಿವರಾಗಿ ಅಂತಹ ದುಷ್ಟ ಸಲಹೆಗೆ ಓಗೊಟ್ಟರೆ ಅದು ನಮ್ಮ ದೇಶದ ಸರ್ವಸ್ವದ ವಿನಾಶದತ್ತ ದಾಪುಗಾಲು ಹಾಕಿದಂತೆಯೇ ಸರಿ. ಅವನ ಸಲಹೆಯೇನೆಂದರೆ, "ಈಗ ಭಾರತವು ನೇಟೋ ಕೂಟಕ್ಕೆ ಸೇರಿಕೊಳ್ಳಲು ಕಾಲ ಸನ್ನಿಹಿತ ವಾಗಿದೆ, ಮುಂದಕ್ಕೆ ಹೆಜ್ಜೆ ಹಾಕಬೇಕು," ಎಂದು. ಅಲಿಪ್ತ ನೀತಿಯನ್ನು ಅನುಸರಿಸುತ್ತಾ ಬಂದ ನಮ್ಮ ದೇಶಕ್ಕೆ ಇಂತಹ ವಿಪತ್ಕಾರಿ ಸೂಚನೆ ಕೊಡುವ ಧಿಮಾಕು ಈ ಅಮೆರಿಕಾದ ಪ್ರತಿನಿಧಿಯದು.

ಹಿಂದೆ ಪಾಕಿಸ್ತಾನವು "ಸೀಟೋ" ಎಂಬ ಕೂಟದಲ್ಲಿತ್ತು, ಆದರೆ ನಂತರ ಚೀಣಾದ ಸಖ್ಯ ಬೆಳೆಸಿತು. ಸೀಟೋ ಸದಸ್ಯರಾಷ್ಟ್ರವಾಗಿ ಪಾಕಿಸ್ತಾನವು ಅಮೆರಿಕಾದ ಮಿಲಿಟರಿ ನೆಲೆಗಳಿಗೆ ಅವಕಾಶ ಕೊಡುವುದು ಕಡ್ಡಾಯವಾಗಿತ್ತು. ಭಾರತವು ನೇಟೋ ಸದಸ್ಯರಾಷ್ಟ್ರವಾದರೆ ನೇಟೋ ಮತ್ತು ಅಮೆರಿಕಾದ ಮಿಲಿಟರಿ ನೆಲೆಗಳು ದೇಶದುದ್ದ ಗಲಕ್ಕೂ ಹರಡಿಕೊಳ್ಳುತ್ತವೆ. ಒಂದೊಂದು ನೆಲೆಯೂ ಒಂದು ದೊಡ್ಡ ನಗರದಷ್ಟು ಜಾಗವನ್ನು ಆಕ್ರಮಿಸಿಕೊಳ್ಳುತ್ತದೆ. ವಸಹಾತುಶಾಹಿಯ ಅನುಭವ ವಿಲ್ಲದ ಭಾರತದ ಪೀಳಿಗೆಗಳಿಗೆ ಅದರ ಅನುಭವವನ್ನು ಪ್ರಾಯೋಗಿಕವಾಗಿ ಕಟ್ಟಿಕೊಡುವ ಉಪಕ್ರಮ ಆರಂಭವಾಗುತ್ತದೆ.

ನಮ್ಮ ದೇಶದ ಎಲ್ಲ ರಾಜಕೀಯ ಪಕ್ಷಗಳೂ ದೇಶವನ್ನು 'ನೇಟೋ' ಸೇರಲು ಬಿಡುವುದಿಲ್ಲವೆಂದು ಸಾರ್ವಜನಿಕವಾಗಿ ಘೋಷಿಸಿ ಅಂತೆಯೇ ನಡೆಯಬೇಕು.

✶ ✶ ✶

ನೀರೇ ಇಲ್ಲದ ಕಾಲದಲ್ಲಿ ಕಾವೇರಿಯಿಂದ ಜೂನ್ ತಿಂಗಳಲ್ಲಿ ಇಂತಿಷ್ಟು ನೀರನ್ನು ತಮಿಳುನಾಡಿಗೆ ನೀಡಬೇಕೆಂದು ಕಾವೇರಿ ಟ್ರಿಬ್ಯುನಲ್ ಕರ್ನಾಟಕಕ್ಕೆ ಸೂಚಿಸಿದೆ. 'ಆಜ್ಞೆ' ನೀಡುವುದು ಹಾಸ್ಯಾಸ್ಪದವಾದೀತೆಂದು ಟ್ರಿಬ್ಯುನಲ್ ಸಹ ತಿಳಿದಿದೆ; ಅದು ಸಮಾಧಾನದ ಸಂಗತಿ. ಈ ವರ್ಷ ಮಳೆಯ ಕೊರತೆ ಅಗಾಧವಾಗಿರುತ್ತದೆಂಬ ಶಂಕೆಯನ್ನು ವ್ಯಕ್ತ ಪಡಿಸಲಾಗಿದೆ. ಮುಂಜಾಗ್ರತಾ ಕ್ರಮ ಕೈಗೊಂಡು ಇಲ್ಲದ ನೀರನ್ನು ಸೃಷ್ಟಿಸಲು ಯಾರಿಗೂ ಸಾಧ್ಯ ವಾಗದು. ಆದರೆ ನೀರಿನ ಅಪವ್ಯಯವನ್ನು ತಡೆಗಟ್ಟಲು ಕ್ರಮಗಳನ್ನು ಈಗಿನಿಂದಲೇ ಕೈಗೊಳ್ಳ ಬೇಕು. ನಗರಸಭೆಗಳು ಮತ್ತು ಪುರಸಭೆಗಳು ಕೆಳಮಟ್ಟ ದಿಂದಲೇ ಎಲ್ಲ ವಿಭಾಗಗಳಲ್ಲೂ ಸಾರ್ವಜನಿಕ ಸಮಿತಿಗಳನ್ನು ರಚಿಸಿ ಆಯಾ ವಿಭಾಗಗಳಲ್ಲಿ ನೀರಿನ ಅಪವ್ಯಯವನ್ನು ಸರ್ವಥಾ ತಡೆಗಟ್ಟಲು ಮುಂದಾಗು ವುದು ಸೂಕ್ತವೆನಿಸುತ್ತದೆ. ಎಲ್ಲ ರಾಜಕೀಯ ಪಕ್ಷಗಳೂ ವಿಭಾಗ ಸಮಿತಿಗಳನ್ನು ರಚಿಸಿ ಕ್ರಿಯಾಶೀಲರಾಗುವುದು ಸಹ ಅಪೇಕ್ಷಣೀಯ.






### ಕುಸಿಯುತ್ತಿರುವ ಪ್ರಜಾಪ್ರಭುತ್ವ ಮೌಲ್ಯಗಳು

ಹಾಗೂ-ಹೀಗೂ ೨೦೧೯ರ ಲೋಕಸಭಾ ಚುನಾವಣೆಯೂ ಮುಗಿಯಿತು. ಸುಮಾರು ಎರಡೂವರೆ ತಿಂಗಳ ಕಾಲ ನಡೆದಂತಹ ಚುನಾವಣಾ ತಯಾರಿ ಕೊನೆಗೂ ಮೇ ೨೩ರಂದು ಫಲಿತಾಂಶವೂ ಸಹ ಬಂದಿತು. ಅಚ್ಚರಿಯ ಫಲಿತಾಂಶವೂ ಸಹ ಎಂದು ಹೇಳಬಹುದು. ಫಲಿತಾಂಶದ ಕಥೆ ನಮಗೆ ಬೇಡವಾದ ವಿಷಯ. ಆದರೆ ಈ ಚುನಾವಣಾ ಪ್ರಚಾರದಲ್ಲಿ ಬಳಸಿದಂತಹ ಹೇಳಿಕೆಗಳು ನಮ್ಮ ರಾಜಕೀಯ ನಾಯಕರ ಮಾತಿನ ಮಲ್ಲಯುದ್ಧ ಎಂದೇ ಹೇಳಬಹುದು. ಈ ಹೇಳಿಕೆಗಳ ಬಗ್ಗೆ ನಾವು ಅತೀ ಹೆಚ್ಚು ಗಮನ ಹರಿಸಿ ವಿಶ್ಲೇಷಿಸುವ ಅಗತ್ಯ ಇದೆ ಎಂದು ಹೇಳಬಹುದು.

ಇಂತಹ ಬೇಜವಾಬ್ದಾರಿ ಚುನಾವಣೆಗಳು ಆಧುನಿಕ ಪ್ರಜಾಪ್ರಭುತ್ವವನ್ನು ಕೆಡಿಸುತ್ತಿವೆ ಎಂದರೆ, ತಪ್ಪಾಗಲಾರದು. ಇಂತಹ ಹಲವಾರು ಬೇಜವಾಬ್ದಾರಿ ಚುನಾವಣಾ ಪ್ರಚಾರ ಮತ್ತು ಪ್ರಣಾಳಿಕೆಗಳಿಂದ ಭಾರತದ ಪ್ರಜಾಪ್ರಭುತ್ವದ ಮೌಲ್ಯಗಳು ಕುಸಿಯುತ್ತಿವೆ. ಹಾಗೆಯೇ ನಾವು ನಮ್ಮ ರಾಜಕೀಯ ನಾಯಕರ ಭಾಷಣ, ಹೇಳಿಕೆಗಳನ್ನು ಗಮನಿಸಿದ್ದೇ ಆದಲ್ಲಿ, ನಮ್ಮ ದೇಶದ ನಿಜವಾದ ಪ್ರಜಾಪ್ರಭುತ್ವದ ಗುಣಗಳು ಹಾಗೂ ಇದರ ಹಾದಿ ಎತ್ತ ಸಾಗುತ್ತಿದೆ ಎಂಬ ಪ್ರಶ್ನೆಯು ನಮ್ಮಲ್ಲಿ ಮೂಡದೇ ಇರಲು ಸಾಧ್ಯವಿಲ್ಲ. ಇಂತಹ ಹಲವಾರು ನಾಯಕರು ತಮ್ಮ ನಾಲಿಗೆಯನ್ನು ಎಡೆಬಿಡದೆ ಹರಿಬಿಡುತ್ತಿದ್ದಾರೆ. ಇಂತಹ ನಾಯಕರಿಗೆ ಕಡಿವಾಣ ಹಾಕಲು ನಮ್ಮ ದೇಶದ ಅತ್ಯುನ್ನತ ನ್ಯಾಯಾಂಗ ವ್ಯವಸ್ಥೆಯೇ ಕಂಡು ಕಾಣದ ಪರಿಸ್ಥಿತಿಯಲ್ಲಿದೆ.

ಹೀಗೆ, ಹಲವಾರು ನಾಯಕರುಗಳನ್ನು ನಾವು ಉದಾಹರಣೆಗಳ ಸರಮಾಲೆಯನ್ನೇ ತಮ್ಮ ಮುಂದಿಟ್ಟುಕೊಂಡು ಅವರ ಬಣ್ಣ ಬಯಲು ಮಾಡಬಹುದು. "ನಮ್ಮ ಭಾರತದ ಸಂವಿಧಾನ ಬದಲಾಗಬೇಕು ಎಂದ ನಾಯಕನಿಂದ ಹಿಡಿದು ಗೋಡ್ಸೆ ಒಬ್ಬ ಹುತಾತ್ಮ ಎಂದ ಒಬ್ಬ ಮಹಿಳಾ ರಾಜಕೀಯ ನಾಯಕಿಯನ್ನು ನಾವು ನೋಡಬಹುದು." ಇಂತಹ ಹಲವಾರು ನಾಯಕರ ಹೇಳಿಕೆಗಳು ನಮ್ಮ ಕಣ್ಣ ಮುಂದೆ ಹಲವಾರು ಇವೆ.

ಇತ್ತೀಚೆಗೆ ಒಂದು ರಾಷ್ಟ್ರೀಯ ಪಕ್ಷದಿಂದ ಮಧ್ಯಪ್ರದೇಶದ ಭೋಪಾಲ್ ಲೋಕಸಭಾ ಕ್ಷೇತ್ರದಿಂದ ಸ್ಪರ್ಧಿಸಿ, ಪ್ರತಿಸ್ಪರ್ಧಿ ರಾಷ್ಟ್ರೀಯ ಪಕ್ಷದ ಪ್ರಭಾವಿ ನಾಯಕರನ್ನು (ದಿಗ್ವಿಜಯ್ ಸಿಂಗ್) ಸೋಲಿಸಿದ ನಾಯಕಿ. ಅಂತಹವರು ಬೇರೆಯವರಾರೂ ಅಲ್ಲ, "ಸಾಧ್ವಿ ಪ್ರಜ್ಞಾ ಸಿಂಗ್" ಇವರು ಇತ್ತೀಚೆಗೆ ನೀಡಿದಂತಹ ಒಂದು ಹೇಳಿಕೆ ತೀವ್ರ ಚರ್ಚೆಗೆ ಕಾರಣವಾಗಿದೆ. ಏನೆಂದರೆ "ಮಹಾತ್ಮ ಗಾಂಧಿಯನ್ನು ಕೊಂದ ಗೋಡ್ಸೆ ಅವರು ದೇಶದ್ರೋಹಿ ಅಲ್ಲ. ಆತ ಒಬ್ಬ ಹುತಾತ್ಮ." ಈ ಹೇಳಿಕೆಯನ್ನು ನಾವು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಅರೆ! ಈ ಹೇಳಿಕೆಗಳು ನಮ್ಮ ದೇಶದ ರಾಷ್ಟ್ರಪಿತನನ್ನೇ ಕೊಂದ ಒಬ್ಬ ಕೋಮುವಾದಿ ನಾಯಕನನ್ನು ಹುತಾತ್ಮ ಎಂದರೆ?

ಇಂತಹ ಬೊಗಳೆ ನಾಯಕರನ್ನು ನಾವು ಬೆಂಬಲಿಸುತ್ತಾ ಹೋದದ್ದೇ ಆದಲ್ಲಿ, ನಮ್ಮ ರಾಷ್ಟ್ರಪಿತ ಸ್ಥಾನದಲ್ಲಿ ಮಹಾತ್ಮ ಗಾಂಧೀಜಿಯವರನ್ನು ಕಿತ್ತೆಸೆದು, ಗೋಡ್ಸೆ ಅಂತಹ ಕೋಮುನಾಯಕರನ್ನು ಕೂರಿಸಿದರೆ, ಅಚ್ಚರಿಪಡುವಂತಿಲ್ಲ. ಅಂತಹ ದಿನಗಳೂ ಕೂಡ ಬಹಳ ದೂರ ಏನೂ ಇಲ್ಲ. ಬಹಳ ಹತ್ತಿರದಲ್ಲೇ ಇವೆ.




ಇನ್ನು ಮಾಧ್ಯಮಗಳ ವಿಷಯಕ್ಕೆ ಬಂದರಂತೂ, ನಿಜವಾಗಲೂ ತೀವ್ರ ಹತಾಶ ಭಾವನೆ ಮೂಡುತ್ತದೆ. ಇಡೀ ದಿನ ಮೋದಿ ಸುನಾಮಿಗೆ ಕೊಚ್ಚಿಹೋದ ವಿಪಕ್ಷಗಳು ಮೋದಿ ತ್ರಿಶತಕ ಬಾರಿಸಿದರು ಇಂಥ ಬೊಗಳೆ ಸುದ್ದಿಗಳನ್ನು ಬೆಳಿಗ್ಗೆಯಿಂದ ಸಂಜೆತನಕ ತೋರಿಸಿದವೆಯೇ ಹೊರತು ಯಾವ ಮಾಧ್ಯಮವಾದರೂ ಕನಿಷ್ಠ ಒಂದು ಗಂಟೆ ಕಾಲ ಈ ವಿವಾದಾತ್ಮಕ ಹೇಳಿಕೆಯ ಬಗ್ಗೆ ಚರ್ಚೆ ನಡೆಸಿವೆಯೇ? ಇಂತಹ ಹೇಳಿಕೆಗಳು ಅವುಗಳ ಗಮನಕ್ಕೆ ಬರಲಿಲ್ಲವೇ? ಯಾಕೆ ಮಾಧ್ಯಮಗಳು ಇಂತಹ ಚರ್ಚೆಗಳನ್ನು ಮಾಡುವಲ್ಲಿ ವಿಫಲವಾಗುತ್ತಿವೆ?

ಇಂತಹ ಬೇಜವಾಬ್ದಾರಿ ಹೇಳಿಕೆಗಳನ್ನು ಖಂಡಿಸುವಲ್ಲಿ ಯುವ ಸಮುದಾಯ, ಮಾಧ್ಯಮ ರಾಜಕೀಯ ಚಿಂತಕರು ಯಾವ ಪಾತ್ರವಹಿಸುತ್ತಿದ್ದಾರೆ. ಏಕೆ ಅವರು ಪ್ರಶ್ನಿಸುವಲ್ಲಿ ವಿಫಲರಾಗಿದ್ದಾರೆ ಎಂಬುದು ನಿಜಕ್ಕೂ ದುಃಖದ ಸಂಗತಿ.

ಇಂತಹ ಹೇಳಿಕೆಗಳನ್ನು ಖಂಡಿಸುವುದು. ಒಬ್ಬ ರಾಜಕೀಯ ಶಾಸ್ತ್ರದ ವಿದ್ಯಾರ್ಥಿಯಾಗಿ ನನ್ನದೂ ಸಹ ಒಂದು ಜವಾಬ್ದಾರಿ ಎಂದು ಹೇಳಲು ಇಚ್ಛಿಸುತ್ತೇನೆ.

*ಬೆಂಗಳೂರು* **ಕಾರ್ತಿಕ್ ಡಿ.**

### ಸರ್ಕಾರಿ ಶಾಲೆಗಳು – ಆಗಬೇಕಾಗಿರುವುದು

ಈ ಬಾರಿಯ (ಜೂನ್ ೨೦೧೯) ಹೊಸತು ಸಂಪಾದಕೀಯದ ಮೊದಲ ಭಾಗದಲ್ಲಿನ "ಶಿಕ್ಷಣ ಕ್ಷೇತ್ರದ ಹುಸಿ ನಂಬಿಕೆಗಳು" ಭಾಗವನ್ನು ಶಿಕ್ಷಣ ಇಲಾಖೆ ಗಂಭೀರವಾಗಿ ಗಮನಿಸಬೇಕಿದೆ. ಸರ್ಕಾರಿ ಶಾಲೆಗಳ ಶೈಕ್ಷಣಿಕ ಸಾಧನೆ ಚೆನ್ನಾಗಿಯೇ ಇದೆ. ಸಮಸ್ಯೆಗಳು ಉಂಟಾಗುತ್ತಿದ್ದುದು/ಆಗುತ್ತಿರುವುದು ಸರ್ಕಾರದ ನಿರ್ಲಕ್ಷ್ಯದಿಂದ ಹಾಗೂ ಜನಮಾನಸದಲ್ಲಿ ಖಾಸಗಿ ಶಾಲೆಗಳವರು ಬಿತ್ತಿರುವ ತಪ್ಪುಕಲ್ಪನೆಗಳಿಂದ. ಇದರ ಜೊತೆಗೆ ಲಕ್ಷಲಕ್ಷ ಕೊಟ್ಟು ನರ್ಸರಿ ಶಾಲೆಗೆ ಮಗುವನ್ನು ಸೇರಿಸುವುದು ಘನತೆಯ ವಿಷಯವಾದಾಗಿನಿಂದ! ನರ್ಸರಿ ಶಾಲೆಗಳನ್ನು ಶಿವರಾಮ ಕಾರಂತರು ಶಿಶು ಮರ್ದನ ಕೇಂದ್ರಗಳು ಎಂದು ಕರೆದಿದ್ದರು. ಸಂಪಾದಕೀಯದ ವಿಶ್ಲೇಷಣೆ ಚೆನ್ನಾಗಿದೆ.

ಈಗ ಆಗಬೇಕಾಗಿರುವುದು:

೧. ಸರ್ಕಾರ ಎಲ್ಲ ಸರ್ಕಾರಿ ಶಾಲೆಗಳಿಗೆ ಅಗತ್ಯವಿರುವ ಎಲ್ಲ ಮೂಲಭೂತ ಸೌಕರ್ಯಗಳನ್ನು ಮಾಡಿಕೊಡಬೇಕು.

೨. ಇಲಾಖೆಯಲ್ಲಿ ಪ್ರಾಮಾಣಿಕವಾಗಿ ದುಡಿಯುತ್ತಿರುವ, ಮಕ್ಕಳ ಏಳಿಗೆಗಾಗಿ ಸಾಕಷ್ಟು ಕಷ್ಟಪಡುತ್ತಿರುವ (ಎಷ್ಟೋ ಕಡೆ ತ್ಯಾಗಗಳನ್ನು ಮಾಡಿ) ಶಿಕ್ಷಕರು ಇದ್ದಾರೆ. ಅವರನ್ನು ಗುರುತಿಸಿ ಆದರಿಸಬೇಕಾದ ಕೆಲಸವಾಗಬೇಕಿದೆ. ಶಿಕ್ಷಕರನ್ನು ತ್ಯಾಗರಾಜರನ್ನಾಗಿ ಮಾಡುವ ದರ್ದು ಇಲಾಖೆಗೆ ಬೇಕಿಲ್ಲ. ಆದರೆ, ಶಿಕ್ಷಕರ ಆ ಗುಣವನ್ನು ಗುರುತಿಸಿ ಅವರ ಶಕ್ತಿ, ದಕ್ಷತೆ ಮಕ್ಕಳ ಸರ್ವತೋಮುಖ ಅಭಿವೃದ್ಧಿಯೆಡೆಗೆ ಕೇಂದ್ರೀಕೃತವಾಗುವಂತೆ ಅಗತ್ಯ ಸೌಲಭ್ಯಗಳನ್ನು ಕಲ್ಪಿಸುವ ಕಾರ್ಯವನ್ನು ಸರ್ಕಾರ ಮಾಡಬೇಕಿದೆ.

೩. ಶಿಕ್ಷಕರಿಗೆ ಯುಕ್ತ ತರಬೇತಿಯನ್ನು ಕೊಡಬೇಕು. ಇದಕ್ಕಾಗಿ ಡಯಟ್ ಮತ್ತು ಡಿಟಿಐಗಳು ಇವೆ ಯಾದರೂ ಇವುಗಳ ಸಂಖ್ಯೆ ಯಾವುದಕ್ಕೂ ಸಾಲದು. ಎಲ್ಲವೂ ನಾಗಾಲೋಟದಲ್ಲಿ ಓಡುತ್ತಿರುವ ಇಂದಿನ ದಿನಮಾನಗಳಲ್ಲಿ ನಿರಂತರ ತರಬೇತಿ ಅತ್ಯಾವಶ್ಯಕ.

೪. ಶಿಕ್ಷಕರಿಗೆ ಶಿಕ್ಷಣ ಕೊಡುವುದನ್ನು ಬಿಟ್ಟು ಇತರೆ ಯಾವ ಜವಾಬ್ದಾರಿಯನ್ನೂ ಹೊರಿಸಬಾರದು. ಅದಕ್ಕೆ ಸಂಬಂಧಪಟ್ಟ ಸರ್ಕಾರಿ ಇಲಾಖೆಗಳು ಬೇರೆ ವ್ಯವಸ್ಥೆ ಮಾಡಿಕೊಳ್ಳಲಿ. ನಿರುದ್ಯೋಗ ಸಮಸ್ಯೆಯಿರುವ ಈ ದೇಶದಲ್ಲಿ "ಸಿಬ್ಬಂದಿ ಕೊರತೆ" "ಸಂಪನ್ಮೂಲದ ಕೊರತೆ" ಎಂದು ಬೊಬ್ಬಿರಿದು ಎಲ್ಲದಕ್ಕೂ ಶಿಕ್ಷಕರನ್ನು ಬಳಸಿಕೊಳ್ಳುವುದು ನಿಲ್ಲಬೇಕು.

೫. ಶಿಕ್ಷಣ ಹಾಗೂ ಆಡಳಿತದಲ್ಲಿ ಉನ್ನತ ತಂತ್ರಜ್ಞಾನದ ಬಳಕೆ ಆಗಬೇಕಿದೆ. ಕೆಂಪು ಪಟ್ಟಿ ಅಳಿಸಿಹೋಗಿ, ಮುಖ್ಯೋಪಾಧ್ಯಾಯರೂ ಪಾಠ ಮಾಡುವಂತಹ ವ್ಯವಸ್ಥೆಯಾಗಬೇಕಿದೆ.

*ಬೆಂಗಳೂರು* **ಕಲ್ಲುಗುಂಡಿ ನವೀನ್**



# ಸೌಹಾರ್ದ ಬದುಕಿನ ಕನಸುಗಾರ
# ಗಿರೀಶ ಕಾರ್ನಾಡ

"ಬೆಳಕಿಲ್ಲದ ದಾರಿಯಲ್ಲಿ ನಡೆಯಬಹುದು.
ಕನಸುಗಳೇ ಇಲ್ಲದ ದಾರಿಯಲ್ಲಿ ಹೇಗೆ ನಡೆಯಲಿ"

**ಡಾ|| ಕೆ. ಮರುಳಸಿದ್ದಪ್ಪ**

ಸಾಮಾನ್ಯವಾಗಿ 'ಮರತೆ ದಮ್‌ತಕ್' ಎನ್ನುವ ಹಿಂದಿ ವಾಕ್ಯವನ್ನು ವಿಶೇಷಣವಾಗಿ ಬಳಸಲಾಗುತ್ತದೆ. ಆದರೆ ನಮ್ಮ ನಾಡಿನ ನಾಟಕ ಸಾಹಿತಿ, ನಿರ್ದೇಶಕ, ನಟ, ಚಿಂತಕ ಗಿರೀಶ ಕಾರ್ನಾಡ ವಾಸ್ತವವಾಗಿ ಕೊನೆಯುಸಿರಿನ ತನಕ ಸೌಹಾರ್ದತೆಗಾಗಿ ಹೋರಾಡಿ ನಿರ್ಗಮಿಸಿದರು. ಅವರು ಕೊನೆಯ ದಿನಗಳಲ್ಲಿ ಉಸಿರಾಟದ ತೊಂದರೆಗೀಡಾಗಿದ್ದರೂ ಉಸಿರಾಟದ ಉಪಕರಣಗಳನ್ನು ಹೊತ್ತುಕೊಂಡು, ಸೌಹಾರ್ದ, ಅಭಿವ್ಯಕ್ತಿ ಸ್ವಾತಂತ್ರ್ಯಕ್ಕಾಗಿ, ಕೋಮುವಾದಿ ಪ್ರಭುತ್ವದ ಜನವಿರೋಧಿ, ಜೀವವಿರೋಧಿ ನಿಲುವುಗಳನ್ನು ಪ್ರತಿಭಟಿಸಲು ನಡೆದ ಕಾರ್ಯಕ್ರಮಗಳಲ್ಲಿ ಭಾಗವಹಿಸಿದರು. ಪ್ರಗತಿಪರರನ್ನು, ಚಿಂತಕರನ್ನು ನಗರ ನಕ್ಸಲ್‌ಗಳೆಂದು ಸರಕಾರ ಸುಳ್ಳು ಆರೋಪ ಮಾಡಿ ಬಂಧಿಸಿದಾಗ 'ನಾನೂ ನಗರ ನಕ್ಸಲ್' ಎಂಬ ಬೋರ್ಡು ಎದೆಗೆ ತೂಗು ಹಾಕಿಕೊಂಡು, ಉಸಿರಾಟದ ಉಪಕರಣ ಗಳೊಂದಿಗೇ ಸಾರ್ವಜನಿಕ ಸಭೆ, ಸಮಾರಂಭಗಳಲ್ಲಿ ಭಾಗವಹಿಸಿದರು. ಜ್ಞಾನಪೀಠ ಪ್ರಶಸ್ತಿ ಪಡೆದ ನಮ್ಮ ನಾಡಿನ ಈ ಪ್ರತಿಭೆ, ಜೀವ ವಿರೋಧಿ ಪ್ರಭುತ್ವವನ್ನು ಎದುರು ಹಾಕಿಕೊಂಡದ್ದು ಹೋರಾಟಗಾರರಿಗೆ ಸ್ಫೂರ್ತಿ ಮತ್ತು ಮಾದರಿಯಾಗಿತ್ತು.

ಇತಿಹಾಸವನ್ನು ಪುರಾಣದ ಘಟನೆಗಳನ್ನು ವರ್ತಮಾನದ ಸಂದರ್ಭಕ್ಕೆ ಮುಖಾಮುಖಿಯಾಗಿಸಿದ ಅವರ ನಾಟಕಗಳು ಇಂದಿಗೂ ಪ್ರಸ್ತುತ. ವ್ಯಕ್ತಿಯಾಗಿ, ವ್ಯಕ್ತಿತ್ವವಾಗಿ ಗಿರೀಶ ಕಾರ್ನಾಡ ಒಂದು ಜೀವಪರ, ಜನಪರ ಮಾದರಿಯನ್ನು ಬಿಟ್ಟು ಹೋಗಿದ್ದಾರೆ. ಸೌಹಾರ್ದ ಬದುಕಿಗಾಗಿ ಅವರು ಕಂಡ ಕನಸು ನನಸಾಗಬೇಕಿದೆ. ಕಾರ್ನಾಡ ಅವರ ಬದುಕು ಮತ್ತು ಸಾಹಿತ್ಯ ಸ್ಮರಣೆಗೆ ಮಾತ್ರವಲ್ಲ ಅನುಕರಣೆಗೂ ಯೋಗ್ಯವಾಗಿದೆ. ಗಿರೀಶ ಕಾರ್ನಾಡ ಅವರು ಬೆಂಗಳೂರಿಗೆ ಬಂದ ಮೇಲೆ ಅವರ ಜೊತೆ, ಅವರ ಕುಟುಂಬದ ಜೊತೆ ಆತ್ಮೀಯ ಸಂಬಂಧ, ಒಡನಾಟವಿಟ್ಟುಕೊಂಡಿದ್ದ ನಮ್ಮ ನಾಡಿನ ಹಿರಿಯ ಸಾಹಿತಿ, ಚಿಂತಕ ಡಾ|| ಕೆ. ಮರುಳಸಿದ್ದಪ್ಪ ಅವರು 'ಹೊಸತು'ಗೆ ಕಾರ್ನಾಡರ ಕುರಿತು ನೆನಪುಗಳನ್ನು ಹಂಚಿಕೊಂಡಿದ್ದಾರೆ. ಅವರ ಅಭಿಪ್ರಾಯಗಳನ್ನು ಡಾ|| ಬಿ. ಆರ್. ಮಂಜುನಾಥ ಹಾಗೂ ಡಾ|| ಸಿದ್ದನಗೌಡ ಪಾಟೀಲ ಲೇಖನ ರೂಪಕ್ಕಿಳಿಸಿಕೊಟ್ಟಿದ್ದಾರೆ. ಹೊಸತು ಬಳಗದಿಂದ 'ಗಿರೀಶ ಕಾರ್ನಾಡ' ಅವರಿಗೆ ನಮನಗಳನ್ನು ಡಾ|| ಕೆ. ಮರುಳಸಿದ್ದಪ್ಪ ಅವರಿಗೆ ವಂದನೆಗಳನ್ನು ಈ ಮೂಲಕ ಸಲ್ಲಿಸುತ್ತೇವೆ.

*– ಸಂಪಾದಕ*

ನಾನು ಗಿರೀಶ ಕಾರ್ನಾಡ ಹೆಚ್ಚು ಆತ್ಮೀಯರಾಗಿದ್ದು ಅವರು ಬೆಂಗಳೂರಿಗೆ ಬಂದ ಮೇಲೆ. ಅವರ 'ತುಘಲಕ್' ನಾಟಕವನ್ನು ಓದಿದ್ದೆ. ನಾವೆಲ್ಲ ಆ ನಾಟಕ ಓದಿ ಸಂತೋಷಗೊಂಡಿದ್ದೆವು. ಆ ನಾಟಕ ಹಿಂದಿ ಭಾಷೆಗೆ ಅನುವಾದಗೊಂಡ ಮೇಲೆ ರಾಷ್ಟ್ರೀಯ ನಾಟಕ ಶಾಲೆಯ ಅಲ್ಕಾಜಿ ದೆಹಲಿಯ ಕೆಂಪುಕೋಟೆಯನ್ನು ಬ್ಯಾಕ್ ಡ್ರಾಪ್ ಮಾಡಿಕೊಂಡು ಆ ನಾಟಕ ಪ್ರದರ್ಶಿಸಿದರು. ಅದಾದ ಮೇಲೆ ಕನ್ನಡ ನಾಟಕ, ರಂಗಭೂಮಿ ಕುರಿತು ಅಖಿಲ ಭಾರತ ಮಟ್ಟದಲ್ಲಿ ಚರ್ಚೆ ಆರಂಭವಾಯಿತು. ಕನ್ನಡದ ನಾಟಕಕಾರನ ಬಗ್ಗೆ ದೊಡ್ಡ ಪ್ರಮಾಣದ ಮೆಚ್ಚುಗೆ, ಸಂತೋಷ ವ್ಯಕ್ತವಾಯಿತು. ಈ ಮೊದಲು ಶ್ರೀರಂಗರಿಗೂ ಅಖಿಲ ಭಾರತ ಖ್ಯಾತಿ ಇತ್ತು. ಆದರೂ ತುಘಲಕ್ ನಾಟಕದಿಂದ ಕಾರ್ನಾಡರಿಗೆ ಬಂದ ಕೀರ್ತಿ ಹೆಚ್ಚು ವ್ಯಾಪಕವಾಗಿತ್ತು. ಈ ನಾಟಕ ಕನ್ನಡದಲ್ಲಿ ಪ್ರಯೋಗ ವಾಗುವುದಕ್ಕಿಂತ ಮುಂಚೆಯೇ ಹಿಂದಿಯಲ್ಲಿ ಅಲ್ಕಾಜಿಯವರ ಮೂಲಕ ಪ್ರಯೋಗ ಕಂಡಿತ್ತು. ಕನ್ನಡ ನಾಟಕಕಾರನೊಬ್ಬ ಅಖಿಲ ಭಾರತ ಮಟ್ಟದಲ್ಲಿ ಖ್ಯಾತಿ ಪಡೆದಿದ್ದ. ಕನ್ನಡದಲ್ಲಿ ತುಘಲಕ್ ನಾಟಕ ಪ್ರಯೋಗ ಮಾಡಲು, ಬಿ. ಚಂದ್ರಶೇಖರ ಅವರ ನಾಯಕತ್ವದಲ್ಲಿ ಒಂದು ಸಮಿತಿಯನ್ನೇ ಮಾಡಿದರು. ಲಂಕೇಶ್ ಅವರಿಗೆ ಪಾತ್ರಗಳ ಆಯ್ಕೆ ಮಾಡುವ ಜವಾಬ್ದಾರಿ ಕೊಟ್ಟರು. ಅವರು ಸಿ. ಆರ್. ಸಿಂಹ ಮುಂತಾದವರನ್ನ ಆಯ್ಕೆ ಮಾಡಿದರು. ಅದು ಒಂದು ರೀತಿಯಲ್ಲಿ ಬೆಂಗಳೂರಿನ ಎಲ್ಲ ಹವ್ಯಾಸಿ ರಂಗತಂಡಗಳನ್ನು ಬೆಸೆಯುವ ಕ್ರಿಯೆ ಆಗಿತ್ತು. ತುಘಲಕ್ ಬೆಂಗಳೂರಿನ ಎಲ್ಲ ಹವ್ಯಾಸಿ ಕಲಾವಿದರನ್ನು ಒಗ್ಗೂಡಿಸಿ ಪ್ರಯೋಗವಾದ ನಾಟಕ ಎಂಬುದು ಇಂದಿಗೂ ಇತಿಹಾಸವಾಗಿ

ಉಳಿದಿದೆ. ಅಲ್ಲಿಯವರೆಗೂ ಕಾರ್ನಾಡ ಅವರ ಜೊತೆ ನನಗೆ ವೈಯಕ್ತಿಕವಾಗಿ ಸ್ನೇಹ ಸಂಪರ್ಕ ಇರಲಿಲ್ಲ. ಅದಕ್ಕೆ ಕಾರಣ ಅವರು ಬೆಂಗಳೂರಿನಲ್ಲಿರಲಿಲ್ಲ, ಬೊಂಬಾಯಿಯಲ್ಲಿದ್ದರು. ಆಗಾಗ ಬೆಂಗಳೂರಿಗೆ ಬಂದು ಹೋಗುತ್ತಿದ್ದರು.

ಆ ಕಾಲದಲ್ಲಿ ಈ ನವ್ಯ ಸಾಹಿತಿಗಳಿಗೆ ಇತರ ಸಾಹಿತಿಗಳ ಮಧ್ಯೆ ಒಳ್ಳೆಯ ಸ್ನೇಹ ಸಂಪರ್ಕ ಇರಲಿಲ್ಲ. ಕಾರ್ನಾಡರು ಹೆಚ್ಚಾಗಿ ಧಾರವಾಡದ ನವ್ಯದವರ ಗುಂಪಿಗೆ ಸೇರಿದವರು, ಅಲ್ಲಿನ ಸ್ಟಾರ್ ಅವರು. ೭೦ರ ದಶಕದ ಆರಂಭದಲ್ಲಿ ಬೆಂಗಳೂರಿನಲ್ಲಿ ವಿಶ್ವವಿದ್ಯಾಲಯದ ಕನ್ನಡ ವಿಭಾಗದವರು 'ಕನ್ನಡ ನಾಟಕ ಪರಂಪರೆ ಮತ್ತು ಪ್ರಯೋಗ' ಅಂತ ಒಂದು ವಿಚಾರ ಸಂಕಿರಣ ಹಮ್ಮಿಕೊಂಡಿದ್ದರು. ಅದರ ಅಂಗವಾಗಿ ಬಯಲು ರಂಗೋತ್ಸವವನ್ನು ನಡೆಸಿದೆವು. ನಾನಾಗ ಪ್ರತಿಮಾ ರಂಗ ತಂಡದ ಸಂಚಾಲಕರಲ್ಲೊಬ್ಬನಾಗಿದ್ದೆ. ಪ್ರತಿಮಾ ನಾಟಕರಂಗ ಮತ್ತು ಆರ್. ನಾಗೇಶ ಅವರ ಕನ್ನಡ ಸಾಹಿತ್ಯ ಕಲಾ ಸಂಘ ಜಂಟಿಯಾಗಿ ಈ ಬಯಲು ರಂಗೋತ್ಸವವನ್ನು ಆಯೋಜಿಸಿದ್ದೆವು. ಆಗ ರವೀಂದ್ರ ಕಲಾಕ್ಷೇತ್ರವನ್ನು ರಿಪೇರಿಗಾಗಿ ಮುಚ್ಚಿದ್ದರು. ಬಿ. ವಿ. ಕಾರಂತರು ಕಲಾಕ್ಷೇತ್ರದ ಹಿಂಭಾಗದಲ್ಲಿ ವ್ಯವಸ್ಥೆ ಮಾಡಿ ಈ ಉತ್ಸವದ ತಯಾರಿ ಮಾಡಿದರು. ಈ ಬಯಲು ರಂಗೋತ್ಸವಕ್ಕಾಗಿಯೇ ಲಂಕೇಶ ಎರಡು ನಾಟಕ ಸಂಕ್ರಾಂತಿ ಮತ್ತು ದೊರೆ ಈಡಿಪಸ್ (ಅನುವಾದ) ಹಾಗೂ ಕಂಬಾರರು ಜೋಕುಮಾರ ಸ್ವಾಮಿ ನಾಟಕ ಬರೆದರು. ಆಗ ದೊರೆ ಈಡಿಪಸ್ ನಾಟಕದ ದೊರೆ ಪಾತ್ರ ಮತ್ತು ಜೋಕುಮಾರ ಸ್ವಾಮಿಯಲ್ಲಿನ ಗೌಡನ ಪಾತ್ರವನ್ನು ಗಿರೀಶ ಕಾರ್ನಾಡ ಮಾಡಿದರು. ಆಗ ರಂಗೋತ್ಸವದ ಸಂಘಟನಾ ಕೆಲಸ ಮಾಡುತ್ತಿದ್ದ ನಾನು ಅವರೆಲ್ಲರ ಜೊತೆಗಿದ್ದೆನೇ ಹೊರತು ಕಾರ್ನಾಡ ಅವರ ಜೊತೆ ಹೆಚ್ಚಿನ ಒಡನಾಟ ಇರಲಿಲ್ಲ. ಹೆಚ್ಚಿನ ಒಡನಾಟ ಆರಂಭವಾಗಿದ್ದು ಬಹುಶಃ ೮೦ನೇ ದಶಕದ ಕೊನೆಯ ಭಾಗದಲ್ಲಿ ಅವರು ಬೆಂಗಳೂರಿಗೆ ಬಂದು ಸೆಟಲ್ ಆದ ಮೇಲೆ. ಜಯನಗರದಲ್ಲಿ ಬಾಡಿಗೆ ಮನೆ ಮಾಡಿದ ಕಾರ್ನಾಡರು ಬೆಂಗಳೂರಿನ ಸಾಹಿತಿ ಕಲಾವಿದರನ್ನು ತಮ್ಮ ಮನೆಗೇ ಕರೆದು ಚರ್ಚೆ ಸಂವಾದ ಮಾಡ್ತಾ ಇದ್ದರು. ಆಗ ನಮ್ಮ ಸಂಪರ್ಕ ಹೆಚ್ಚಾಯಿತು. ಮುಂದೆ ಜೆ. ಪಿ. ನಗರದ ನಮ್ಮ ಮನೆಯ ಹತ್ತಿರವೇ ಅವರು ಸ್ವಂತ ಮನೆ ಮಾಡಿದರು. ನಾನೂ ರಂಗಭೂಮಿಯವನಾಗಿದ್ದರಿಂದ ಹೆಚ್ಚು ಆತ್ಮೀಯತೆ ಒಡನಾಟ ನಮ್ಮ ಕುಟುಂಬಗಳ ಮಧ್ಯೆ ಬೆಳೆಯಿತು. ಪ್ರತಿದಿನ ಬೆಳಗಿನ ವಾಕಿಂಗ್ ಹೋಗುವುದು ಅವರಿಗೆ ನಿಯಮಿತ ರೂಢಿ. ಅವರ ಬೆಳಗಿನ ವಾಕಿಂಗ್ ಅಂದ್ರೆ ಸಾಮಾನ್ಯ ಅಲ್ಲ. ಹತ್ತು, ಹನ್ನೊಂದು ಕಿಲೋ ಮೀಟರ್ ವಾಕಿಂಗ್ ಮಾಡಿದ್ದೂ ಇದೆ. ನಮ್ಮದೆಲ್ಲ ಎರಡು ಮೂರು ಕಿಲೋ ಮೀಟರ್ ವಾಕು. ಕೆಲವು ಸಲ ಜೊತೆಗೂಡಿ ವಾಕ್ ಮಾಡ್ತಿದ್ದೆವು.

ಗಿರೀಶ್ ಕಾರ್ನಾಡ ಅವರಿಗೆ ಹೆಚ್ಚು ಸ್ನೇಹಿತರಿರಲಿಲ್ಲ. ಕಾರಣ ಅವರ ಬರವಣಿಗೆ, ನಾಟಕ, ಸಿನಿಮಾ, ದೇಶದ ವಿವಿಧ ಸಂಸ್ಥೆಗಳ ಸಂಪರ್ಕ, ಜವಾಬ್ದಾರಿ – ಹೀಗಾಗಿ ಅವರಿಗೆ ಬಿಡುವು ಸಿಗುತ್ತಿರಲಿಲ್ಲ, ಕೆಲವೇ ಕೆಲವು ಜನರ ಜೊತೆ ಸ್ನೇಹ ಇಟ್ಟುಕೊಂಡಿದ್ರು. ಆದರೆ ಪಬ್ಲಿಕ್ ಇಶ್ಯೂಗಳು ಬಂದಾಗ ಎಲ್ಲರ ಜೊತೆ ಮುಕ್ತವಾಗಿ ಭಾಗವಹಿಸುತ್ತಿದ್ದರು. ಉದಾಹರಣೆಗೆ ಬಾಬಾಬುಡನ್‌ಗಿರಿ ವಿಷಯ.



ಕಲಬುರ್ಗಿ ಹತ್ಯೆ ಪ್ರತಿಭಟಿಸಿ ಪ್ರೊ॥ ಬರಗೂರು ರಾಮಚಂದ್ರಪ್ಪ, ಗೌರಿ ಲಂಕೇಶ್, ಪ್ರೊ॥ ಮರುಳಸಿದ್ದಪ್ಪ ಅವರೊಂದಿಗೆ ಗಿರೀಶ ಕಾರ್ನಾಡ



ಧಾರವಾಡದ ಇಪ್ಟಾ ಸುವರ್ಣ ಮಹೋತ್ಸವ ಸಮಾರಂಭದಲ್ಲಿ ಹಿಂದಿ ನಟ ಎ. ಕೆ. ಹಂಗಲ್, ಗಿರೀಶ ಕಾರ್ನಾಡ, ಪ್ರೊ॥ ಸಂಪಿಗೆ ತೋಂಟದಾರ್ಯ ಹಾಗೂ ಡಾ॥ ಸಿದ್ದನಗೌಡ ಪಾಟೀಲ

ಎಡಪಂಥೀಯರು ಒಂದು ಫ್ಯಾಕ್ಟ್ ಫೈಂಡಿಂಗ್ ಕಮಿಟಿ ಅಂತ ಮಾಡಿದರು. ಗಿರೀಶ ಅವರ ನೇತೃತ್ವದಲ್ಲಿ ನಾವೆಲ್ಲ ಹೋಗ್ಬೇಕು ಅಂತಾಯ್ತು. ಗಿರೀಶ ಅವರನ್ನು ಒಪ್ಪಿಸೋ ಜವಾಬ್ದಾರಿ ನನಗೆ ಕೊಟ್ರು. ನಾನು ಹೇಳಿದಾಗ ಸಂತೋಷದಿಂದ ಒಪ್ಪಿಕೊಂಡರು ಮಾತ್ರ ಅಲ್ಲ, ತಮ್ಮ ಸ್ವಂತ ಖರ್ಚಿನಲ್ಲಿ ವಾಹನ ಬುಕ್ ಮಾಡಿದರು. ನಮ್ಮ ಸಮಿತಿಯ ಹತ್ತಾರು ಜನ ಹೊರಟ್ವಿ. ಬಾಬಾಬುಡನ್‌ಗಿರಿಗೆ ಹೋಗುವಾಗ ದಾರಿಯಲ್ಲಿ ಬೇಲೂರ ಹತ್ತಿರ ನಮ್ಮನ್ನು ಬಂಧಿಸಿ ಹಾಸನಕ್ಕೆ ತಂದು ಉಳಿಸಿ ಮಾರನೆದಿನ ವಾಪಸ್ ಕಳಿಸಿದರು. ಹೀಗೆ ಪಬ್ಲಿಕ್ ವಿಷಯಕ್ಕೆ ಸಂಬಂಧಿಸಿದಂತೆ ಯಾವುದೇ ಸಭೆ, ಪ್ರತಿಭಟನೆ ಇದ್ರೆ ತಪ್ಪದೇ ಭಾಗವಹಿಸ್ತಿದ್ರು.

ಕೋಮುವಾದಗಳು ಬಾಬ್ರಿ ಮಸೀದಿ ಒಡೆದಾಗ ಗಿರೀಶ್ ಕಾರ್ನಾಡ ಅವರು ಕೇಂದ್ರದ ಸಂಗೀತ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿದ್ದರು. ಬಾಬ್ರಿ ಮಸೀದಿ ಒಡೆದ ಒಂದೇ ವಾರದಲ್ಲಿ ಕೇಂದ್ರ ಸಂಗೀತ ನಾಟಕ ಅಕಾಡೆಮಿ, ದೆಹಲಿಯ ಸಹಮತ, ದೇಶದ ಹಲವಾರು ಪ್ರಗತಿಪರ ಸಂಘಟನೆಗಳನ್ನು ಸೇರಿಸಿ 'ಸಾಮರಸ್ಯ ಸಮಾವೇಶ' ಮಾಡಿದರು. ಆ ಸಮಾವೇಶಕ್ಕೆ ನಾನು, ಜಯಶ್ರೀ, ಜಿ. ಕೆ. ಗೋವಿಂದರಾವ್, ಪೊನ್ನಪ್ಪ, ಕಪ್ಪಣ್ಣ ಮುಂತಾದವರು ಇಲ್ಲಿಂದ ಹೋಗಿದ್ದೆವು. ನಮ್ಮನ್ನೆಲ್ಲ ಮುತುವರ್ಜಿ ವಹಿಸಿ ಕರಕೊಂಡು ಹೋಗಿದ್ದೇ ಗಿರೀಶ ಅವರು. ಸಾರ್ವಜನಿಕ ವಿಷಯ, ಸೌಹಾರ್ದತೆ ಕುರಿತು ಪ್ರಶ್ನಾತೀತವಾದ ಬದ್ಧತೆ ಅವರಿಗಿತ್ತು.

ಗಿರೀಶ ಸ್ನೇಹಕ್ಕೆ ಎಷ್ಟು ಬೆಲೆ ಕೊಡ್ತಿದ್ರು, ಎಂಥ ರಿಸ್ಕ್ ತಗೋತಿದ್ರು ಅನ್ನೋದಕ್ಕೆ ಒಂದು ಘಟನೆ ನೆನಪಾಗ್ತದೆ. ಹಿಂದೆ ರಾಜ್ಯ ಸಭಾ ಚುನಾವಣೆಗೆ ೨೦೧೧ರಲ್ಲಿ ಕಾಂಗ್ರೆಸ್, ಜೆ. ಡಿ. ಎಸ್.ನಿಂದ ನನ್ನನ್ನು ಅಭ್ಯರ್ಥಿಯನ್ನಾಗಿ ಮಾಡಿದರು, ಚಿತ್ರ ನಟಿ ಹೇಮಮಾಲಿನಿ ವಿರುದ್ಧ. ಆಗ ಬೆಂಗಳೂರಿನ ಸಾಹಿತಿಗಳು, ಕಲಾವಿದರು, ಪ್ರಗತಿಪರರು ನನ್ನನ್ನು ಬೆಂಬಲಿಸಿ ಒಂದು ಪತ್ರಿಕಾ ಗೋಷ್ಠಿ ಏರ್ಪಾಡು ಮಾಡಿದರು. ಸ್ನೇಹಿತರು ಗಿರೀಶ ಕಾರ್ನಾಡ ಬಂದ್ರೆ ಒಳ್ಳೆಯದು ಎಂದು ಹೇಳಿದರು. ಪತ್ರಿಕಾ ಗೋಷ್ಠಿಯ ಹಿಂದಿನ ದಿನ ನಾನು ಗಿರೀಶಗೆ ಫೋನ್ ಮಾಡಿದೆ. ಅವರು ಬೊಂಬಾಯಿಯಲ್ಲಿ ಶೂಟಿಂಗ್‌ನಲ್ಲಿದ್ದರು. ವಿಷಯ ಕೇಳಿ ಮಾರನೇ ದಿನ ಮೊದಲನೇ ವಿಮಾನವೇರಿ ಬೆಂಗಳೂರಿಗೆ ಬಂದು, ನೇರವಾಗಿ ಪತ್ರಿಕಾಗೋಷ್ಠಿಗೆ ಹಾಜರಾಗಿ, ಮುಂದಿನ ವಿಮಾನವೇರಿ ಬೊಂಬಾಯಿಗೆ ಹೋದರು. ಸ್ನೇಹಕ್ಕೆ ಅವರು ಕೊಡುವ ಬೆಲೆಗೆ ಉದಾಹರಣೆ ಇದು. ಆಗಾಗ ಅವರ ಮನೆ, ನಮ್ಮ ಮನೆ ಕೆಲವೇ ಸ್ನೇಹಿತರ ಜೊತೆ ಆಪ್ತ ಚರ್ಚೆಯ ಕೇಂದ್ರಗಳಾಗಿರುತ್ತಿದ್ದವು. ಡಿ. ಆರ್. ನಾಗರಾಜ, ವೈ.ಎನ್.ಕೆ., ರಾಮಚಂದ್ರ ಶರ್ಮಾ, ಸಿದ್ಧಲಿಂಗಯ್ಯ, ನಾನು, ಗಿರೀಶ ಇಂಥ ಕೆಲವು ಸ್ನೇಹಿತರು ಆಗಾಗ ಸೇರುತ್ತಿದ್ದೆವು. ಇಂಥ ಆಪ್ತ ಚರ್ಚೆ ಗಿರೀಶ ಅವರಿಗೆ ಬಹಳ ಇಷ್ಟವಾಗುತ್ತಿತ್ತು.

ಗಿರೀಶ ಕೆಲವೊಮ್ಮೆ ಬಹಳ ಬ್ಲಂಟ್ ಆಗಿ, ಅಂದ್ರೆ ಇದ್ದಕ್ಕಿದ್ದಂತೆ ತಮಗನ್ನಿಸಿದ್ದನ್ನು ಹೇಳಿ ಬಿಡೋರು. ವ್ಯಕ್ತಿಗಳ, ಸಂದರ್ಭದ ಕುರಿತ ಇಂಥ ಅವರ ಹೇಳಿಕೆಗಳು ಅವರಿಗೂ, ಅವರ ಸ್ನೇಹಿತರಿಗೂ ಮುಜುಗರ ಮತ್ತು ತೊಂದರೆಯನ್ನು ಉಂಟುಮಾಡಿದ ಉದಾಹರಣೆಗಳಿವೆ. ಈ ನವ್ಯದ ತಲೆಮಾರಿನ ಎಲ್ಲರೂ ಹಾಗೇ. ನವೋದಯ, ಪ್ರಗತಿಶೀಲರಲ್ಲಿ ಹಾಗಿರಲಿಲ್ಲ. ಹೀಗೆ ಬ್ಲಂಟ್ ಆಗಿ ಮಾತಾಡೋದು ನವ್ಯಕಾಲದ ಅಡಿಗರಿಂದ್ಲೇ ಆರಂಭವಾಯಿತು. ಅಡಿಗರು ಒಂದು ಸಲ 'ಪುಟ್ಟಪ್ಪ ಕವಿಯಾದ್ರೆ ನಾನು ಕವಿ ಅಲ್ಲ, ನಾನು ಕವಿ ಆದ್ರೆ ಪುಟ್ಟಪ್ಪ ಕವಿ ಅಲ್ಲ' ಅಂತ ಹೇಳಿದ್ರು. ಈ ಲಂಕೇಶ ಇಂಥ ಅನೇಕ ಹೇಳಿಕೆಗಳನ್ನು ಕೊಡ್ತಾನೇ ಇದ್ರು. ಒಂದು ಸಲ



*ಗಿರೀಶ ಕಾರ್ನಾಡ ಕುಟುಂಬ*

ವೈ.ಎನ್.ಕೆ. ಮತ್ತು ಗಿರೀಶ ಅವರ ಸ್ನೇಹದ ಬಗ್ಗೆ ಅವರು 'ಪ್ರಣಯ ಮಿತ್ರರು' ಅಂತ ಲೇವಡಿ ಮಾಡಿದರು. ಹೀಗೆ ಪರಿಣಾಮಗಳನ್ನು ಲೆಕ್ಕಿಸದೇ ತಕ್ಷಣ ತೋಚಿದ್ದನ್ನು ಹೇಳುವುದು ನವ್ಯರ ಚಾಳಿ. ನವ್ಯದವರೇ ಆದ ಗಿರೀಶ ಅದರಿಂದ ಹೊರತಲ್ಲ. ಒಂದು ಸಲ ಕಾವೇರಿ ವಿವಾದ ನಡೆದಾಗ, ನ್ಯಾಯಾಲಯ ತಮಿಳುನಾಡಿಗೆ ಕರ್ನಾಟಕ ಕಾವೇರಿ ನೀರು ಬಿಡಬೇಕು ಅಂತ ಆದೇಶ ಕೊಟ್ಟಾಗ ಪತ್ರಕರ್ತರು ಹಿಂದೆ ಮುಂದೆ ಏನೂ ಹೇಳದೇ ನ್ಯಾಯಾಲಯ ತೀರ್ಪಿನ ಬಗ್ಗೆ ಅಭಿಪ್ರಾಯ ಕೇಳಿದರು. ಆಗ ಗಿರೀಶ 'ನ್ಯಾಯಾಲಯ ಹೇಳಿದರೆ ನೀರು ಬಿಡಬೇಕು' ಅಂತ ಹೇಳಿದರು. ಪರಿಣಾಮ ಗಿರೀಶ ವಿರುದ್ಧ ಕನ್ನಡ ಸಂಘಟನೆಗಳ ಹೋರಾಟ, ಅವರ ಮನೆ ಮೇಲೆ ಕಲ್ಲು ತೂರಾಟದ ಘಟನೆಗಳು ನಡೆದವು. ಇನ್ನೊಮ್ಮೆ ರಾಜ್ಯ ಸರಕಾರ ಆಯೋಜಿಸಿದ ಟಿಪ್ಪು ಕಾರ್ಯಕ್ರಮದಲ್ಲಿ ಅತಿಥಿಗಳಾಗಿದ್ದ ಗಿರೀಶ ಪ್ರಾಸಂಗಿಕವಾಗಿ 'ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಟಿಪ್ಪು ಹೆಸರಿಡಬೇಕು' ಅಂತ ಹೇಳಿದರು. ಅದು ದೊಡ್ಡ ಗಲಾಟೆಯಾಯಿತು. ಆಗ ಕೆಂಪೇಗೌಡರ ಹೆಸರಿಡಬೇಕೆಂಬ ಚರ್ಚೆ ಆಗುತ್ತಿತ್ತು. ಗಿರೀಶ ಕೆಂಪೇಗೌಡರ ವಿರೋಧಿ ಆಗಿರಲಿಲ್ಲ. ಅಂತರ ರಾಷ್ಟ್ರೀಯ ವಿಮಾನ ನಿಲ್ದಾಣ ದೇವನಹಳ್ಳಿಯಲ್ಲಿ ಇದ್ದುದರಿಂದ, ದೇವನಹಳ್ಳಿ ಟಿಪ್ಪು ಹುಟ್ಟಿದ ಊರಾಗಿದ್ದರಿಂದ ಅವರು ಹೀಗೆ ಹೇಳಿದರು. ಆದರೆ ಆಗಿನ ಸಂದರ್ಭದಲ್ಲಿ ಅವರನ್ನು ಹಿಂದೂ ವಿರೋಧಿ ಎಂದು ಬಿಂಬಿಸಿ, ಕೆಂಪೇಗೌಡ ವಿರೋಧಿ ಎಂದು ಗಲಾಟೆ ಮಾಡಲಾಯಿತು. ಗಿರೀಶ ಸಂದರ್ಭದ ಕುರಿತು ಯೋಚಿಸುತ್ತಿರಲಿಲ್ಲ. ತಮಗನ್ನಿಸಿದ್ದನ್ನು ಇದ್ದಕ್ಕಿದ್ದಂತೆ ಹೇಳಿ ವಿವಾದಕ್ಕೊಳಗಾಗುತ್ತಿದ್ದರು. ವ್ಯಾವಹಾರಿಕ ಜಾಣ್ಮೆ ಅವರಿಗಿರಲಿಲ್ಲ. ಈ ಮಾಧ್ಯಮಗಳೂ ಅವರನ್ನು ಇಂಥ ಪೇಚಿಗೆ ಉದ್ದೇಶಪೂರ್ವಕವಾಗಿ ಸಿಲುಕಿಸಿದ್ದವು. ಒಂದು ಸಲ ಎಡಪಂಥೀಯ ಸಂಘಟನೆಯೊಂದು ಆಹಾರದ ಸ್ವಾತಂತ್ರ್ಯಕ್ಕಾಗಿ ನಡೆಸಿದ ಕಾರ್ಯಕ್ರಮದಲ್ಲಿ ನಾನು, ಗಿರೀಶ ಭಾಗವಹಿಸಿದ್ದೆವು. ನಾವು ಆಹಾರದ ಹಕ್ಕು, ಸ್ವಾತಂತ್ರ್ಯವನ್ನು ಪ್ರತಿಪಾದಿಸಿದೆವು. ಆ ಸಂಘಟನೆಯ ಕಾರ್ಯಕರ್ತರು ಸಾಂಕೇತಿಕವಾಗಿ ದನದ ಮಾಂಸ ತಿಂದರು. ನಾವು ತಿಂದಿರಲಿಲ್ಲ. ಮಾರನೇದಿನ ಮಾಧ್ಯಮಗಳು ಗಿರೀಶ ಕಾರ್ನಾಡ, ಮರುಳಸಿದ್ದಪ್ಪ ಗೋಮಾಂಸ ಭಕ್ಷಿಸಿದರು ಎಂದು ಸುಳ್ಳು ಸುದ್ದಿ ಬರೆದು ಅಪಪ್ರಚಾರಕ್ಕೆ, ಗದ್ದಲಕ್ಕೆ ಕಾರಣವಾದವು.

ವ್ಯಕ್ತಿಶಃ ಗಿರೀಶ ಒರಟಾಗಿ ಮಾತನಾಡುವವರಲ್ಲ. ಆದರೂ ಕೆಲವು ವಿಚಾರಗಳಲ್ಲಿ ಅವರ ಮಾತುಗಳಿಗೆ ನನ್ನ ಒಪ್ಪಿಗೆ ಇರಲಿಲ್ಲ. 'ರವೀಂದ್ರನಾಥ ಟ್ಯಾಗೋರ ನಾಟಕಕಾರರೇ ಅಲ್ಲ' ಅಂತ ಗಿರೀಶ ಹೇಳಿದರು. ಇಂಥ ಮಾತುಗಳು ಧಾರವಾಡದ ಮನೋಹರ ಗ್ರಂಥಮಾಲೆಯ ಬಳಗದಿಂದ ಬರುತ್ತಿದ್ದವು. ಕುವೆಂಪು ನಾಟಕಕಾರ ಅಲ್ಲ, ಕವಿಯಂತೂ ಅಲ್ಲವೇ ಅಲ್ಲ ಅನ್ನುವ ಮಾತುಗಳು ಅಲ್ಲಿಂದಲೇ ಆರಂಭವಾದವು. ಇಂಥ ವಾತಾವರಣದ ಪ್ರಭಾವ ಅವರ ಮೇಲಿತ್ತು. ಆದರೆ ಬಹುತ್ವ, ಕೋಮುಸೌಹಾರ್ದತೆ, ವ್ಯಕ್ತಿ ಸ್ವಾತಂತ್ರ್ಯ ಇಂಥ ವಿಷಯಗಳಲ್ಲಿ ಗಿರೀಶ ಅವರ ಬದ್ಧತೆ ಪ್ರಶ್ನಾತೀತ. ಈ ವಿಷಯದಲ್ಲಿ ಅವರು ಜವಾಬ್ದಾರಿಯುತವಾಗಿದ್ದರು. ಆದರೆ ಹಲವಾರು ಬಾರಿ ಕೆಲವು ಮಾಧ್ಯಮಗಳು ಅವರ ಸಹಜ ಹೇಳಿಕೆಗಳನ್ನು ತಿರುಚಿ ಬರೆದು ವಿವಾದ ಸೃಷ್ಟಿಸುತ್ತಿದ್ದವು. ಇಂಥ ಸಂದರ್ಭಗಳನ್ನು ಕೆಲವು ಸಂಘಟನೆಗಳೂ, ವ್ಯಕ್ತಿಗಳೂ ದುರುಪಯೋಗ ಪಡಿಸಿಕೊಂಡದ್ದಿದೆ.

ಸಾಮಾನ್ಯವಾಗಿ ಪ್ರಚಲಿತವಾಗಿರುವಂಥ ಚರ್ಚೆ ಗಿರೀಶ ಕಾರ್ನಾಡರಿಗೆ 'ಕನ್ನಡ ಸರಿಯಾಗಿ ಬರುವುದಿಲ್ಲ' ಎಂಬುದು. ಇದು ಶುದ್ಧಾಂಗ ಸುಳ್ಳು. ಅವರ ಮನೆ ಮಾತು ಕೊಂಕಣಿ, ಅವರು ಕನ್ನಡವನ್ನು ಫಾರ್ಮಲ್ ಆಗಿ ಓದಿಲ್ಲ. ಫಾರ್ಮಲ್ ಆಗಿ ಅವರು ಸ್ಕೂಲ್‌ನಲ್ಲಿ ಓದಿರುವುದು ಸಂಸ್ಕೃತ. ಆದರೆ ಧಾರವಾಡ, ಹುಬ್ಬಳ್ಳಿ, ಸಿರ್ಸಿಯಲ್ಲಿ ಬೆಳೆದ ಯಾವ



*ಹಿಂದಿ ಚಲನಚಿತ್ರದಲ್ಲಿ ಶಬಾನಾ ಅಜ್ಮೆಯೊಂದಿಗೆ*

ಹುಡುಗನಿಗೂ ಕನ್ನಡ ರಕ್ತಗತವಾಗಿಬಿಡುತ್ತದೆ. ಅದು ಪರಿಸರದ ಭಾಷೆ, ಅವರು ಸೇರತಾ ಇದ್ದಂತಹ ಮನೋಹರ ಗ್ರಂಥಮಾಲೆಯ ಅಟ್ಟ ಆಗಲಿ, ಕರ್ನಾಟಕ ಕಾಲೇಜ್ ಆಗಲಿ, ಧಾರವಾಡ ಪರಿಸರ ಆಗಲಿ ಅಲ್ಲಿ ಕನ್ನಡ ಬಿಟ್ಟು ಇನ್ನೇನೂ ಇರಲಿಲ್ಲ. ಅವರ ತುಘಲಕ್ ನಾಟಕದ ಭಾಷೆ ಪಾದ್ರಿಗಳ ಭಾಷೆ ಎಂದು ಒಬ್ಬ ಹೆಸರಾಂತ ಲೇಖಕರು ಟೀಕಿಸಿದರು. ಆದರೆ ತುಘಲಕ್ ನಾಟಕದ ಭಾಷೆ ಕಾವ್ಯಾತ್ಮಕವಾಗಿದೆ. ತುಘಲಕ್ ಧಾರವಾಡ ಕನ್ನಡ ಮಾತಾಡ್ತಾನಾ, ಮೈಸೂರು ಕನ್ನಡ ಮಾತಾಡ್ತಾನಾ, ನಾಗರಿಕ ಕನ್ನಡ ಮಾತಾಡ್ತಾನಾ ಎಂದು ನೋಡುವುದು ಅರ್ಥವಿಲ್ಲದ್ದು. ಒಂದು ಪಾತ್ರದ ಭಾಷೆ ಯಾವುದು ಅನ್ನೋದನ್ನ ಅವರು ಹುಟ್ಟಿಬಂದ ಪರಿಸರ ಡಿಸೈಡ್ ಮಾಡ್ತದೆ. ತಲೆದಂಡ ನಾಟಕದಲ್ಲಿ ಅವರು ಗ್ರಾಂಥಿಕ ಕನ್ನಡವನ್ನು ಬಳಸಿಲ್ಲ. ಅದು ವಚನಕಾರರ ವಸ್ತುವನ್ನು ಆಧರಿಸಿದ ನಾಟಕ. ತಲೆದಂಡ, ಟಿಪ್ಪು ಸುಲ್ತಾನ ಕಂಡ ಕನಸು, ರಾಕ್ಷಸ–ತಂಗಡಿ ಇವು ಚಾರಿತ್ರಿಕ ನಾಟಕಗಳು. ಅವರು ಬರೆದ ನಾಲ್ಕು ಚಾರಿತ್ರಿಕ ನಾಟಕಗಳಲ್ಲಿ ಮೂರು ನಾಟಕಗಳು ಕರ್ನಾಟಕ ಇತಿಹಾಸಕ್ಕೆ ಸಂಬಂಧ ಪಟ್ಟವು. ಮೂರೂ ಸಂದರ್ಭಗಳು ಕರ್ನಾಟಕದ ಮುಖ್ಯವಾದ ಐತಿಹಾಸಿಕ ಸಂದರ್ಭಗಳು. ವಚನಕಾರರ ಚಳುವಳಿ ಯಶಸ್ವಿ ಆಗಿದ್ದರೆ ಭಾರತದ ಇತಿಹಾಸ, ಜಾತಿ ವ್ಯವಸ್ಥೆಯ ಚಿತ್ರಣವೇ ಬದಲಾಗುತ್ತಿತ್ತು. ಟಿಪ್ಪು ಗೆದ್ದಿದ್ದರೆ ವಸಾಹತುಶಾಹಿ



*ಕಾನೂರು ಹೆಗ್ಗಡತಿಯಲ್ಲಿ ಗಿರೀಶ ಕಾರ್ನಾಡ ಹಾಗೂ ತಾರಾ*

ಆಡಳಿತ ಅಂದೇ ಕೊನೆಯಾಗುತ್ತಿತ್ತು. ಪೇಶ್ವೆಗಳು, ನಿಜಾಮ ಬ್ರಿಟಿಷರ ಜೊತೆ ಸೇರಿಕೊಂಡು ಟಿಪ್ಪುಗೆ ಮೋಸ ಮಾಡಿದ್ರು. ರಾಕ್ಷಸ – ತಂಗಡಿ ನಾಟಕ ವಿಜಯನಗರ ಸಾಮ್ರಾಜ್ಯದ ಪತನದ ಸಂದರ್ಭ ಕುರಿತದ್ದು. ಇಂಥ ವಸ್ತುಗಳನ್ನು ಇಟ್ಟುಕೊಂಡು ನಾಟಕ ಬರೆಯುವುದು, ಬರಹಗಾರನಿಗೆ ಭಾಷೆಯ ಬಗ್ಗೆ, ಸಂಸ್ಕೃತಿ ಬಗ್ಗೆ ಒಂದು ಐಡೆಂಟಿಟಿ ಇದ್ರೆ ಮಾತ್ರ ಸಾಧ್ಯ. ಕನ್ನಡದ ಚರಿತ್ರೆಯನ್ನೇ ಗಮನದಲ್ಲಿಟ್ಟು ಕೊಂಡು, ಮುಖ್ಯವಾದ ಮೂರು ಸಂದರ್ಭಗಳನ್ನು ಗುರ್ತಿಸಿ ಆ ನಾಟಕಗಳನ್ನು ಬರೆದರು. ಕನ್ನಡದ ಜೊತೆಗಿನ ಅವರ ಸಂಬಂಧ ಗಾಢವಾದದ್ದು. ಕನ್ನಡ ಭಾಷೆ, ಸಂಸ್ಕೃತಿ, ಚರಿತ್ರೆಯನ್ನು ಅದ್ಭುತವಾಗಿ ತಮ್ಮ ನಾಟಕಗಳಲ್ಲಿ ಬಿಂಬಿಸಿದ್ದಾರೆ. ಚರಿತ್ರೆಯನ್ನು ಚೆನ್ನಾಗಿ ಓದಿಕೊಂಡವರು ಗಿರೀಶ. ತುಘಲಕ್ ನಾಟಕವನ್ನು ರೂಪಕವಾಗಿ ತಗೊಂಡಿದ್ದಾರೆ. ಚರಿತ್ರೆಯ ಸಂಗತಿ ಸತ್ಯಗಳಿಗಿಂತ ಹೆಚ್ಚಾಗಿ ಚರಿತ್ರೆಯ ಬ್ಯಾಕ್‌ಡ್ರಾಪ್ ಅಲ್ಲಿ ಮುಖ್ಯ. ಆದರೆ ತಲೆದಂಡ, ಟಿಪ್ಪು ಸುಲ್ತಾನ ಕಂಡ ಕನಸು, ರಾಕ್ಷಸ–ತಂಗಡಿ ಈ ಮೂರು ನಾಟಕಗಳಲ್ಲಿ ಚರಿತ್ರೆಯ ಸಂಗತಿ ಸತ್ಯಗಳೂ ಅವರಿಗೆ ಮುಖ್ಯವಾಗಿವೆ. ಆ ಸಂಗತಿ ಸತ್ಯಗಳನ್ನು ಇವರು ಗ್ರಹಿಸಿರೋದು ಒಬ್ಬ ಕ್ರಿಯೇಟಿವ್ ರೈಟರ್ ಆಗಿ, ಒಬ್ಬ ಇತಿಹಾಸಕಾರನಾಗಿ ಅಲ್ಲ. ಚರಿತ್ರೆಯ ಸಂಗತಿಯಿಂದ ಅವರು ದೂರ ಹೋಗಿಲ್ಲ. ಚರಿತ್ರೆಯ ಮರು ವ್ಯಾಖ್ಯಾನ ಮಾಡುವ ಮಹತ್ವದ ಕೆಲಸವನ್ನು ಗಿರೀಶ ತಮ್ಮ ಚಾರಿತ್ರಿಕ, ಪೌರಾಣಿಕ ನಾಟಕಗಳ ಮೂಲಕ ಮಾಡಿದ್ದಾರೆ. ಅವರ ಇತರ ನಾಟಕಗಳಲ್ಲಿ ಬಳಕೆ ಕನ್ನಡವನ್ನೇ ಬಳಸಿದ್ದಾರೆ. ಭಾಷೆಯ ಕುರಿತು ಅವರ ಮೇಲೆ ಆರೋಪ ಮಾಡಿದ್ದು ದುರುದ್ದೇಶದಿಂದ.

ಗಿರೀಶ ನಾಲ್ಕೈದು ಭಾಷೆಯ ಸಿನಿಮಾಗಳಲ್ಲಿ ನಟಿಸಿದ್ದಾರೆ. ಅವರು ಅತ್ಯುತ್ತಮ ನಟ. ಗಿರೀಶ ದೊರೆ ಈಡಿಪಸ್‌ನಾಗಿ ಮಾಡಿದ ಅದ್ಭುತ ನಟನೆ ಅನೇಕ ವರ್ಷಗಳ ಕಾಲ ನಮಗೆ ನೆನಪಿನಲ್ಲಿ ಉಳಿದಿತ್ತು. ಸಿನಿಮಾದ ಕುರಿತು ಅವರಿಗೆ ಅಂತಹ ಉತ್ಸಾಹ ಇರಲಿಲ್ಲ. ಅವರು ಆಗಾಗ ನನಗೆ ಹೇಳ್ತಿದ್ರು 'ಹೊಟ್ಟೆ ಪಾಡಿಗೆ ನಾನು ಸಿನಿಮಾದಲ್ಲಿ ನಟನೆ ಮಾಡೋದು, ನನಗೆ ನಿಜವಾದ ಆಸಕ್ತಿ ಇರೋದು ನಾಟಕ ಬರೆಯುವುದರಲ್ಲಿ' ಎಂದು. ಜೀವನ ನಿರ್ವಹಣೆಗೆ, ನಾಟಕ ಬರೆಯಲು ಹಣ ಬೇಕು. ಅದಕ್ಕಾಗಿ ಸಿನಿಮಾದಲ್ಲಿ ನಟಿಸುತ್ತೇನೆ ಎಂದರು. ಆದರೂ ಅವರು ಅದ್ಭುತ ನಟ ಎನ್ನುವುದರಲ್ಲಿ ಎರಡು ಮಾತಿಲ್ಲ. ಇತ್ತೀಚೆಗೆ ಅವರನ್ನು ಖಳನಾಯಕ ಪಾತ್ರಕ್ಕೆ ಆಯ್ಕೆ ಮಾಡುತ್ತಿದ್ದರು. ಒಂದು ತಮಾಷೆಯ ಸಂಗತಿ ಹೇಳ್ತೀನಿ. ಒಂದು ಸಲ ನಾನು, ಗಿರೀಶ, ಅಶಿಶ್ ನಂದಿ ಸೇರಿ ಗಾಂಧಿ ಬಜಾರಿನ ವಿದ್ಯಾರ್ಥಿ ಭವನಕ್ಕೆ ಕಾಫಿ ಕುಡಿಯಲು ನಡೀತಾ ಹೋಗ್ತಿದ್ವಿ. ಜನ ಗಿರೀಶ ಅವರನ್ನ ಉತ್ಸಾಹದಿಂದ ನೋಡ್ತಾ ಇದ್ರು. ಅಶಿಶ್ ನಂದಿ ನನಗೆ ಹೇಳಿದರು. 'ನೋಡಿ ಕರ್ನಾಟಕ ಜನಾ ಒಬ್ಬ ಲೇಖಕನನ್ನು ಇಷ್ಟು ರೋಮಾಂಚಿತರಾಗಿ ನೋಡ್ತಾ ಇದಾರೆ ಇದು ರೀಯಲಿ ಅಮೇಜಿಂಗ್' ಎಂದರು. ನಾನು ಸುಮ್ಮಿದ್ದೆ. ಆಗ ಗಿರೀಶ ಹೇಳಿದರು. ಹಾಗೇನೂ ಇಲ್ಲ. ಇತ್ತೀಚೆಗೆ ಒಂದು ತಮಿಳ ಸಿನಿಮಾದಲ್ಲಿ ನಾನು ಆ್ಯಕ್ಟ್ ಮಾಡೀದೀನಿ. ಅದು ಬೆಂಗಳೂರಲ್ಲಿ ನಡಿತಾ ಇದೆ. ಆ ಸಿನಿಮಾದಲ್ಲಿ ನಾನು ವಿಲನ್ ರೋಲ್ ಮಾಡಿದೀನಿ, ಅದಕ್ಕೆ ಜನಾ ನೋಡ್ತಾ ಇದಾರೆ. ಅವರ್‍ಯಾರೂ ನನ್ನನ್ನ ಲೇಖಕ, ನಾಟಕಕಾರ ಅಂತ ನೋಡ್ತಿಲ್ಲ. ನಾನು ಸಾಹಿತಿ ಅನ್ನೋದೂ ಅವರಿಗೆ ಗೊತ್ತಿಲ್ಲ ಅಂದರು. ಇದು ಗಿರೀಶ ಕಾರ್ನಾಡ. ಅವರಿಗೆ ತಮ್ಮ ಬಗ್ಗೆ ಯಾವ ಭ್ರಮೆಗಳೂ ಇರಲಿಲ್ಲ. ಜ್ಞಾನಪೀಠ ಪ್ರಶಸ್ತಿ ಬಂದಾಗ ಯಾವ ಸನ್ಮಾನವನ್ನೂ ಅವರು ಒಪ್ಪಿಕೊಳ್ಳಲಿಲ್ಲ. ತೀರ್ಥಹಳ್ಳಿಲಿ ಕಾನೂರು... ಸಿನಿಮಾ ಶೂಟಿಂಗ್ ನಡೀತಿರೋವಾಗ ಅಲ್ಲಿನ ಮುನಿಸಿಪಾಲ್ಟಿ ಯವರು ಏರ್ಪಡಿಸಿದ ಸನ್ಮಾನವನ್ನು ಅವರಿಗೆ ಬೇಸರ ಮಾಡ್ಬಾರ್ದು ಅಂತ ನಾನು ಒತ್ತಾಯ ಮಾಡಿದ್ದಕ್ಕೆ ಒಪ್ಪಿಕೊಂಡ್ರು.

ಪಕ್ಷರಾಜಕಾರಣದಲ್ಲಿ ಗಿರೀಶ ಅವರಿಗೆ ಒಲವು ಇರಲಿಲ್ಲ. ಯಾವುದೇ ಪಕ್ಷ ಕೆಟ್ಟ ಕೆಲಸ ಮಾಡಿದ್ರೂ ಅವರು ಟೀಕಿಸುತ್ತಿದ್ದರು. ಒಟ್ಟಾರೆ ಅವರ ರಾಜಕೀಯ ಚಿಂತನೆಗಳಲ್ಲಿ ಎಡಪಂಥೀಯ ಅನ್ನಿಸಿಕೊಳ್ಳುವಂಥ ತಾತ್ವಿಕತೆ ಇದೆ. ಅವರ ನಾಟಕಗಳಿಂದಲೂ ಅದು ಅರ್ಥವಾಗುತ್ತದೆ. ಮಾರ್ಕ್ಸ್‌ವಾದಿ ಹಿನ್ನೆಲೆಯಲ್ಲಿ ಅವರು ಕೆಲವು ತೀರ್ಮಾನಕ್ಕೆ ಬರ್ತಿದ್ರು. ಆದರೆ ರಾಜಕೀಯವಾಗಿ ಯಾವುದೇ ಪಕ್ಷವನ್ನು ಅವರು ಟೀಕೆ ಮಾಡ್ತಿದ್ರು. ವಿಶೇಷವಾಗಿ ಅವರು ಬಿ.ಜೆ.ಪಿ.ಯನ್ನು ವಿರೋಧಿಸ್ತಿದ್ರು. ಅದನ್ನ ಬಹಳ ನಿರ್ದಾಕ್ಷಿಣ್ಯವಾಗಿ ಅವರು ಹೇಳ್ತಿದ್ರು. ಕೋಮುವಾದಿ ರಾಜಕಾರಣ ಅವರನ್ನ ಕೆರಳಸ್ತಾ ಇತ್ತು. ಭ್ರಷ್ಟಾಚಾರ, ದುರಾಡಳಿತ ವನ್ನು ಅವರು ಟೀಕಿಸ್ತಿದ್ರು. ಆದರೆ ಕೋಮುವಾದಿ ರಾಜಕಾರಣ ಅಪಾಯಕಾರಿ ರಾಜಕಾರಣ, ಇದು ದೇಶವನ್ನು ದುರಂತದ ಕಡೆ ತೆಗೆದುಕೊಂಡು ಹೋಗ್ತದೆ, ಅಂತರ್ ಯುದ್ಧವನ್ನು ಸೃಷ್ಟಿ ಮಾಡ್ತದೆ ಅನ್ನೋದು ಅವರ ನಂಬಿಕೆ. ಸ್ವತಃ ಅವರ ಕುಟುಂಬ ಜಾತಿವಾದಕ್ಕೆ ವಿರೋಧವಾಗಿತ್ತು. ಅವರ ಮದುವೆಯೂ ಅಸಾಂಪ್ರದಾಯಿಕವಾಗಿಯೇ ನಡೆದಿತ್ತು.

ಒಮ್ಮೆ ಗಿರೀಶ ಅವರು ಮುಂಬೈನ ಮರಾಠಿ ಸಾಹಿತ್ಯ ಸಮ್ಮೇಳನದ ಉದ್ಘಾಟಕರಾಗಿ ಹೋಗಿದ್ರು. ಆಗ ಮರಾಠಿ ಭಾಷಾಂಧರನ್ನು ಟೀಕಿಸಿ ಮಾತನಾಡಿದರು. ಆಗ ಶಿವಸೇನೆಯ ಜನ ಇವರು ಬಾಂಬೆಯಲ್ಲಿ ಬದುಕುವುದೇ ಕಷ್ಟ ಎಂಬ ವಾತಾವರಣ ನಿರ್ಮಿಸಿದರು. ಆ ಸಂದರ್ಭದಲ್ಲಿಯೇ ಅವರು ಮುಂಬೈನಿಂದ ಬೆಂಗಳೂರಿಗೆ ಬಂದರು. ಮರಾಠಿ ಭಾಷಾಂಧರೂ ಅವರನ್ನು ಒಪ್ಪಲಿಲ್ಲ. ಕನ್ನಡ ಭಾಷಾಂಧರೂ ಅವರನ್ನು ಟೀಕಿಸಿದರು. ಕೆಲವು ಖ್ಯಾತ ಸಾಹಿತಿಗಳೇ ಅವರು 'ಕೊಂಕಣಿ' ಅವರಿಗೆ ಕನ್ನಡ ಬರೋದಿಲ್ಲ ಎಂದು ಹೊಟ್ಟೆಕಿಚ್ಚಿನಿಂದ ಟೀಕಿಸಿದರು. ಗಿರೀಶ ಭಾಷಾಂಧತೆ, ಜಾತೀಯತೆ, ಕೋಮುವಾದ ವನ್ನು ತೀವ್ರವಾಗಿ ವಿರೋಧಿಸಿದರು. ಆ ಕಾರಣ ಕ್ಕಾಗಿಯೇ ಅವರ ನಿಧನದ ಸಂದರ್ಭದಲ್ಲಿ ಕೋಮು ವಾದಿಗಳು ಸಂಭ್ರಮಿಸಿದರು. ಇವು ಕಲಬುರ್ಗಿ, ಗೌರಿ, ಪಾನ್ಸರೆ, ದಾಭೋಲ್ಕರ್ ಅವರುಗಳನ್ನು ಕೊಂದ ಮನಸುಗಳು. ಇವೆಲ್ಲ ಲಂಪನ್ ಎಲಿಮೆಂಟ್ಸ್. ಇವತ್ತು ಇಂಥ ಒಂದು ಟ್ರೆಂಡ್ ಇದೆ. ತರ್ಕ ವಿವೇಕವನ್ನು ಒಪ್ಪದ ಕೊಳಕು ಮನಸುಗಳಿವು. ಇವುಗಳನ್ನು ಇಗ್ನೋರ್ ಮಾಡಬೇಕು. ಮನಸುಗಳನ್ನು ಬೆಸೆಯುವ, ಕಟ್ಟುವ ಕೆಲಸದಲ್ಲಿ ನಾವು ಕ್ರಿಯಾಶೀಲರಾಗಬೇಕು.

**ಡಾ॥ ಕೆ. ಮರುಳಸಿದ್ದಪ್ಪ**
ನಂ. ೧೫೭, ೧೨ನೇ ಅಡ್ಡರಸ್ತೆ, ಜೆ. ಪಿ. ನಗರ ೨ನೇ ಹಂತ
ಬೆಂಗಳೂರು – ೫೬೦ ೦೭೮


*ಡಾ॥ ಕೆ. ಮರುಳಸಿದ್ದಪ್ಪ ಅವರ ಕುಟುಂಬದೊಂದಿಗೆ ಕಾರ್ನಾಡರು*



ಪ್ರತಿಭಟನೆಯಲ್ಲಿ ನಿರತರಾದ
ಗಿರೀಶ ಕಾರ್ನಾಡ




# ದೇಶವೆಂದರೆ ಮಣ್ಣಿನ ಪವಿತ್ರೀಕರಣ ಅಲ್ಲ

ಡಾ॥ ದಿನೇಶ್ ನಾಯಕ್

ಕಳೆದ ಐದು ವರ್ಷಗಳ ಕಾಲ ಈ ದೇಶವನ್ನು ಆಳಿದ ಬಿಜೆಪಿ ಆಡಳಿತದ ರಾಜನೀತಿ ಮತ್ತು ಆರ್ಥಿಕ ನೀತಿಯ ಬಗ್ಗೆ ಈಗಾಗಲೇ ಸಾಕಷ್ಟು ಚರ್ಚೆ ವಾದ–ವಾಗ್ವಾದಗಳು ಈ ದೇಶದಾದ್ಯಂತ ನಡೆದಿದ್ದು, ಇದೀಗ ಮತ್ತೆ ಬಿಜೆಪಿ ಮುಂದಾಳತ್ವದ ಎನ್‌ಡಿಎ ಸರ್ಕಾರ ಕೇಂದ್ರದಲ್ಲಿ ಆಡಳಿತದ ಚುಕ್ಕಾಣಿಯನ್ನು ಹಿಡಿದಿದೆ. ಚುನಾವಣಾ ಫಲಿತಾಂಶಕ್ಕಿಂತ ಮೊದಲೇ ನಡೆದ ಮತಗಟ್ಟೆ ಸಮೀಕ್ಷೆಯಲ್ಲಿ ಬಿಜೆಪಿ ನೇತೃತ್ವದ ಎನ್‌ಡಿಎ ಮೈತ್ರಿಕೂಟದ ದಿಗ್ವಿಜಯದ ಬಗ್ಗೆ ಎಲ್ಲ ಮಾಧ್ಯಮಗಳು ಪ್ರಸಾರ ಮಾಡುತ್ತಿದ್ದಂತೆ ಷೇರುಪೇಟೆ ಸಂವೇದಿ ಸೂಚ್ಯಂಕದಲ್ಲಿ ಏರಿಕೆ ಕಂಡುಬರಲು ಶುರುವಾಯಿತು. ಮತ ಎಣಿಕೆ ಆರಂಭಗೊಂಡು, ನಿಜ ಫಲಿತಾಂಶ ಹೊರಬೀಳುತ್ತಿದ್ದಂತೆ ಷೇರುಪೇಟೆಯ ಇತಿಹಾಸದಲ್ಲಿ ಹಿಂದೆಂದೂ ಕಾಣದಂತಹ ಗೂಳಿಯ ನಾಗಾಲೋಟ ಆರಂಭಗೊಂಡಿತ್ತು. ನರೇಂದ್ರ ಮೋದಿಯವರ ಗೆಲುವಿನಿಂದಾಗಿ ವಿಶ್ವದ ೬ನೇ ಅತಿದೊಡ್ಡ ಎಂದು ಹೇಳಲಾಗುತ್ತಿರುವ ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಈಗಾಗಲೇ ಒಂದು ಬಗೆಯ ಸಂಚಲನ ಉಂಟಾಗಿದ್ದು, ಮುಂದೆ ಪ್ರಗತಿಗೆ ವೇಗ ದೊರೆಯಲಿದೆ ಎಂದು ಕಾರ್ಪೊರೇಟ್ ಬಳಗ ಗುಸುಗುಸು ಮಾತನಾಡತೊಡಗಿತು. ಮತ್ತೆ ಮೋದಿ ಸರ್ಕಾರ ಎಂಬುದು ಕಾರ್ಪೊರೇಟ್ ಜಗತ್ತಿನಲ್ಲಿ ಹರ್ಷೋಲ್ಲಾಸ ತಂದ ಈ ಹೊತ್ತಲ್ಲಿ ಈಗ ಮತ್ತೆ ದೇಶದ ರಾಜಕೀಯ ಪಂಡಿತರು, ಆರ್ಥಿಕ ವಿಶ್ಲೇಷಣೆಕಾರರು, ರಾಜಕೀಯ ವಿಜ್ಞಾನಿಗಳು ಮತ್ತು ಸಮಾಜ ವಿಜ್ಞಾನಿಗಳು ದೇಶದ ಆರ್ಥಿಕ ನೀತಿ ಮತ್ತು ಸುಧಾರಣೆಗಳ ಬಗ್ಗೆ ಬಿರುಸಿನಿಂದ ಮಾತನಾಡತೊಡಗಿದ್ದಾರೆ.

ಈ ದೇಶದ ಆರ್ಥಿಕ ನೀತಿಗೆ ಸಂಬಂಧಿಸಿದಂತೆ ೫ ವರ್ಷಗಳ ಕಾಲದ ಮೋದಿ ಸರ್ಕಾರದ ನಡೆಗಳು ಮತ್ತು ಮುಂದೆ ಅವರು ಕ್ರಮಿಸಬಹುದಾದ ದಾರಿ ಅಥವಾ ಮೋದಿ ಪೂರ್ವದ ಸರಕಾರಗಳ ನೀತಿಗಳ ಬಗ್ಗೆ ನ್ಯಾಯತೀರ್ಮಾನದ ನೆಲೆಯಲ್ಲಿ ತೀರ್ಪನ್ನು ಮುಂದಿಡುವ ಮೊದಲು ಒಟ್ಟು ಆರ್ಥಿಕ ನೀತಿಗಳ ಬಗ್ಗೆ ಒಂದೆರಡು ಅಂಶಗಳನ್ನು ಇಲ್ಲಿ ಗಮನಿಸಬಹುದಾಗಿದೆ. ಪಶ್ಚಿಮದ ದೇಶಗಳಲ್ಲಿ ಮುಕ್ತ ಮಾರುಕಟ್ಟೆ ನೀತಿ ಮತ್ತು ಸಾಮಾಜಿಕ ಪ್ರಜಾಪ್ರಭುತ್ವಾತ್ಮಕ ಆರ್ಥಿಕ ನೀತಿ ಎಂಬ ಎರಡು ರೀತಿಯ ಆರ್ಥಿಕ ನೀತಿಗಳಿವೆ ಮತ್ತು ಈ ಎರಡು ನೀತಿಗಳನ್ನು ಪ್ರತಿಪಾದಿಸುವ ಬೇರೆ ಬೇರೆ ಪಕ್ಷಗಳು ಇಂದು ಪಶ್ಚಿಮದ ರಾಷ್ಟ್ರಗಳಲ್ಲಿ ಇವೆ. ಮುಕ್ತ ಮಾರುಕಟ್ಟೆ ಆರ್ಥಿಕ ನೀತಿ, ಸರಕು ಸೇವೆಗಳ ಪೂರೈಕೆಯನ್ನು ಹೆಚ್ಚಿಸುವ ಮೂಲಕ ದೇಶದ ಅಭಿವೃದ್ಧಿ ಸಾಧ್ಯ ಎಂದು ಭಾವಿಸಿದರೆ, ಸಾಮಾಜಿಕ ಪ್ರಜಾಪ್ರಭುತ್ವಾತ್ಮಕ ನೀತಿಯು ಜನರ ಮೂಲಭೂತ ಆವಶ್ಯಕತೆಗಳಾದ ಆಹಾರ, ವಸತಿ, ಶಿಕ್ಷಣ, ಆರೋಗ್ಯ ಇವುಗಳನ್ನು ಸುಧಾರಿಸುತ್ತಾ ದೇಶವನ್ನು ಅಭಿವೃದ್ಧಿಗೊಳಿಸಬಹುದು ಎಂದು ತಿಳಿಯುತ್ತದೆ. ಭಾರತದಲ್ಲಿ ಕಾಂಗ್ರೆಸ್ ತನ್ನನ್ನು ತಾನು ಸಾಮಾಜಿಕ ಪ್ರಜಾಪ್ರಭುತ್ವಾತ್ಮಕ ಆರ್ಥಿಕ ನೀತಿಯ ಪರ ಎಂದು ಹೇಳುತ್ತಾ ಬಂದಿದೆ. ಹಾಗೆಯೇ ಬಿಜೆಪಿ ಮುಕ್ತ ಮಾರುಕಟ್ಟೆ ಆರ್ಥಿಕ ನೀತಿಯನ್ನು ಪ್ರಬಲವಾಗಿ ನೆಚ್ಚಿದೆ. ಆದರೆ ತಮ್ಮ ರಾಜನೀತಿಯಲ್ಲಿ ಯಾವಾಗಲೂ ಗೊಂದಲ ಮತ್ತು ಎಡೆಬಿಡಂಗಿತನವನ್ನು ಪ್ರದರ್ಶಿಸುತ್ತಾ ಬರುತ್ತಿರುವ ಈ ಪಕ್ಷಗಳು ಆರ್ಥಿಕ ನೀತಿಗೆ ಸಂಬಂಧಿಸಿದಂತೆ ಕೂಡ ಅದೇ ರೀತಿಯಲ್ಲಿ ವರ್ತಿಸಿವೆ. ಅಭಿವೃದ್ಧಿ ಹಾಗೂ ರಾಜಕೀಯ ಚಿಂತಕರಾದ ಡಾ॥ ಎಂ. ಚಂದ್ರ ಪೂಜಾರಿಯವರು ತಮ್ಮ 'ನಿಯೋಲಿಬರಲ್ ಅಭಿವೃದ್ಧಿ' ಎಂಬ ಪುಸ್ತಕದಲ್ಲಿ ಸರಿಯಾಗಿಯೇ ಹೇಳುವಂತೆ, ಈ ಎರಡು ಪಕ್ಷಗಳೂ ಪ್ರತೀಬಾರಿಯೂ ವಿರೋಧಪಕ್ಷದಲ್ಲಿದ್ದಾಗ ಒಂದು ರೀತಿಯಲ್ಲಿ ಹೇಳಿಕೆಯನ್ನು ನೀಡುತ್ತಾ, ಅಧಿಕಾರಕ್ಕೆ ಬಂದಾಗ ಮತ್ತೊಂದು ರೀತಿಯಲ್ಲಿ ಕಾರ್ಯವೆಸಗುತ್ತಾ ಬಂದಿವೆ. ಹಾಗಾಗಿ ವಿರೋಧಪಕ್ಷದಲ್ಲಿದ್ದಾಗ ಬಿಜೆಪಿ ವಿದೇಶಿ ಬಂಡವಾಳ ಹೂಡಿಕೆ ಬಗ್ಗೆ, ಸರಕು ಸೇವೆಗಳ ತೆರಿಗೆ ಜಾರಿಗೊಳಿಸುವುದರ ಬಗ್ಗೆ, ಇಂಧನಗಳ ಬೆಲೆಯಲ್ಲಿನ ಸಬ್ಸಿಡಿಗೊಳಿಸುವುದರ ಬಗ್ಗೆ, ಉದ್ದಿಮೆಗಳಿಗೆ ನೈಸರ್ಗಿಕ ಸಂಪನ್ಮೂಲಗಳನ್ನು ಪೂರೈಕೆ ಮಾಡುವುದರ ಬಗ್ಗೆ ತೀವ್ರವಾದ ವಿರೋಧವನ್ನು ವ್ಯಕ್ತಪಡಿಸಿದ್ದರೂ ತಾನು ಅಧಿಕಾರಕ್ಕೆ ಬಂದು ಆಳ್ವಿಕೆ ನಡೆಸಿದ ಕಳೆದ ೫ ವರ್ಷಗಳಲ್ಲಿ ಅದು ಅನುಸರಿಸಿದ ಆರ್ಥಿಕ ನೀತಿ ಮಾತ್ರ ಸಂಪೂರ್ಣ ಬಂಡವಾಳಪರ ಆರ್ಥಿಕ ನೀತಿಯಾಗಿದೆ. ಈ ಬಗೆಯ ಬಂಡವಾಳಪರ, ಮಾರುಕಟ್ಟೆಪರ ಆರ್ಥಿಕ ನೀತಿಯನ್ನು 'ನವ ಉದಾರವಾದಿ ಅಭಿವೃದ್ಧಿ ಆರ್ಥಿಕ ನೀತಿ' ಯೆಂಬುದಾಗಿ ಅರ್ಥಶಾಸ್ತ್ರಜ್ಞರು, ಆರ್ಥಿಕ ತಜ್ಞರು, ಅಭಿವೃದ್ಧಿ ಹಾಗೂ ರಾಜಕೀಯ ಚಿಂತಕರನೇಕರು ಗುರುತಿಸುತ್ತಾರೆ.

೨೦ನೆಯ ಶತಮಾನದ ಸಮಾಜವಾದ ಮತ್ತು ಕೇನ್ಸ್‌ನ ಆರ್ಥಿಕ ಮಾದರಿಗಳನ್ನು ನಿರಾಕರಿಸುತ್ತಾ ಮುಕ್ತ ಮಾರುಕಟ್ಟೆ ಮತ್ತು ಬಂಡವಾಳವಾದದ

ಸಿದ್ಧಾಂತವನ್ನು ಮುನ್ನೆಲೆಗೆ ತಂದ ಆಸ್ಟ್ರಿಯಾದ ನೊಬೆಲ್ ಪ್ರಶಸ್ತಿ ವಿಜೇತ ಅರ್ಥಶಾಸ್ತ್ರಜ್ಞ ಫ್ರೆಡ್ರಿಕ್ ಆಗಸ್ಟ್ ವಾನ್ ಹಯೇಕ್ ಅವರು ಮಾರುಕಟ್ಟೆ ಪರವಾಗಿರುವ ನಿಯೋಲಿಬರಲ್ ಆರ್ಥಿಕತೆಯನ್ನು ಬಲವಾಗಿ ಸಮರ್ಥಿಸಿದವರು. ೧೯೨೦ರ ಬ್ರಿಟಿಷ್ ಆರ್ಥಿಕ ಕುಸಿತದ ಬಳಿಕ ಆರ್ಥಿಕ ಸ್ಥಿರತೆ ಮತ್ತು ದೇಶದ ಪ್ರಗತಿಯ ದೃಷ್ಟಿಯಿಂದ ಸಾರ್ವಜನಿಕ ಹೂಡಿಕೆಗಿಂತ ಖಾಸಗಿ ಬಂಡವಾಳ ಹೂಡಿಕೆ ಹೆಚ್ಚು ಲಾಭದಾಯಕವಾದುದು ಎಂದು ವಾದಿಸಿದ ಹಯೇಕ್ ಅವರು ಈ ಮೂಲಕ ನವ ಉದಾರವಾದೀ ಆರ್ಥಿಕ ನೀತಿಗೆ ಚಾಲನೆ ನೀಡಿದರು. ಆದರೆ ಇತ್ತೀಚೆಗೆ ಖ್ಯಾತ ಯುವ ಫ್ರೆಂಚ್ ಅರ್ಥಶಾಸ್ತ್ರಜ್ಞ ಥಾಮಸ್ ಪಿಕೆಟ್ಟಿಯವರು ತಮ್ಮ ಆರ್ಥಿಕ ಸಿದ್ಧಾಂತದಲ್ಲಿ ನಿಯೋಲಿಬರಲ್ ಆರ್ಥಿಕ ನೀತಿಯಲ್ಲಿ ಹೇಗೆ ಸರಕಾರೀ ಸಂಸ್ಥೆಗಳು ನಿಯಂತ್ರಣಕ್ಕೊಳಗಾಗಿ ಖಾಸಗಿ ಹೂಡಿಕೆದಾರರ ಪಾರಮ್ಯ ಹೆಚ್ಚಾಗಿ ತಾವು ಮತ್ತು ತಮ್ಮ ಪಾಲುದಾರರು ಹೆಚ್ಚು ಲಾಭವನ್ನು ಪಡೆಯುವಂತೆ ವ್ಯವಹಾರವನ್ನು ನಡೆಸುತ್ತಾರೆ. ಮತ್ತು ಇವರು ತಮ್ಮ ಕಾರ್ಮಿಕರಿಗೆ ಇದರಲ್ಲಿ ಏನೇನೂ ಪಾಲು ನೀಡದಿರುವ ಕಾರಣ ಈ ವ್ಯವಸ್ಥೆಯಲ್ಲಿ ಆರ್ಥಿಕ ಅಸಮಾನತೆ ಉಂಟಾಗುತ್ತದೆ ಎಂದು ತೋರಿಸಿಕೊಟ್ಟು ಹೇಯಕ್‌ನ ನಿಯೋಲಿಬರಲ್ ಆರ್ಥಿಕ ನೀತಿಯ ಬಗ್ಗೆ ತೀವ್ರ ವಿರೋಧವನ್ನು ವ್ಯಕ್ತಪಡಿಸಿದ್ದಾರೆ.

ಭಾರತದಲ್ಲಿ ಬಿಜೆಪಿ ಅನುಸರಿಸುತ್ತಾ ಬಂದಿರುವ 'ನಿಯೋಲಿಬರಲ್ ಅಭಿವೃದ್ಧಿ ನೀತಿ' ಆರ್ಥಿಕ ವ್ಯವಸ್ಥೆಯಲ್ಲಿ ಉದಾರೀಕರಣ, ಖಾಸಗೀಕರಣ, ಜಾಗತೀಕರಣ ಎಲ್ಲವೂ ಸೇರಿ ಒಂದಕ್ಕೊಂದು ಸಹಾಯ ಮಾಡುವಂತೆ ಅವು ಕಾರ್ಯ ನಿರ್ವಹಿಸುತ್ತವೆ. ಹಾಗೆ ನೋಡಿದರೆ ಈ ಆರ್ಥಿಕ ನೀತಿ ಮೋದಿ ಕಾಲದಲ್ಲಿ ಮೊತ್ತ ಮೊದಲ ಬಾರಿಗೆ ಜಾರಿಗೆ ಬಂದಿರುವಂಥಾದ್ದು ಎಂದು ಹೇಳುವಂತಿಲ್ಲ. ೧೯೯೧ರಲ್ಲಿ ಮುಕ್ತ ಮಾರುಕಟ್ಟೆ ನೀತಿಯನ್ನು ಅತ್ಯಂತ ಸಂತೋಷದಿಂದ ಒಪ್ಪಿಕೊಂಡ ಪಿ. ವಿ. ನರಸಿಂಹರಾವ್ ಅವರ ಕಾಂಗ್ರೆಸ್ ಸರಕಾರದಿಂದ ಇದು ಆರಂಭಗೊಂಡಿತ್ತು. ಕಾಂಗ್ರೆಸ್ ಆರ್ಥಿಕ ನೀತಿಯಲ್ಲಿ ತಾನು ಭಾಜಪಕ್ಕಿಂತ ಭಿನ್ನ ಎಂದು ಎಷ್ಟೇ ಹೇಳಿದರೂ ಅದು ವಿರೋಧಪಕ್ಷದಲ್ಲಿದ್ದಾಗಿನ ಮಾತಾಗಿ ಮಾತ್ರ ಉಳಿಯುತ್ತಿತ್ತು. ಈ ಆರ್ಥಿಕ ನೀತಿ ಕಾಂಗ್ರೆಸ್ ಸರಕಾರದಿಂದ ತೊಡಗಿ ಹಂತ ಹಂತವಾಗಿ ಬೆಳೆದು ಬಂದು ಇದೀಗ ಮೋದಿ ಅವರ ರಾಜ್ಯಭಾರದಲ್ಲಿ ಭೂತಾಕಾರವಾಗಿ ಬೆಳೆದುನಿಂತಿದೆ. ಹಾಗಾಗಿ ಇಂದು ಎಚ್‌ಎಎಲ್, ಬಿಇಎಮ್‌ಎಲ್, ಬಿಎಸ್‌ಎನ್‌ಎಲ್, ಬ್ಯಾಂಕಿಂಗ್ ಕ್ಷೇತ್ರ, ವಿಮಾಕ್ಷೇತ್ರ, ವಿಮಾನ ನಿಲ್ದಾಣಗಳು, ರೈಲ್ವೆ ವಿಭಾಗ, ಶಿಕ್ಷಣ, ಆರೋಗ್ಯ, ಸಾರಿಗೆ-ಸಂಪರ್ಕ - ಹೀಗೆ ಪ್ರತಿಯೊಂದು ಸಾರ್ವಜನಿಕ ಉದ್ದಿಮೆಗಳು ಅಪಾಯದಲ್ಲಿವೆ. ಎಲ್ಲವೂ ಇಂದು ಅಥವಾ ನಾಳೆ ಖಾಸಗಿ ಧನಿಗಳ ಕೈವಶವಾಗುವ ಎಲ್ಲ ಲಕ್ಷಣಗಳು ಕಾಣಿಸಿಕೊಳ್ಳುತ್ತಿವೆ. ಭಾರತದ ಈಗಿನ ಎಲ್ಲ ಕಾರ್ಪೊರೇಟ್

**ಅಭಿನಂದನೆಗಳು...**

ಶಿವಮೊಗ್ಗ ಕರ್ನಾಟಕ ಸಂಘದವರು ನೀಡುವ ೨೦೧೮ನೇ ಸಾಲಿನ "ಶ್ರೀ ಹಸೂಡಿ ವೆಂಕಟಶಾಸ್ತ್ರಿ ವಿಜ್ಞಾನ ಸಾಹಿತ್ಯ ಪ್ರಶಸ್ತಿ" ಡಾ|| ಪಾಲಹಳ್ಳಿ ವಿಶ್ವನಾಥ್ ಅವರ "ವಿಶ್ವದ ವೈವಿಧ್ಯ" (ನವಕರ್ನಾಟಕ ಪ್ರಕಾಶನ) ಕೃತಿಗೆ ಲಭಿಸಿದೆ. ಲೇಖಕರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಉದ್ದಿಮೆದಾರರ ಹೆಸರನ್ನು ನಾವು ಗಮನಿಸಿದರೆ ಅವರು ಯಾರೂ ಒಮ್ಮೆಲೇ ರಾತೋರಾತ್ರಿ ಕಾಣಿಸಿಕೊಂಡವರಲ್ಲ. ಇವರೆಲ್ಲರ ಏಳ್ಗೆಯಲ್ಲಿ ನರಸಿಂಹರಾವ್ ಅವರಿಂದ ಹಿಡಿದು ಮನಮೋಹನ್ ಸಿಂಗ್‌ವರೆಗೆ ಪಾಲು ಇದೆ. ಆದರೆ ಗಮನಿಸ ಬೇಕಾದದ್ದು ಏನೆಂದರೆ ಮೋದಿ ಪೂರ್ವದ ಖಾಸಗೀಕರಣ ಪ್ರಕ್ರಿಯೆಗೂ ಇವತ್ತಿನ ಕಾರ್ಪೊರೇಟ್ ಶಕ್ತಿಗಳ ಪಾರಮ್ಯಕ್ಕೂ ಸಾಕಷ್ಟು ವ್ಯತ್ಯಾಸವಿದೆ. ಮೋದಿ ಪೂರ್ವದ ನವ ಉದಾರವಾದದಲ್ಲಿ ವ್ಯಾಪಾರ-ವಹಿವಾಟುಗಳಿಗೆ ಸಂಬಂಧಿಸಿದಂತೆ ಔದಾರ್ಯದ ಜೊತೆಗೆ ಸರಕಾರದ ನಿಯಂತ್ರಣವೂ ಖಾಸಗಿ ಧನಿಗಳ ಮೇಲೆ ಇತ್ತು. ಆದರೆ 'ಕನಿಷ್ಠ ಸರಕಾರ ಗರಿಷ್ಠ ಆಡಳಿತ' ಎಂದು ಹೇಳುತ್ತಾ, ಉದ್ಯಮ ನಡೆಸುವುದು ಉದ್ದಿಮೆದಾರರ ಕೆಲಸ ಎಂದು ಭಾವಿಸುವ ಮೋದಿಯವರ ಕಾಲದ ನವ ಉದಾರವಾದೀ ಆರ್ಥಿಕ ನೀತಿಯಲ್ಲಿ ಎಲ್ಲವನ್ನೂ ಕಾರ್ಪೊರೇಟ್ ಒಡೆಯರೇ ನಿಯಂತ್ರಿಸುತ್ತಿದ್ದಾರೆ ಎನ್ನುವುದು ಗಮನಿಸಬೇಕಾದ ಸಂಗತಿ. ತಮಗೆ ಸಿಕ್ಕ ಅಪಾರವಾದ ಪ್ರಾಮುಖ್ಯತೆಯಿಂದಾಗಿ ಅಂಬಾನಿ, ಅದಾನಿ ಅಂಥವರು ಈ ದೇಶದಲ್ಲಿ ಭದ್ರವಾಗಿ ಬೇರೂರಲು ಸಾಧ್ಯವಾಗಿದೆ. ಹಾಗಾದರೆ ಜನಸಾಮಾನ್ಯರನ್ನು ಮೇಲಕ್ಕೆತ್ತುವವರು ಯಾರು? ಚುನಾವಣೆಯ ಸಂದರ್ಭದಲ್ಲಿ ಬಡತನ ನಿರ್ಮೂಲನೆಯ ಬಗ್ಗೆ ಜನರ ಮುಂದೆ ಮಾತಾಡುವ ಸರಕಾರ ಬಳಿಕ ಬಡವರನ್ನು ಮೇಲೆತ್ತುವ ಪರಿಣಾಮಕಾರಿಯಾದ ಯಾವುದೇ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿಲ್ಲ. ಎನ್‌ಡಿಎ ಸರಕಾರ ಕಳೆದ ೫ ವರ್ಷಗಳ ತಮ್ಮ ಅಧಿಕಾರಾವಧಿಯಲ್ಲಿ ಅವರ ಕಣ್ಣಿಗೆ ಮಣ್ಣೆರಚುವಂಥಾ ಕೆಲವೊಂದು ಸಣ್ಣ ಪುಟ್ಟ ಯೋಜನೆಗಳನ್ನಷ್ಟೇ ಜಾರಿಗೆ ತಂದಿದೆ. ಹಾಗಾಗಿ ಇಲ್ಲಿ ಬಡವರು ದ್ವೀಪವಾಗಿ ಬಿಟ್ಟಿದ್ದಾರೆ. ತಾವು ಬದುಕುವ ನಾಡಿನಲ್ಲೇ ಅಘೋಷಿತ ಆರ್ಥಿಕ ಬಹಿಷ್ಕಾರಕ್ಕೆ ಒಳಗಾಗಿದ್ದಾರೆ. ಹಾಗಾಗಿ ಪ್ರಖ್ಯಾತ ವಿದ್ವಾಂಸರಾದ ನೋಮ್ ಚೋಮ್‌ಸ್ಕಿ ಅವರು ಹೇಳುವಂತೆ, ನಿಯೋಲಿಬರಲಿಸಂ ನಾಗರಿಕರಿಗೆ, ಜನಸಾಮಾನ್ಯರಿಗೆ ಯಾವುದೇ ಸೌಲಭ್ಯಗಳನ್ನು ಕಲ್ಪಿಸಿಕೊಡುವುದಿಲ್ಲ. ಬದಲಾಗಿ ಇಲ್ಲಿ ಕೊಳ್ಳುಬಾಕ ಸಂಸ್ಕೃತಿ ಅಧಿಕಗೊಂಡು, ಜನರು ಸುಖವನ್ನು ಅರಸುತ್ತಾ, ಅರಸುತ್ತಾ, ಆತ್ಮವಿಶ್ವಾಸವನ್ನು ಕಳೆದುಕೊಂಡು, ನಿರಾಸಕ್ತರಾಗುತ್ತಾರೆ ಮತ್ತು ನಿರುಪಯುಕ್ತರಾಗುತ್ತಾರೆ. ಛಿದ್ರಗೊಂಡ ಸಮಾಜ ಸೃಷ್ಟಿಯಾಗುತ್ತದೆ. ಹಾಗಾಗಿ ದೇಶದ ಸಮಸ್ತರನ್ನು ಒಳಗೊಂಡ, ಅವರ ಸಹಭಾಗಿತ್ವ ಇರುವ ಪ್ರಜಾಪ್ರಭುತ್ವ ವ್ಯವಸ್ಥೆಗೆ ಈ ನಿಯೋಲಿಬರಲ್ ಆರ್ಥಿಕ ನೀತಿ ದೊಡ್ಡ ಶತ್ರುವಾಗಿದೆ.

ನವ ಉದಾರವಾದೀ ಆರ್ಥಿಕ ತತ್ತ್ವದಲ್ಲಿ ಒಂದು ಸರಳ ಮೇಲ್ಪದರದ ತರ್ಕವಿದೆ. ಅದೇನೆಂದರೆ ಸರಕು ಸೇವೆಗಳ ಉತ್ಪಾದನೆ ಮತ್ತು ಪೂರೈಕೆಯಲ್ಲಿ ಏರಿಕೆಯಾದರೆ ಎಲ್ಲರಿಗೂ ಕಡಿಮೆ ಬೆಲೆಯಲ್ಲಿ ಸರಕುಗಳು ದೊರೆಯುತ್ತವೆ, ಇದರಿಂದ ಬಡತನ ನಿವಾರಣೆಯಾಗುತ್ತದೆ, ಜೊತೆಗೆ ನಿರುದ್ಯೋಗ ಓಡಿ ಹೋಗುತ್ತದೆ. ತೆರಿಗೆ ಸಂಗ್ರಹ ಹೆಚ್ಚಾಗುತ್ತದೆ. ಇದರಿಂದ ಸಮಷ್ಟಿಗೆ ಒಳ್ಳೆಯದಾಗುತ್ತದೆ. ದೇಶ ಅಭಿವೃದ್ಧಿಯಾಗುತ್ತದೆ. ಆದರೆ ಮೋದಿಯವರು ಅಂದುಕೊಂಡಂತೆಯೇ ಎಲ್ಲವೂ ಆಗಿಬಿಟ್ಟಿದೆಯೇ ಎಂದು ಕೇಳಿದರೆ ಇಲ್ಲ, ಹಾಗಾಗಲಿಲ್ಲ. ವಾಸ್ತವ ಬೇರೆಯೇ ಇದೆ. ಈ ಆರ್ಥಿಕ ನೀತಿಯಿಂದ ಬಡತನ ಕಡಿಮೆ ಆಗಲಿಲ್ಲ. ನಿರುದ್ಯೋಗ ನಿವಾರಣೆ ಆಗಲಿಲ್ಲ. ಸ್ವಲ್ಪ ಮಟ್ಟಿಗೆ ಅಸಂಘಟಿತ ಉದ್ಯೋಗಿಗಳು ಹೆಚ್ಚಾಗಿದ್ದಾರೆ. ಅನುಕೂಲಸ್ಥರು ಕಟ್ಟಬೇಕಾದ ನೇರ ತೆರಿಗೆಯೂ ಇಲ್ಲಿ ಹೆಚ್ಚಾಗಲಿಲ್ಲ. ಬದಲಾಗಿ ಬಡವರು ಕಟ್ಟಿದ ಪರೋಕ್ಷ ತೆರಿಗೆ ಮಾತ್ರ ಹೆಚ್ಚಾಗಿದೆ.

ಹಾಗಿದ್ದರೆ ಪ್ರಯೋಜನವಾದದ್ದು ಯಾರಿಗೆ ಎಂದರೆ ಕಾರ್ಪೊರೇಶನ್‌ಗಳಿಗೆ. ಹಾಗಾಗಿ ನಮ್ಮ ದೇಶದ ಕಾರ್ಪೊರೇಟ್ಸ್‌ಗಳಿಗೆ ನರೇಂದ್ರ ಮೋದಿ ಯವರೇ ಪ್ರಧಾನಿಯಾಗಬೇಕು. ನಿಜದಲ್ಲಿ ನೋಡಿದರೆ ಕೆಲವು ಕಾರ್ಪೊರೇಶನ್‌ಗಳೇ ಈ ದೇಶವನ್ನು ಆಳುತ್ತಿವೆ. ಸದ್ಯದ ಪರಿಸ್ಥಿತಿಯಲ್ಲಿ ರಿಲಯನ್ಸ್, ಟಾಟಾ, ಎಸ್ಸಾರ್, ಇನ್ಫೋಸಿಸ್ ಮೊದಲಾದ ಕಾರ್ಪೊರೇಶನ್‌ಗಳು ಅಮೆರಿಕಾ ಮೂಲದ ರಾಕ್ ಫೆಲ್ಲರ್ ಮತ್ತು ಫೋರ್ಡ್ ಫೌಂಡೇಶನ್ಸ್‌ಗಳಂತೆ ಕೆಲಸ ಮಾಡುತ್ತಿವೆ. ರಾಕ್ ಫೆಲ್ಲರ್ ಮತ್ತು ಫೋರ್ಡ್ ಫೌಂಡೇಶನ್ಸ್ ಪ್ರಭುತ್ವದ ಜೊತೆಗೆ ಹತ್ತಿರದ ನಂಟನ್ನು ಬೆಳೆಸಿಕೊಂಡು ಸರಕಾರ ಮತ್ತು ತಮ್ಮ ಉದ್ದೇಶಗಳಿಗೆ ಪೂರಕವಾಗಿ ಕೆಲಸ ಮಾಡಿದಂತೆಯೇ ನಮ್ಮ ಕಾರ್ಪೊರೇಶನ್ಸ್ ಅದೇ ಬಗೆಯ ತಂತ್ರಗಾರಿಕೆಯನ್ನು ಬಳಸಿಕೊಂಡು ಕೆಲವೊಂದು ರಾಜಕೀಯ ಪಕ್ಷಗಳನ್ನು ನಡೆಸುತ್ತಿವೆ. ಜೊತೆಗೆ ಈ ದೇಶದ ಮಾಧ್ಯಮಗಳನ್ನು ಕೂಡ. ಹಾಗೆಯೇ ಇನ್ನೊಂದು ಮುಖ್ಯವಾದ ಸಂಗತಿ ಯೆಂದರೆ ಭಾರತೀಯ ಖಾಸಗಿ ಕಂಪೆನಿಗಳು ಚ್ಯಾರಿಟೇಬಲ್ ಫೌಂಡೇಶನ್ಸ್‌ಗೆ ಹಣವನ್ನು ಹಂಚಿ ಅವುಗಳ ಮೂಲಕ ಸಾರ್ವಜನಿಕ ವಲಯಗಳನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಳ್ಳಲು ದಾರಿಗಳನ್ನು ಕಂಡುಕೊಳ್ಳುತ್ತಿವೆ. ಹೀಗಾಗಿ ಕಾರ್ಪೊರೇಟ್ಸ್‌ಗಳ ಕಾರ್ಯತಂತ್ರ ಸ್ಪಷ್ಟವಾಗಿದೆ - ನಿಧಾನಕ್ಕೆ ಸಾರ್ವಜನಿಕರ ಭಾವನೆಗಳನ್ನು ನಂಬಿಕೆಗಳನ್ನು

ನಿಯಂತ್ರಿಸುವುದು, ಬಳಿಕ ಜನಸಾಮಾನ್ಯರ ಆರೋಗ್ಯ ರಕ್ಷಣೆ ಹಾಗೂ ಶಿಕ್ಷಣಕ್ಕಾಗಿ ಸರಕಾರದಿಂದ ಹಣ ಮಂಜೂರಾಗದ ಸಂದರ್ಭದಲ್ಲಿ ತಮ್ಮ ನಿಯಂತ್ರಣ ದಲ್ಲಿರುವ ಸರಕಾರೇತರ ಚ್ಯಾರಿಟೇಬಲ್ ಸಂಸ್ಥೆಗಳ ಮೂಲಕ ಜನರಿಗೆ ಧನಸಹಾಯವನ್ನು ನೀಡುವುದು, ಆಗ ಆರ್ಥಿಕ ಸಹಾಯವನ್ನು ಪಡೆದ ಜನಸಾಮಾನ್ಯರ ಕಣ್ಣಲ್ಲಿ ಇವರು ಉದಾರಿಗಳಾಗುತ್ತಾರೆ. ಈ ಮೂಲಕ ದೇಶವನ್ನು ಕಾರ್ಪೊರೇಟ್ ಬಂಡವಾಳದ ಮುಕ್ತ ಮಾರುಕಟ್ಟೆಯನ್ನಾಗಿ ಮಾಡುವುದು. ಇದು ಒಂದು ರೀತಿಯಲ್ಲಿ ವಸಾಹತುಶಾಹಿ ಆಳ್ವಿಕೆಯಲ್ಲಿ ಮಿಶನರಿಗಳು ಮಾಡುತ್ತಿದ್ದ ಕೆಲಸದ ಹಾಗೆಂದು ಖ್ಯಾತ ಬರಹಗಾರ್ತಿ ಅರುಂಧತಿ ರಾಯ್ ಅವರು ಹೇಳುತ್ತಾರೆ.

ದೇಶದ ಸಂಪತ್ತು ಎಂಬುದು ಕೆಲವೇ ಕೆಲವು ಮಂದಿಯ ಕೈಯಲ್ಲಿ ಉಳಿಯುವಂತೆ ಮಾಡಿ ಸಮಾಜದಲ್ಲಿ ಆರ್ಥಿಕ ಅಸಮಾನತೆಯನ್ನು ಹುಟ್ಟುಹಾಕುವ ಇಂಥಾ ಔದಾರ್ಯರಹಿತ ಮತ್ತು ಕೇವಲ ಭೀಕರತೆಯನ್ನು ಮಾತ್ರ ಹೊಂದಿರುವ ಆರ್ಥಿಕ ನೀತಿಯನ್ನು ಜಾರಿಗೆ ತರುವ ಸಲುವಾಗಿ ಮೋದಿ ಸರಕಾರ ಜಗತ್ತಿನಲ್ಲಿ ಬೇರೆಲ್ಲೂ ಕಾಣಸಿಗದ, ಬಂಡವಾಳ ಹಿಂತೆಗೆತಕ್ಕೆಂದೇ ಒಬ್ಬ ಸಚಿವನನ್ನು ಆಯ್ಕೆಮಾಡಿ ಅದಕ್ಕಾಗಿ ಒಂದು ಸಚಿವಾಲಯವನ್ನು ಆರಂಭ ಮಾಡಿದ್ದು ಈಗ ಇತಿಹಾಸ. ಹಾಗೆಯೇ ಛತ್ತೀಸ್‌ಗರ್‌ನಲ್ಲಿ ೧ ಲಕ್ಷ ೭೦ ಸಾವಿರ ಹೆಕ್ಟೇರ್ ಅರಣ್ಯಭೂಮಿಯನ್ನು ಅದಾನಿಯವರಿಗೆ ನೀಡಿದ ಉದ್ದೇಶವನ್ನು ಈ ದೇಶದ ಪ್ರಜೆಗಳು ಏನೆಂದು ಅರ್ಥೈಸಬೇಕೆಂದು ಮೋದಿಯವರೇ ಹೇಳಬೇಕು. ರಾಷ್ಟ್ರೀಯ ಸಂಪನ್ಮೂಲಗಳನ್ನು, ಸರಕಾರಿ ಸಂಸ್ಥೆ ಗಳನ್ನು ಖಾಸಗಿ ಬಂಡವಳಿಗರಿಗೆ ಕೈಗಿತ್ತು ಅವರ ಬದುಕನ್ನು ಹಸನು ಮಾಡುವ ಮೋದಿ ಮತ್ತು ಅವರ ತಂಡದ ಸದಸ್ಯರ ಕಣ್ಣಿಗೆ ಕಾಣುವುದು ಇಂದು ಈ ದೇಶದಲ್ಲಿ ಅತ್ಯಂತ ಸಂತೋಷದಲ್ಲಿರುವ ಗುಜರಾತಿನ ಗೌತಮ್ ಅದಾನಿ ಮತ್ತು ಮುಕೇಶ್ ಅಂಬಾನಿ ಅಂಥವರು ಮಾತ್ರ. ಆದರೆ ಅದಾನಿಯವರು ಮಂಗಳೂರು ವಿಮಾನ ನಿಲ್ದಾಣವನ್ನು ಕೊಂಡು ಕೊಂಡರೆ ಅಲ್ಲಿ ಯಾರಿಗೆ ಉದ್ಯೋಗ ದೊರೆಯುತ್ತದೆ ಎಂಬುದನ್ನು ನಾವು ಪ್ರಶ್ನಿಸಬೇಕಾಗಿದೆ. ಖಾಸಗಿ ಬಂಡವಾಳ ಹೂಡಿಕೆಯಿಂದ ಭ್ರಷ್ಟಾಚಾರ, ಸ್ವಜನ ಪಕ್ಷಪಾತ, ಅಸಮಾನತೆ ಎಲ್ಲವೂ ಓಡಿಹೋಗಲು ಸಾಧ್ಯವೇ? ಎಂಬುದನ್ನು ಜನರು ಗಂಭೀರವಾಗಿ ಯೋಚಿಸಬೇಕು.

ನೆಹರೂ ಕಾಲದಲ್ಲಿ ಅಷ್ಟಾಗಿ ಬಂಡವಾಳ ಹೂಡಲು ಮುಂದಾಗದಿದ್ದ ಖಾಸಗಿ ಧನಿಗಳು ನೆಹರೂ ವಿರೋಧಿ ಸರಕಾರದ ಕಾಲದಲ್ಲಿ ಅತ್ಯುತ್ಸಾಹದಿಂದ ಸಾಲು ಸಾಲಾಗಿ ಮುಂದೆ ಬರುತ್ತಿರುವುದು ಖಂಡಿತವಾಗಿಯೂ ದೇಶೋದ್ಧಾರಕ್ಕಾಗಿ ಅಲ್ಲ ಅನ್ನುವ ಸಂಗತಿ ಯಾರಿಗಾದರೂ ಅರ್ಥ ವಾಗುವಂಥಾದ್ದು. ಸದಾ ಮಣ್ಣಿನ ಪವಿತ್ರೀಕರಣದ ಮೂಲಕ ಜನರ ಭಾವುಕ ಪ್ರಪಂಚವನ್ನು ತಲುಪಿ ಸಮೂಹದ ನಾಯಕನಾಗಿ ಬೆಳೆದು, ತನ್ನ ಅಭೂತಪೂರ್ವ ವಾಕ್ ಪ್ರತಿಭೆಯಲ್ಲಿ ನಿತ್ಯ ನೂತನ ಪರಿಭಾಷೆಗಳನ್ನು ಜನರ ಮುಂದಿಟ್ಟು ಜನರ ಕಣ್ಣು, ಕಿವಿ, ಮನಸ್ಸುಗಳಲ್ಲೆಲ್ಲಾ ತುಂಬಿ ದೇಶದ ಪ್ರಧಾನಮಂತ್ರಿಯೆನ್ನಿಸಿಕೊಂಡವರು ಮುಂದಕ್ಕೆ ಈ ದೇಶದ ಸಂಪನ್ಮೂಲಗಳನ್ನು ಖಾಸಗಿಯವರ ಕೈಗೆ ಒಪ್ಪಿಸುವ ಮೊದಲು ದೇಶವೆಂದರೆ ಯುದ್ಧೋನ್ಮಾದ ಅಲ್ಲ, ದೇಶದ ಕಾವಲುಗಾರನೆಂದರೆ ಇಲ್ಲಿನ ಸಂಪನ್ಮೂಲಗಳನ್ನು ಮಾರಿ 'ಮೈಸೂರನ್ನು ಪ್ಯಾರಿಸ್ ಮಾಡ್ತೇನೆ, ಉದಯ್‌ಪುರ್ ಮಾಡ್ತೇನೆ' ಅಂತ ಜನರು ಹುಚ್ಚೇಳುವಂತೆ ಭಾಷಣ ಮಾಡುವುದಲ್ಲ ಎಂಬುದನ್ನು ತಿಳಿಯಬೇಕು. ದೇಶ ಅಂದರೆ ಜನ ಎಂಬುದನ್ನು ಅರ್ಥಮಾಡಿಕೊಳ್ಳಬೇಕು. ಇಲ್ಲಿ ಜನ ಮನುಷ್ಯರಾಗಿ ಬಾಳಬೇಕಾದರೆ ಅವರಿಗೆ ಪ್ರಯೋಜನಕಾರಿಯಾದ ಸರಕಾರೀ ಸಂಸ್ಥೆಗಳ ಮೂಲಕ ಆಹಾರ, ಶಿಕ್ಷಣ, ಆರೋಗ್ಯ, ವಸತಿ ದೊರೆಯಬೇಕು ಎಂಬುದು ಅರ್ಥ ಆಗಬೇಕು. ಆದರೆ ದೇಶದ ಬಗ್ಗೆ ನಿಜ ಕಾಳಜಿ ಇರುವ ಒಬ್ಬ ಪ್ರಾಮಾಣಿಕ ರಾಜಕಾರಣಿಗೆ ಮತ್ತು ಸೂಕ್ಷ್ಮ ಮನಸ್ಸಿನ ಮುತ್ಸದ್ಧಿಗೆ ಮಾತ್ರ ಇಂಥಾ ವಿಚಾರಗಳು ಬಲು ಬೇಗ ತಿಳಿಯಲು ಸಾಧ್ಯ.

**ಡಾ॥ ದಿನೇಶ್ ನಾಯಕ್**
ಸಹಾಯಕ ಪ್ರಾಧ್ಯಾಪಕ, ಕನ್ನಡ ವಿಭಾಗ, ಸಂತ ಅಲೋಶಿಯಸ್ ಪದವಿ ಕಾಲೇಜು (ಸ್ವಾಯತ್ತ) ಅಂಚೆ ಪೆಟ್ಟಿಗೆ ಸಂ. ೭೨೦, ಮಂಗಳೂರು–೫೭೫೦೦೩

## ಸಾಸಿವೆಗೀಗ ಸಂಭ್ರಮ

ಗೆಳತಿ...
ನೀನೊಂದು ನಿಶ್ಶಬ್ದ ಕವಿತೆ
ಆದರೂ ಶಬ್ದಗಳಲಿ ಹಿಡಿದಿಟ್ಟೆ
ನಿದ್ದೆಗಿಳಿಯುವ ಹುಚ್ಚು ನಿರ್ಧಾರಕ್ಕಿಳಿದೆ
ಪದಗಳೆಲ್ಲವೂ ನಿನ್ನ ಪರ ನಿಂತು
ದಾಳಿಗಿಳಿದು ಹರಿದು ತಿಂದವು
ಪೆನ್ನು ಹಾಳೆಗೀಗ ಬೆನ್ನು ಮಾಡಿ
ಬಣ್ಣ ಕ್ಯಾನವಾಸ್‌ನತ್ತ ಮುಖ ಮಾಡಿದೆ
ಕುಂಚದೊಡನೆ ಕಸರತ್ತು ಮಾಡಿ
ಕೊಂಚ ನಿನ್ನ ಚಿತ್ರವೇನೊ ಬರೆದೆ
ಭಾವ ಒಂಚೂರೂ ಬರಲೇ ಇಲ್ಲ
ನಿನ್ನ ತಣ್ಣನೆಯ ಬಣ್ಣದ ಮುಂದೆ
ನನ್ನ ಬಣ್ಣಗಳೆಲ್ಲವೂ ಸುಣ್ಣವಾದವು
ಬಲು ಬೇಸತ್ತು ಹೊರಬಂದೆ
ರಾತ್ರಿ ಸರಿದದ್ದೇ ಸೋಜಿಗವಾಯಿತು

ಮೂಕ ಹಕ್ಕಿಗಳ ನಿನಾದ
ನನ್ನ ಅಂತರಂಗವ ಕಲಕುತ್ತಿದೆ
ಬಿದ್ದ ಇಬ್ಬನಿ ಹನಿಗಳೆಲ್ಲವೂ
ಮುತ್ತಾಗಿ ನನಗೀಗ ಮುತ್ತಿಕ್ಕುತ್ತಿವೆ
ನಿನ್ನ ಹಿಡಿದಿಡುವ ಸಣ್ಣತನಕೆ
ಸೂಸುವ ಗಾಳಿ ಕನ್ನಡಿ ಹಿಡಿದಿದೆ

ಗೆಳತಿ...
ಹಕ್ಕಿ ಗಾಳಿ ಹನಿಗಳಲಿ ನಿನ್ನದೇ..
ಬಿಂಬವಿತ್ತು; ತುಂಬಿದ ಭಾವವಿತ್ತು
ಸಾಗರ ಹಿಡಿದಿಡುವ ಭ್ರಮೆಯಿಂದ
ಹೊರಬಂದ ಸಾಸಿವೆಗೀಗ ಸಂಭ್ರಮ

**ಕೆ. ಬಿ. ವೀರಲಿಂಗನಗೌಡ್ರ**
ಎಸ್. ಆರ್. ಜಿ. ಎಚ್. ಎಂ. ಪ್ರೌಢಶಾಲೆ
ಸಿದ್ದಾಪುರ – ೫೮೧ ೩೫೫, ಉತ್ತರ ಕನ್ನಡ ಜಿಲ್ಲೆ









**ಬಚ್ಚಿಟ್ಟ ಚರಿತ್ರೆಯನ್ನು ಬಿಚ್ಚಿಟ್ಟ ಬಾಬಾ ಸಾಹೇಬ್ ಡಾ॥ ಬಿ. ಆರ್. ಅಂಬೇಡ್ಕರ್**

*ಎಚ್. ಎಸ್. ಬೇನಾಳ*

**ಪುಟ : ೨೪೮**

**ಬೆಲೆ : ರೂ. ೨೪೦/–**

***ಸಹನಾ ಪ್ರಕಾಶನ,*** *ಕಲಬುರಗಿ*

*ಎಚ್. ಎಸ್. ಬೇನಾಳ ಬರೆದಿರುವ ಈ ಕೃತಿ ಕೆಲವು ವಿಷಯಗಳಿಂದ ಓದುಗರ ಗಮನ ಸೆಳೆಯುತ್ತದೆ. ಕೃತಿಯಲ್ಲಿ ಮೂರು ಭಾಗಗಳಿದ್ದು ಒಂದನೇ ಭಾಗದಲ್ಲಿ ನಾಗವಂಶದ ಚರಿತ್ರೆ, ಮುಚ್ಚುತ್ತಿರುವ ದಲಿತರ ಪ್ರಗತಿಯ ಬಾಗಿಲುಗಳು, ಕರ್ನಾಟಕ ಚರಿತ್ರೆಯಲ್ಲಿ ಅಲಕ್ಷಿತ ದಲಿತ ವಂಶದ ರಾಜರುಗಳು, ಚಾಲುಕ್ಯ ಚಕ್ರವರ್ತಿಗಳು ಹೊಲೆಯರು ಮತ್ತು ಕದಂಬರು ಮಾದಿಗ ವಂಶಸ್ಥರು ಮತ್ತು ರಾಷ್ಟ್ರಕೂಟರೂ ಕೂಡ ದಲಿತರೆ, ಹೀಗೆ ಹಲವಾರು ವಿಷಯಗಳು ಬರುತ್ತವೆ. ಎರಡನೇ ಭಾಗದಲ್ಲಿ ತಿರುಪತಿ ಬಾಲಾಜಿ ದೇವಸ್ಥಾನ ಮೂಲವಾಗಿ ಒಂದು ಬುದ್ಧ ವಿಹಾರ ಎಂಬ ಶೀರ್ಷಿಕೆಯ ಕೆಳಗೆ ಬೌದ್ಧ ಧರ್ಮದ ವಿರುದ್ಧ ಬ್ರಾಹ್ಮಣರ ಯುದ್ಧ, ವೈಷ್ಣವ ಮತ್ತು ಶೈವರ ಮಧ್ಯೆ ಸಂಘರ್ಷ, ಬೌದ್ಧರ ವಿರುದ್ಧ ವೈಷ್ಣವ ಮತ್ತು ಶೈವರ ಹೋರಾಟ ಮತ್ತು ಹಿಂದೂ ಧರ್ಮದಲ್ಲಿ ಗೋಮಾಂಸ ಭಕ್ಷಣೆ ಹೀಗೆ ಅನೇಕ ವಿಷಯಗಳನ್ನು ಒಳಗೊಂಡಿದೆ. ಮೂರನೇ ಭಾಗದಲ್ಲಿ ಅಂಬೇಡ್ಕರ್ ಅವರು ತಮ್ಮ ಸಾಮಾಜಿಕ ಹೋರಾಟದ ಜೊತೆಜೊತೆಗೆ ದೇಶಕ್ಕೆ ಕೊಟ್ಟ ಕೊಡುಗೆಗಳನ್ನು ವಿಸ್ತಾರವಾಗಿ ಪ್ರಸ್ತಾಪಿಸಲಾಗಿದೆ. ಆರ್.ಬಿ.ಐ. ಸ್ಥಾಪನೆ, ನೀರಾವರಿ–ವಿದ್ಯುತ್ ಯೋಜನೆಗಳು, ಭಾರತ ಒಕ್ಕೂಟಕ್ಕೆ ರಾಜರುಗಳ ಸೇರ್ಪಡೆ, ದಲಿತರು–ಹೆಣ್ಣುಮಕ್ಕಳ ಕಲ್ಯಾಣಕ್ಕಾಗಿ ಅವರು ಮಾಡಿದ ಕೆಲಸ ಮತ್ತು ಸಂವಿಧಾನ ರಚನೆ – ಹೀಗೆ ಬೇನಾಳ ಅವರು ಸಾಕಷ್ಟು ಮಾಹಿತಿಗಳನ್ನ ಕಲೆಹಾಕಿ ಬರೆದಿರುವ ಕೃತಿಯಲ್ಲಿ ಸಾಕಷ್ಟು ತಪ್ಪುಗಳು ನುಸುಳಿಕೊಂಡಿವೆ.*

**ಆಹಾರ ರಾಜಕೀಯ** *ಕೆ. ಸಿ. ರಘು*

**ಪುಟ : ೧೬೦** **ಬೆಲೆ : ರೂ. ೧೩೦/–**

***ಅಭಿರುಚಿ ಪ್ರಕಾಶನ,*** *ಮೈಸೂರು*

*ಕೆ. ಸಿ. ರಘು ಅವರು ಬರೆದಿರುವ 'ಆಹಾರ ರಾಜಕೀಯ' ಇಂದಿನ ಆಧುನಿಕ ಜಗತ್ತಿನಲ್ಲಿ ಜನರ ಮೇಲೆ ನಡೆಯುತ್ತಿರುವ ಅನ್ಯಾಯಗಳ ಮೇಲೆ ಅಪಾರ ಬೆಳಕು ಚೆಲ್ಲುವ ಕಿರು ಹೊತ್ತಿಗೆಯಾಗಿದೆ. ಆಹಾರದಲ್ಲಿ ರಾಸಾಯನಿಕ ವಿಷಗಳ ಕಲಬೆರಿಕೆ, ನಕಲಿ ಔಷಧಿಗಳು, ನಕಲಿ ವೈದ್ಯರು, ಅಭಿವೃದ್ಧಿಯ ಹೆಸರಿನಲ್ಲಿ ಚೀನಾ ಅಮೇರಿಕಾಗಳಂತಹ ದೇಶಗಳು ನದಿ–ಸಾಗರಗಳನ್ನ ಹಾಳು ಮಾಡುತ್ತಿರುವುದು; ಒಟ್ಟಾರೆ ಈ ಭೂಮಿಯ ಮೇಲೆ ಮನುಷ್ಯ–ಪ್ರಾಣಿಗಳು ಬದುಕಲಾರದ ಸ್ಥಿತಿಗೆ ಕೊಂಡೊಯ್ಯುತ್ತಿರುವ ಸಾಕಷ್ಟು ವಿಷಯಗಳನ್ನು ನೋಡಬಹುದು. ಅಪಾರವಾಗಿ ಓದಿಕೊಂಡು ಸುತ್ತಲಿನ ರಾಜಕೀಯ, ಪರಿಸರ ಮಾಲಿನ್ಯ ಮತ್ತು ಜಗತ್ತಿನಲ್ಲಿ ನಡೆಯುತ್ತಿರುವ ಪ್ರತಿಯೊಂದು ವಿಷಯವನ್ನು ಅಪ್ಡೇಟ್ ಮಾಡಿಕೊಂಡು ಬರೆಯುವ ಮತ್ತು ಮಾತನಾಡಬಲ್ಲ ರಘು ಅವರ ಈ ಕೃತಿ ಬೆರಗು ಹುಟ್ಟಿಸುವಂತಹ ವಿಷಯಗಳನ್ನು ಹೊಂದಿದೆ. ಜಗತ್ತಿನ ಘೋರ ಭವಿಷ್ಯವನ್ನು ನಮ್ಮ ಕಣ್ಣುಗಳ ಮುಂದೆ ಅನಾವರಣಗೊಳಿಸಿದ್ದಾರೆ. ಇವರ ಓದು ಮತ್ತು ಬರಹಗಳ ಕ್ಯಾನ್ವಾಸ್ ತುಂಬಾ ವಿಶಾಲವಾದದ್ದು. ಇಲ್ಲಿರುವ ೩೯ ಲೇಖನಗಳು ರೈತರ ಆತ್ಮಹತ್ಯೆ, ನಗದು ಅಮಾನ್ಯೀಕರಣದ ಸಮಸ್ಯೆ, ಜಾಗತೀಕರಣ, ಯೋಗ, ರಾಜಕೀಯ, ಅರ್ಥಶಾಸ್ತ್ರ, ಇತಿಹಾಸ ಹೀಗೆ ಹಲವು ವಿಷಯಗಳನ್ನು ತುಂಬಿಕೊಂಡಿವೆ. ತಟ್ಟೆಯಲ್ಲಿ ವಿಷ ತುಂಬಿಕೊಂಡು ಆಸ್ಪತ್ರೆಯಲ್ಲಿ ಆರೋಗ್ಯ ಹುಡುಕುತ್ತಿದ್ದೇವೆ ಎನ್ನುವ ಅವರ ಮಾತು ನಮ್ಮನ್ನು ಗಲಿಬಿಲಿಗೊಳಿಸುತ್ತದೆ. ಕನ್ನಡಪ್ರಭ ಪತ್ರಿಕೆಗೆ ಬರೆದ ಈ ೩೯ ಲೇಖನಗಳ ಅಂಕಣಗುಚ್ಛವನ್ನು ವೈದ್ಯರು, ಪರಿಸರವಾದಿಗಳು, ಎನ್‌ಜಿಓಗಳು, ಪೃಥ್ವಿಯನ್ನು ಪ್ರೀತಿಸುವ ಪ್ರತಿಯೊಬ್ಬರೂ ಓದಬೇಕಾಗಿದೆ.*




**ತಾರಸಿ ಮಲ್ಹಾರ್** (ಲಲಿತ ಪ್ರಬಂಧಗಳು) *ಜಿ. ಕೆ. ರವೀಂದ್ರಕುಮಾರ್*

**ಪುಟ : ೧೨೦** **ಬೆಲೆ : ರೂ. ೧೧೦/–**

***ಅನನ್ಯ ಪ್ರಕಾಶನ,*** *ಮೈಸೂರು*

*ಜಿ. ಕೆ. ರವೀಂದ್ರಕುಮಾರ್ ಕವಿಯಾಗಿ ಗುರುತಿಸಿಕೊಂಡವರು. ಈ ಕೃತಿಯಲ್ಲಿ ಒಟ್ಟು ಹನ್ನೊಂದು ಲಲಿತ ಪ್ರಬಂಧಗಳಿದ್ದು, ಮೊದಲನೇ ಪ್ರಬಂಧ 'ತಾರಸಿ ಮಲ್ಹಾರ್' ಮಳೆಯ ಅನುಭವಗಳನ್ನು ಕುರಿತ ಪ್ರಬಂಧವಾಗಿದೆ. ಇದೆಂತಹ ಶೀರ್ಷಿಕೆ ಎಂದುಕೊಂಡು ಪ್ರಬಂಧವನ್ನು ಓದಿಕೊಂಡು ಹೋಗುತ್ತಿದ್ದಂತೆ ಶೀರ್ಷಿಕೆಗೆ ಸಮರ್ಥನೆ ದೊರಕುತ್ತದೆ. ಉಂಡು ತಿಂದ ಪ್ರಬಂಧವು, ಕುನ್ನುಕುಡಿ ಮತ್ತು ನಾನು, ಟೀಂ ಗುಂಜಿಗನೂರು, ಚುಕ್ಕೀ...ಚುಕ್ಕೀ..., ಉಲ್ಲಾ ಉಲ್ಲಾಸ, ಹಾಗೇ ಸುಮ್ಮನೆ, ಒಂದು ಅಸಂಗತ ಲಹರಿ, ಇದು ಚಿತ್ರಗೀತೆಗಳ ಸಮಯ, ಅಸ್ತವ್ಯಸ್ತ ಮೀಮಾಂಸೆ ಮತ್ತು ಪದ್ಯವಂತರಿಗಿದು ಕಾಲವಲ್ಲ; ಹೀಗೆ ಎಲ್ಲಾ ಲೇಖನಗಳು ಚೆನ್ನಾಗಿ ಮೂಡಿಬಂದಿವೆ. ಒಬ್ಬ ಲೇಖಕ ತನ್ನ ಸ್ಮೃತಿಪಟಲ ಮೇಲೆ ಕುಳಿತುಕೊಂಡಿರುವ ತನ್ನ ಬಾಲ್ಯದಿಂದ ಇತ್ತೀಚಿನವರೆಗಿನ ಅನುಭವಗಳನ್ನು ಹೇಗೆಲ್ಲ ಉಪಯೋಗಿಸಿಕೊಳ್ಳಬಹುದು ಎನ್ನುವುದನ್ನು ಇಲ್ಲಿ ನೋಡಬಹುದಾಗಿದೆ. ಲೇಖಕರ ಓದಿನ ಜ್ಞಾನ ವಿಶಾಲವಾಗಿದ್ದು ಪ್ರಬಂಧಗಳು ಎಲ್ಲಿಯೂ ಓದುಗರನ್ನು ಬಿಟ್ಟುಕೊಡದೆ ಮುಂದೆ ಏನು ಎನ್ನುವಂತೆ ಸಾಗುತ್ತವೆ. ಅವರ ಪ್ರಬಂಧಗಳು ಚೆಲ್ಲುಚೆಲ್ಲಾಗಿ ಹೊರಳಾಡುತ್ತ ಅನೇಕ ಕವಿಗಳು, ಕೃತಿಗಳು ಮತ್ತು ವಿಷಯಗಳನ್ನು ಮತ್ತು ಅವರ ಬದುಕಿನ ಅನುಭವಗಳನ್ನು ಓದುಗರಿಗೆ ಉಣಿಸುತ್ತಾ ಸಾಗುತ್ತವೆ. ಪ್ರಬಂಧಗಳನ್ನು ಓದಿ ಮುಗಿಸಿದಾಗ ರವೀಂದ್ರಕುಮಾರ್ ಅವರ ಮೇಲೆ ಗೌರವ ಮೂಡದೇ ಇರುವುದಿಲ್ಲ. ರವೀಂದ್ರಕುಮಾರ್ ಪ್ರಬಂಧ ಸಾಹಿತ್ಯದಲ್ಲಿ ಇನ್ನಷ್ಟು ತೀವ್ರವಾಗಿ ತೊಡಗಿಕೊಂಡರೆ ಕನ್ನಡಕ್ಕೆ ಇನ್ನಷ್ಟು ಒಳ್ಳೆಯ ಪ್ರಬಂಧಗಳು ದೊರಕುತ್ತವೆ.*

**ಬುದ್ಧನ ನಾಡು ಭೂತಾನ್** (ಪ್ರವಾಸ ಕಥನ) *ಡಾ॥ ಅಶೋಕ ನರೋಡೆ*

**ಪುಟ : ೧೮೦** **ಬೆಲೆ : ರೂ. ೧೩೦/–**

***ನಿವೇದಿತಾ ಪ್ರಕಾಶನ,*** *ಶಾಸ್ತ್ರಿನಗರ, ಬನಶಂಕರಿ ೨ನೇ ಹಂತ, ಬೆಂಗಳೂರು–೫೬೦ ೦೨೮*




*ಭೂತಾನ್ ಜಗತ್ತಿನಲ್ಲಿ ಒಂದು ಪುಟ್ಟ ದೇಶವಾದರೂ ಶಾಂತಿ ತುಂಬಿಕೊಂಡಿರುವ ದೇಶ. ಅಲ್ಲಿನ ಜನರು ಇರುವುದರಲ್ಲೇ ಸುಖವನ್ನು ಕಂಡುಕೊಂಡು ನೆಮ್ಮದಿಯಾಗಿದ್ದಾರೆ. ಈ ಜಗತ್ತಿನಲ್ಲಿ ಅಭಿವೃದ್ಧಿಯ ಹೆಸರಿನಲ್ಲಿ ನಡೆಯುತ್ತಿರುವ ಪರಿಸರ ಮಾಲಿನ್ಯ, ಯುದ್ಧಗಳು, ಉಗ್ರರ ಧಾಳಿಗಳು ಇಂದಿನ ಜಗತ್ತನ್ನು ಅಪಾಯದ ಮೇಲೆ ನಿಲ್ಲಿಸಿ ನಿದ್ದೆ ಗೆಡಿಸಿವೆ. ಇಂತಹ ವಿಷಮ ಪರಿಸ್ಥಿತಿಯಲ್ಲಿ ಈ ಪುಟ್ಟ ದೇಶವನ್ನು ನೋಡಿ ಜಗತ್ತು ಕಲಿತುಕೊಳ್ಳುವುದು ಬಹಳ ಇದೆ. ಭೂತಾನ್ ದೇಶವನ್ನು ಒಮ್ಮೆ ನೋಡಿ ಬರುವುದೆಂದರೆ ಒಂದು ಸಂಭ್ರಮ ಎನ್ನಬಹುದು. ಡಾ. ಅಶೋಕ ನರೋಡೆ ಕನ್ನಡ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಸಾಹಿತ್ಯ ರಚಿಸಿ ಹೆಸರು ಮಾಡಿದವರು. ಬುದ್ಧನ ನಾಡೆಂದೆ ಹೆಸರು ಮಾಡಿರುವ ಈ ಪುಟ್ಟ ದೇಶದ ಎಲ್ಲಾ ಮಜಲುಗಳನ್ನು ಈ ಕೃತಿಯಲ್ಲಿ ಓದುಗರಿಗೆ ಪರಿಚಯಿಸಿದ್ದಾರೆ. ಭೂತಾನ್ ಇತಿಹಾಸ, ಟೈಗರ್ ನೆಸ್ಟ್, ಭೂತಾನ್ ದೇಶದ ವೈಶಿಷ್ಟ್ಯಗಳು, ಬುದ್ಧನ ಪ್ರತಿಮೆಗಳು, ಅಲ್ಲಿನ ಪಗೋಡಾಗಳು ಹೀಗೆ. ಜೊತೆಗೆ ಅಲ್ಲಿನ ಜನರ ವೇಷಭೂಷಣಗಳು, ಹಳ್ಳಿಗಳು ಮತ್ತು ಹಿಮಾಲಯ ಪರ್ವತಗಳ ಸೌಂದರ್ಯ... ಎಲ್ಲವನ್ನು ಒಳಗೊಂಡಿರುವ ಈ ಕೃತಿ ಒಂದಷ್ಟು ಬಣ್ಣದ ಚಿತ್ರಗಳನ್ನೂ ಹೊಂದಿದೆ.*

**– ಡಾ॥ ಎಂ. ವೆಂಕಟಸ್ವಾಮಿ,** *ಬೆಂಗಳೂರು*



# ಬ್ರಹ್ಮ ಮಂಡಲ

**ಡಾ॥ ಇಂದಿರಾ ಹೆಗ್ಗಡೆ**

**ಅಂ**ದು ಬಹಳ ಬೇಗ ಮನೆಗೆ ಬಂದ ರಾಮ.'ಅಮ್ಮಾ ಬೇಗ ಊಟ ಹಾಕು' ಎಂದ ತಾಯಿಗೆ. ಮಿಕ್ಕ ದಿನಗಳಲ್ಲಿ ರಾತ್ರಿ ೧೦ ಗಂಟೆಗೆ ಮೊದಲು ಮನೆಗೆ ಬರುತ್ತಿರಲಿಲ್ಲ ಆತ. ಹುಡುಗರ ಜೊತೆ ಪಟ್ಟಾಂಗ ಹೊಡೆದು ಕುಳಿತಿರುತ್ತಿದ್ದ. ಇವತ್ತು ೮ ಗಂಟೆಗೇ ಬಂದು ಸ್ನಾನ ಮಾಡಿದ. ಅಮ್ಮನಿಗೆ ಖುಷಿಯಾಯ್ತು. 'ಅಮ್ಮಾ ಊಟ ಹಾಕು' ಎಂದ. ಅಮ್ಮ ಊಟ ಹಾಕಿದರು. ಮನೆಯಲ್ಲಿ ಕೋಳಿ ಅಡುಗೆ ಮಾಡಿದ್ದರು. ಜೊತೆಗೆ ರೊಟ್ಟಿಯೂ ಇತ್ತು. "ಏನಮ್ಮಾ ಇವತ್ತು ವಿಶೇಷ? ಕೋಳಿ ಮಾಡಿದೀಯಲ್ಲ?" ಎಂದ.

"ಮನೆಗೆ ನಿನ್ನ ಬಾವ ಬಂದಿದ್ದರು. ಅವನಿಗೆಂದು ಒಂದು ಕೋಳಿ ತಮ್ಮನ ಮಾಡಿದೆ. ಆ ಕೋಳಿಯನ್ನು ಓಡಿಸಿ ಓಡಿಸಿ ಹಿಡಿದುದು. ಸಾಕು ಸಾಕಾಯಿತು ಮಕ್ಕಳಿಗೆ ಅದನ್ನು ಹಿಡಿಯಬೇಕಾದರೆ"

ಹಳ್ಳಿ ಮನೆಗಳಲ್ಲಿ ಆಕಸ್ಮಿಕವಾಗಿ ಮನೆಗೆ ಬಂದ ಅತಿಥಿಗಳಿಗೆ ಕೋಳಿ ಅಡುಗೆಯ ತಮ್ಮನ ಮಾಡಬೇಕಾದರೆ ಕೋಳಿಯನ್ನು ಓಡಿಸಿಯೇ ಹಿಡಿಯಬೇಕು ಎಂದುಕೊಂಡ ರಾಮ ಮೌನವಾಗಿ ಉಣ್ಣತೊಡಗಿದ. "ನಿಧಾನ ಊಟ ಮಾಡು. ಗಬಗಬನೇ ತಿನ್ನುತ್ತಿಯಲ್ಲ? ಏನವಸರ?" ಆತನ ತಾಯಿ ನುಡಿದರು.

"ಫ್ರೆಂಡ್ಸ್ ಕಾಯ್ತಾ ಇದ್ದಾರೆ ಅಮ್ಮಾ..." ಎಂದವನೇ ಕೈ ತೊಳೆದ. ಕ್ಯಾಮರಾ ಹೆಗಲಿಗೆ ಹಾಕಿದ.

"ಈ ರಾತ್ರಿಯಲ್ಲಿ? ಎಲ್ಲಿಗೆ ಹೊರಟೆ? ಹೇಳಿ ಹೋಗಬಾರದಾ?"

"ಬ್ರಹ್ಮ ಮಂಡಲಕ್ಕೆ"

'ಹ್ಞಾಂ? ಬ್ರಹ್ಮ ಮಂಡಲಕ್ಕಾ?" ತಾಯಿಯ ಆತಂಕ.

"ಯಾಕೆ ಏನಾಯಿತು?"

"ನೀನು ಕೋಳಿ ತಿಂದೆಯಲ್ಲಾ?" ರಾಮ ಮಾಡಬಾರದ ತಪ್ಪು ಮಾಡಿದಂತೆ ಗಾಬರಿಯಿಂದಲೇ ಕಮಲಕ್ಕ ಹೇಳಿದರು.

"ಹೌದು. ತಿಂದೆ."

"ಕೋಳಿ ತಿಂದು ಬ್ರಹ್ಮ ಮಂಡಲಕ್ಕೆ ಯಾರಾದರೂ ಹೋಗುತ್ತಾರಾ?"

"ಯಾರು ಹೋಗುತ್ತಾರೆಯೋ ನನಗೆ ತಿಳಿದಿಲ್ಲ. ನಾನು ಹೋಗುತ್ತೇನೆ."

"ನೀನು ಇಚ್ಚಾನ್ಸಾರದವ" ತಾಯಿಯ ಮಾತಿಗೆ

"ನೀನು ಬದಲಾಗಲ್ಲ. ಅಪ್ಪ ಹಾಕಿದ ಆಲದ ಮರಕ್ಕೇ ಜೋತು ಬೀಳುತ್ತೀಯ ಬೀಳು" ಎಂದ ಮಗ.

"ನಾನು ಬದಲಾಗಲ್ಲವಾ? ನೀನಾ?"

"ಕೋಳಿ, ಮೀನು ತಿಂದು ಬ್ರಹ್ಮ ಮಂಡಲಕ್ಕೆ ಹೋಗಬೇಡ ಅಂತಿಯಲ್ಲಾ? ಸ್ವಲ್ಪ ಮಂಡೆ ಖರ್ಚು ಮಾಡು. ನಾಗ ಹುಲ್ಲುತಿಂತದಾ? ಅದು ತಿನ್ನುವುದು ಏನನ್ನು? ಇಲಿ, ಕೋಳಿ ಮರಿ, ಕೋಳಿ ಮೊಟ್ಟೆ, ಕಪ್ಪೆ ಇತ್ಯಾದಿ ಅಲ್ಲವಾ?"

"ನಿನ್ನ ಬಳಿ ಮಾತಾಡಲು ನನ್ನಿಂದ ಆಗದು."

"ನಾನು ಕೇಳಿದ್ದಕ್ಕೆ ಉತ್ತರ ಕೊಡಮ್ಮಾ."

"ನಿನಗೆ ಏನು ಉತ್ತರ ಕೊಡುವುದು?"

"ನಾಗ ಕೂಡಾ ನಮ್ಮಂತೆಯೇ ಮಾಂಸಾಹಾರಿ ಪ್ರಾಣಿ. ನಿನಗೆ ನೆನಪಿರಲಿ."

"ನಿನ್ನ ತರ್ಕ ಜಾಸ್ತಿಯಾಯಿತು"

"ನಾಗ ಹುಲ್ಲು ತಿನ್ನುತ್ತಿದ್ದರೆ ನಾವು ಮೀನು, ಕೋಳಿ ತಿಂದು ಬ್ರಹ್ಮ ಮಂಡಲಕ್ಕೆ ಹೋಗಬಾರದು ಎನ್ನುವ ನಿನ್ನ ಮಾತು ಒಪ್ಪಿಕೊಳ್ಳಬಹುದಿತ್ತೋ ಏನೋ?" ಎಂದವನೇ ರಾಮ ಮೋಟಾರು ಬೈಕ್‌ಗೆ ಒದ್ದ. ಗುರ್ರ್ ಗುರ್ರ್ ಎನ್ನುತ್ತಾ ಗಾಡಿ ಹೊಗೆ ಬಿಟ್ಟು ಹೋಯಿತು. ರಾಮ ಬ್ರಹ್ಮಮಂಡಲದ ಬಳಿ ಬಂದ. ಅಲ್ಲಿಯ ಅಲಂಕಾರ ನೋಡಿ ದಂಗಾದ. ಎಷ್ಟು ಕೋಟಿ ಖರ್ಚು ಮಾಡಿದ್ದಾರೋ ಎಂದು ಮನಸ್ಸಿನಲ್ಲಿ ಗುನು ಗುನು ಮಾಡಿದ. ಮನುಷ್ಯ ದೇವರ ಹೆಸರಲ್ಲಿ ಎಷ್ಟೊಂದು ಖರ್ಚು ಮಾಡುತ್ತಾನೆ? ಅದೇ ಸಂಕಟದಲ್ಲಿ ಇರುವವರಿಗೆ

ಹಣದ ಸಹಾಯ ಮಾಡಲು ಇವರು ಸಿದ್ಧರಿಲ್ಲ ಎಂದುಕೊಂಡ.

ಆತನ ಗೆಳೆಯರು ಇನ್ನೂ ಬಂದಿರಲಿಲ್ಲ. ಬ್ರಹ್ಮ ಮಂಡಲದ ಅನ್ನ ಸಂತರ್ಪಣೆ ಇನ್ನೂ ನಡೆಯುತ್ತಿತ್ತು. ಮನೆಯಲ್ಲಿ ಊಟ ಮಾಡುವ ಬದಲು ಇಲ್ಲಿಯೇ ಊಟ ಮಾಡಬಹುದಿತ್ತು ಎಂದುಕೊಂಡ. ಆದರೆ ಆಗ ಹಸಿವಾಗಿತ್ತು, ಕೋಳಿ ಊಟ ಖುಷಿಯನ್ನೂ ನೀಡಿದೆ. ಯಾರಿಗೆ ಬೇಕು ಈ ಸಪ್ಪೆ ಊಟ ಎಂದುಕೊಂಡು ಬ್ರಹ್ಮ ಮಂಡಲದ ಮಂಟಪದ ಬಳಿ ಬಂದ. ಮಂಟಪದ ಅಲಂಕಾರ ಬಹಳ ಸೊಗಸಾಗಿತ್ತು. ನಾಲ್ಕು ದಿಕ್ಕಿನಲ್ಲೂ ಹೂಗಳ ಜೊತೆ ಬೊಂಡಗಳ ತೋರಣ ಕಟ್ಟಲಾಗಿತ್ತು. ವೇದಿಕೆಯ ಮಧ್ಯಭಾಗದಲ್ಲಿ ನಾದಬ್ರಹ್ಮನ ಮುಖಕಮಲದ ರಂಗೋಲಿ ಚಿತ್ರವನ್ನು ಸುಂದರವಾಗಿ ಬಿಡಿಸಿದ್ದರು. ಅದರ ಬಳಿಯಲ್ಲಿ ಒಂದು ಹೆಡೆಯ ನಾಗನ ಚಿತ್ರ ಇತ್ತು. ಪಂಚವರ್ಣದಲ್ಲಿ ಸುಂದರವಾಗಿ ಮೂಡಿತ್ತು ಅದು. ಚಿತ್ರಗಳ ಬಳಿ ಲಾಡುಗಳ ಅಲಂಕಾರವೂ ಇತ್ತು. ಅದರ ಸುತ್ತಲೂ ಮಂಡಲ. ಹೊರ ಸುತ್ತಲ್ಲಿ ಬೊಂಡ ಮತ್ತು ತೆಂಗಿನಕಾಯಿಯ ಮೇಲೆ ರಾಶಿ ರಾಶಿ ಪಿಂಗಾರದ ಗೊಂಚಲುಗಳ ದಂಡೆ. ಎಲ್ಲಾ ಗೊಂಚಲುಗಳು ಹಾಲಿನ ಕೆನೆ ಬಣ್ಣದವುಗಳು.

ಅಷ್ಟರಲ್ಲಿ ರಾಮನ ಗೆಳೆಯರು ಬಂದರು.

ಎಲ್ಲರೂ ಒಂದೆಡೆ ಕುಳಿತು ಬ್ರಹ್ಮ ಮಂಡಲ ಆರಂಭವಾಗುವುದನ್ನು ಕಾಯುತ್ತ ಕುಳಿತರು, ಆಯಿತು. ಬ್ರಹ್ಮ ಮಂಡಲ ಆರಂಭವಾಯಿತು. ಬ್ರಹ್ಮ ಪಾತ್ರಿ ಥಳುಕು ಬಳುಕು ಹೆಣ್ಣಿನಂತೆ ಇದ್ದ. ಆತ ಬ್ರಾಹ್ಮಣ. ಮೈಯಲ್ಲಿ ಜನಿವಾರ ಇತ್ತು. ಸೊಂಟದ ಕೆಳಗೆ ಕಚ್ಚೆ, ಎರಡೂ ಕೈಗಳಲ್ಲಿ ಚಿನ್ನದ ಕಡಗಗಳು. ಕೈಬೆರಳುಗಳ ತುಂಬ ಚಿನ್ನದ ಉಂಗುರಗಳು. ವೈದ್ಯನ ಕೈಯಲ್ಲೂ ಕಡಗಗಳು ಮತ್ತು ಉಂಗುರಗಳು ಇದ್ದುವು. ನಾಗಸ್ವರ ಏರಿದಂತೆಲ್ಲ ನಾಗ ಪಾತ್ರಿಯ ಬಳಕು ಹೆಚ್ಚಾಯಿತು. ಆತ ಎಳೆ ಪಿಂಗಾರದಲ್ಲಿ ಮೀಯಲು ತೊಡಗಿದ. ನಾಗಸ್ವರ ಏರಿದಂತೆ ಆತನ ಮೀಯುವ ಪರಿಯೂ ಬಹಳ ಆಕರ್ಷಕವಾಗಿ ಕಾಣುತ್ತಿತ್ತು. ಒಮ್ಮೆ ವೈದ್ಯ ಹಿಮ್ಮುಖವಾಗಿ ಚಲಿಸಿದರೆ ಮಗದೊಮ್ಮೆ ಬ್ರಹ್ಮ ಪಾತ್ರಿ ಹಿಮ್ಮುಖವಾಗಿ ಚಲಿಸುತ್ತಿದ್ದ. ಎಳೆ ಪಿಂಗಾರದಲ್ಲಿ ನಿಂತು ಮಿಂದ, ಓಡಾಡಿ ಮಿಂದ, ಕುಳಿತು ಮೀಯತೊಡಗಿದ! ಪಿಂಗಾರದ ಅರಿಗಳು ಆತನ ಮುಖದ ಮೇಲೆ ಸರ್ಪಜೆಡೆ ಬಿಡಿಸಿದ್ದುವು! ಭಕ್ತರ ಮೈ ನವಿರೇಳುತ್ತಿತ್ತು! ವಜ್ರಾಸನದಲ್ಲಿ ಕುಳಿತ ಆತನ ಮಡಿಲಲ್ಲಿ ಎದೆ ಮಟ್ಟದ ಕೆನೆ ಬಣ್ಣದ ಪಿಂಗಾರ ಸೊಗಯಿಸುತ್ತಿತ್ತು!

ಆದರೂ ರಾಮನಿಗೆ ಯಾಕೋ ಈ ಬ್ರಹ್ಮ ಮಂಡಲಕ್ಕಿಂತ ಚಾರದುಗ್ಗಮ್ಮ ಕ್ಷೇತ್ರದಲ್ಲಿ ಬಿಲ್ಲವರು ಮಾಡುವ ನಾಗ ದರ್ಶನ ಬಹಳ ತಟ್ಟಿತ್ತು. ಅಲ್ಲಿ ಇಂತಹ ಆಡಂಬರ ಇಲ್ಲ. ಸಿಂಪಲ್! ಆದರೂ ನಾಗ ಪಾತ್ರಿ ಮಣ್ಣಿನ ಮೇಲೆ ಉರುಳುತ್ತಾ ಹೊರಳುತ್ತಾ ನೆಲ ಮೂಸುತ್ತಾ ನೆಲದಗಂಧ ಹೀರುತ್ತಾ ಮುಂದೊತ್ತಿದ್ದ ದೃಶ್ಯ ಅಮೋಘವಾಗಿತ್ತು! ನಾಗ ಮಣ್ಣಿನ ದೇವರು! ಥೇಟ್ ಸರ್ಪದ ರೀತಿಯಲ್ಲಿ ನಾಗನ ನಿಜ ಸ್ವರೂಪವನ್ನು ದೃಶ್ಯದಲ್ಲಿ ಕಟ್ಟಿ ಭಕ್ತರ ಕಣ್ಣೆದುರು ತಂದಿರಿಸಿದ್ದ ಅಂದು ನಾಗ ಪಾತ್ರಿ! ರಾಮನಿಗೆ ಅದು ಇದಕ್ಕಿಂತ ಸಹಜ ಎನಿಸಿತ್ತು.

ರಾಮ ಕ್ಯಾಮರಾವನ್ನು ಕಣ್ಣಿಗೆ ತಾಗಿಸಿಕೊಂಡು ಮಂಡಲದ ಸಮೀಪದ ಕಂಬದ ಬಳಿ ಗುರಿಯಿಟ್ಟು ನಿಂತ ಫೋಟೋ ಶೂಟ್ ಮಾಡಲು. ನಾಗಬೆರ್ಮರ ಪಾತ್ರಿ ವೈದ್ಯನೊಂದಿಗೆ ಕುಣಿಯುತ್ತಾ ಸುತ್ತು ಹೊಡೆಯುತ್ತಾ ಇದ್ದರೆ ಇವನ ಸಂಪೂರ್ಣ ಗಮನ ಕ್ಯಾಮರಾ ಕಣ್ಣೊಳಗೆ. ಅಷ್ಟರಲ್ಲಿ ಅವನ ಕಿವಿಯ ಬಳಿ ಬಿಸಿಯುಸಿರು ಸೋಕಿದಂತಾಯಿತು. ಬೆಚ್ಚಿ ಬಿದ್ದುತಿರುಗಿ ನೋಡಿದರೆ ನಾಗಬ್ರಹ್ಮ ಪಾತ್ರಿ! ರಾಮ ಅಲ್ಲಿಂದ ಜಾಗತೆರವು ಮಾಡಿ ಇನ್ನೊಂದು ಮೂಲೆಯನ್ನು ಆರಿಸಿ ಅಲ್ಲಿ ಶೂಟ್ ಮಾಡಲು ಕ್ಯಾಮರಾ ಅಣಿ ಮಾಡಿದ. ಆತ ಒಂದೇ ಕ್ಲಿಕ್ ಹೊಡೆದಿದ್ದು. ಇಲ್ಲೂ ಬಿಸಿಯುಸಿರ ಸುಯ್ಲು ಅವನನ್ನು ಬೆಚ್ಚಿಸಿತು. ರಾಮ ವೈಚಾರಿಕ ಚಿಂತನೆಯವ ನಾದರೂ ಒಂದು ಕ್ಷಣ ಬೆಚ್ಚಿದ್ದು ಸುಳ್ಳಲ್ಲ. ಗಲಿಬಿಲಿಗೊಂಡು ಆವರಣದ ಮತ್ತೊಂದು ಮೂಲೆಗೆ ಹೋದ. ಅಲ್ಲಿಯೂ ಅದೇ ಅನುಭವ! ಒಮ್ಮೆಲೆ ಅಮ್ಮ ನೆನಪಾದಳು. 'ಕೋಳಿ ರೊಟ್ಟಿತಿಂದು ಬ್ರಹ್ಮ ಮಂಡಲಕ್ಕೆ ಹೋಗಬಾರದು' ಎಂದು ಗದರಿದ್ದಳಲ್ಲ. ತಾನು ಕೋಳಿ ತಿಂದು ಬಂದುದಕ್ಕೆ ಈ ರೀತಿ ನಾಗ ಬೆರ್ಮರ ಪ್ರತಿಕ್ರಿಯೆನಾ? ತನ್ನಿಂದ ನಿಜವಾಗಿಯೂ ಅಪಚಾರವಾಯಿತಾ? ನಾಗಬೆರ್ಮರ ಪಾತ್ರಿ ನನ್ನ ಬೆನ್ನು ಹಿಡಿಯುತ್ತಿದೆಯಾ? ಛೆ! ಹಾಗಿರಲಾರದು. ನನಗೂ ಮರ್ಲ್. ಈ ರೀತಿ ಮಂಡೆ ಬಿಸಿ ಮಾಡಲು ಎಂದುಕೊಂಡ. ತನ್ನ ಫೋಟೋಗ್ರಾಫಿಂಗ್ ಮುಂದುವರಿಸಿದ.

ಈಗಲೂ ಅದೇ ಬೆರ್ಮೆರ್ ಅದೇ ಸುಯ್ಲು! ರಾಮ ಈಗ ಕದಲಲಿಲ್ಲ. ಏನಾಗುತ್ತದೆ ನೋಡೋಣ ಎಂದು ಮಿಸುಕದೆ ತನ್ನ ಕೆಲಸದಲ್ಲಿ ತಲ್ಲೀನತೆ ತೋರಿಸಿದ!

ರಾಮನ ಕಣ್ಣು ಕ್ಯಾಮರಾ ಕಣ್ಣೊಳಗೆ! ಮನಸ್ಸು ಬೆರ್ಮೆರೊಳಗೆ! ಫೋಟೋ ತೆಗೆಯುತ್ತಿದ್ದಂತೆ ಮತ್ತೆ ನಾಗಬೆರ್ಮೆ (ಪಾತ್ರಿ ) ಈತನ ಬಳಿ ಬಂದ. ಈಗ ರಾಮ ಬೆಚ್ಚಲಿಲ್ಲ. ಅಲ್ಲಿಯೇ ನಿಂತ. ಇನ್ನೊಂದು ಸುತ್ತಿನಲ್ಲಿ ಆತನ ಕಿವಿಯ ಬಳಿ ಮುಖ ತಂದು ನಾಗ ಬೆರ್ಮೆ ಸುಯ್ಲಿನಲ್ಲಿ ಕೇಳಿದ್ದು – "ಫೋಟೋ ಲಾಯಿಕ್ ಬತ್ತ್ಂಡಾ?" – (ಫೋಟೋ ಚೆನ್ನಾಗಿ ಬಂತಾ?)

ಡಾ॥ ಇಂದಿರಾ ಹೆಗ್ಗಡೆ
೬, ಕೃಷ್ಣ ರೆಸಿಡೆನ್ಸಿ, ೪ನೇ ಅಡ್ಡರಸ್ತೆ, ಅಮರಜ್ಯೋತಿನಗರ, ವಿಜಯನಗರ, ಬೆಂಗಳೂರು – ೫೬೦೦೪೦




# ಅಲ್ಲಮ

ಕಟ್ಟುವ ಹಠಕ್ಕೆ ಬಿದ್ದು
ಹರಿಯುವ ನೀರಾದ
ದೇಸೀ ಘಮಲಿಗೆ ನಾದವಾಗಿ
ಹುಸಿ ಪಂಡಿತರಿಗೆ ದೈತ್ಯನಾದ
ಮಾಯೆಯೆಂದವರಿಗೆ
ಮೋಹವನೆ ತೊಡಿಸಿ ಮರುಳಾದ
ಬಯಲು ಆಲಯದಲಿ
ಬಯಲಾಗಿ ನಿರ್ಮೋಹಿಯಾದ
ಜಾತಿ ಧರ್ಮದ ಬೆಂಕಿಗೆ
ಕಡುಕಠಿಣ ಅಲಗಾದ
ನಿಸ್ಸಾರ ಭೂಮಿಗೆ ಫಲವತ್ತು ಪೈರಾದ
ಚರಾಚರಕೆ ಕಣ್ಣಾದ
ಇಹಕೆಲ್ಲ ಹೆಣ್ಣಾದ
ಶಬ್ದ ಸ್ಪರ್ಶ ಗಂಧ ಗಾಳಿಯಲಿ ಜ್ಯೋತಿಯಾದ!



ಡಾ॥ ಎ. ರಘುರಾಂ
ಸಹ ಪ್ರಾಧ್ಯಾಪಕರು ಕನ್ನಡ ವಿಭಾಗ, ಮಹಾರಾಣಿ ಮಹಿಳಾ ಕಲಾ
ವಾಣಿಜ್ಯ ಮತ್ತು ನಿರ್ವಹಣಾ ಕಾಲೇಜು, ಬೆಂಗಳೂರು – ೫೬೦ ೦೦೧

# ಗೊಲ್ಲರ ಯಾದವೀಕರಣ ಯಾನದ ಹೆಜ್ಜೆಗಳು

ಡಾ॥ ಮಲ್ಲಿಕಾರ್ಜುನ ಕಲಮರಹಳ್ಳಿ

ಭಾರತಾದ್ಯಂತ ವಿವಿಧ ಹೆಸರುಗಳಿಂದ ನೆಲೆಗೊಂಡಿರುವ ಕೆಲವೇ ಕೆಲವು ಮೂಲನಿವಾಸಿ ಸಮುದಾಯಗಳಲ್ಲಿ ಗೊಲ್ಲ ಸಮುದಾಯವೂ ಒಂದು. ಗೊಲ್ಲರ ಸಾಮಾಜಿಕ ಸ್ಥಿತ್ಯಂತರದ ನೆಲೆಗಟ್ಟಿನಲ್ಲಿ 'ಯಾದವೀಕರಣ'ದ ಪ್ರಕ್ರಿಯೆ ವಿಶೇಷವಾಗಿ ಗಮನ ಸೆಳೆಯುತ್ತದೆ. ವಿದ್ಯಾವಂತ ಗೊಲ್ಲರು ತಮ್ಮ ಹೆಸರುಗಳ ಮುಂದೆ 'ಯಾದವ'(ವ್) ಎಂಬ ಪದವನ್ನು ಉತ್ತರ ಪದವಾಗಿ (ಸಫಿಕ್ಸ್) ಬಳಸಲು ಆರಂಭಿಸಿದ್ದಾರೆ. ಅಂತೆಯೇ ತಮ್ಮ ಸಂಘ ಸಂಸ್ಥೆಗಳಿಗೂ 'ಯಾದವ' ಶಬ್ದವನ್ನು ಪೂರ್ವ ಪದವಾಗಿ (ಪ್ರಿಫಿಕ್ಸ್) ಸೇರಿಸಿಕೊಂಡು 'ಗೊಲ್ಲ' ಪದವನ್ನು ಕಂಸದಲ್ಲಿ ಮಾತ್ರ ಉಳಿಸಿಕೊಳ್ಳುವ ಪರಿಪಾಠ ಬೆಳೆದು ಬಂದಿದೆ. ಇದು ಸಮುದಾಯದ ಸ್ಥಿತ್ಯಂತರದ ಸಂಸ್ಕೃತೀಕರಣಕ್ಕೆ ಉತ್ತಮ ನಿದರ್ಶನವಾಗಿದೆ. ಸಮುದಾಯವನ್ನು ಸಾಮಾಜಿಕ ಶ್ರೇಣಿಯಲ್ಲಿ ಉನ್ನತೀಕರಣಗೊಳಿಸಿಕೊಳ್ಳುವ ಆಂತರಿಕ ಹಂಬಲ ಈ ಪ್ರಕ್ರಿಯೆಯಲ್ಲಿ ಕಂಡುಬರುತ್ತದೆ. ಇದಕ್ಕೆ ಮೂಲ ಪ್ರೇರಣೆ ಉತ್ತರ ಭಾರತದ ಯಾದವ ಪ್ರಭಾವಿ ರಾಜಕಾರಣಿಗಳ ವರ್ಚಸ್ಸು. ಈ ಮುನ್ನ ದಕ್ಷಿಣ ಭಾರತದಲ್ಲಿ ಯಾದವ ಪರಿಕಲ್ಪನೆ ಮೂಲತಃ ಇದ್ದಿರಲಿಲ್ಲ.

ಭಾರತದ ಗೊಲ್ಲರು ತಮ್ಮನ್ನು ಯಾದವರೆಂದು ಕರೆದುಕೊಳ್ಳುತ್ತಿರುವ ಔಚಿತ್ಯವನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕಾಗಿದೆ. ವಾಸ್ತವವಾಗಿ ಗೊಲ್ಲರು ಯಾದವರೇ? ಶ್ರೀಕೃಷ್ಣ ಗೊಲ್ಲನೇ? ಎಂಬ ಜಿಜ್ಞಾಸೆ ಸಮುದಾಯದ ಕೆಲ ಚಿಂತಕರಲ್ಲಿ ನಡೆಯುತ್ತಿದೆ. ಶ್ರೀಕೃಷ್ಣ ಹುಟ್ಟಿನಿಂದ ಕ್ಷತ್ರಿಯ. ಯಯಾತಿ-ಯದು ಮೂಲದ ವಸುದೇವ, ಕಂಸ ಯದುವಂಶೀಯರು, ಯಾದವರು, ಕ್ಷತ್ರಿಯರು. ಯದುವಂಶೀಯ ಕ್ಷತ್ರಿಯ ಕುಲದ ವಸುದೇವ ದೇವಕಿಯರ ಮಗನಾದ ಶ್ರೀಕೃಷ್ಣ ಅಂದಿನ ಕಂಸನ ರಾಜಕಾರಣದ ನಿಮಿತ್ತ ಹುಟ್ಟಿದ ದಿನದಿಂದಲೇ ಗೋಕುಲದಲ್ಲಿಯೇ ಬೆಳೆಯುತ್ತಾನೆ. ಶ್ರೀ ಕೃಷ್ಣ ಗೋಕುಲದ ಎಲ್ಲಾ ವಯೋಮಾನದ ಜನರಿಂದ ಲಿಂಗಭೇದವಿಲ್ಲದೆ ಪ್ರೀತಿ ಗಳಿಸಿ ಎಲ್ಲರ ಮನ ಗೆಲ್ಲುತ್ತಾನೆ. ಭಕ್ತಿ ಗೌರವಗಳನ್ನು ಪಡೆದುಕೊಳ್ಳುತ್ತಾನೆ. ತುಂಬು ಹರೆಯದಲ್ಲಿ ಕಂಸನ ಬಿಲ್ಲ ಹಬ್ಬಕ್ಕಾಗಿ ಗೋಕುಲದಿಂದ ನಿರ್ಗಮಿಸಿದ ಕೃಷ್ಣ ಮತ್ತೆಂದೂ ಗೋಕುಲದ ಕಡೆಗೆ ತಿರುಗಿ ನೋಡಲಿಲ್ಲ. ಕೃಷ್ಣನ ಆವರೆಗಿನ "ಗೊಲ್ಲಮನಸ್ಸು" ಕ್ಷಾತ್ರಕ್ಕೆ ಪರಿವರ್ತಿತವಾಗುತ್ತದೆ. ಕೊಳಲಿನ ಕೈಯಲ್ಲಿ ಚಕ್ರ ಸ್ಥಾನ ಪಡೆದುಕೊಳ್ಳುತ್ತದೆ.

ಮಹಾಭಾರತ ಪುರಾಣ ಕಥನದಲ್ಲಿ ಶ್ರೀಕೃಷ್ಣ ತನ್ನ ಮಹಿಮೆ ಅಂತಹ ಶಕ್ತಿ ಸಾಮರ್ಥ್ಯದಿಂದ ಪೂರ್ಣತ್ವದ ವ್ಯಕ್ತಿಯಾಗಿ, ದೈವಾಂಶಚೇತನವಾಗಿ ಲೋಕಖ್ಯಾತಿ ಪಡೆಯುತ್ತಾನೆ. ಇದಕ್ಕೆಲ್ಲ ಮೂಲ ಪ್ರೇರಣೆ ಅವನ ಬಾಲ್ಯದ ಗೊಲ್ಲರ ನೆಲಮೂಲದ ಭಾವೋತ್ಕರ್ಷಗಳು. ಹಾಗಾಗಿ ಗೊಲ್ಲರು ಶ್ರೀಕೃಷ್ಣನನ್ನು 'ಕುಲತಿಲಕ'ನನ್ನಾಗಿ ಸ್ವೀಕರಿಸಿದರು. ಆದರೆ ಆ ಕಾಲದ ಗೊಲ್ಲರು ತಮ್ಮನ್ನು ಎಂದಿಗೂ ಯಾದವರೆಂದು ಕರೆದುಕೊಳ್ಳಲಿಲ್ಲ, ರೂಪಾಂತರ ಹೊಂದಲಿಲ್ಲ. ಗೊಲ್ಲರಾಗಿಯೇ ಬದುಕಿ ಬಾಳಿದರು.

ಮಧ್ಯಕಾಲೀನ ಚರಿತ್ರೆಯಲ್ಲಿ ಉಲ್ಲೇಖಿತಗೊಂಡಿರುವ ಸೇವುಣ ಅರಸರು (ದೇವಗಿರಿಯ ಯಾದವರು) ಮತ್ತು ಕರ್ನಾಟಕದ ಮೈಸೂರು ಒಡೆಯರು ಯಾದವರೆಂದು ಪರಿಗಣಿಸಲ್ಪಟ್ಟಿರುವುದು ನಿಜ. ಆದರೆ ಆ ಅರಸು ಮನೆತನಗಳು ಗೊಲ್ಲ ಕುಲದವರಲ್ಲ ಎಂಬುದು ನಿರ್ವಿವಾದ. ಆಡಳಿತ ಅವಧಿಯ ಯಾವ ಸಂದರ್ಭದಲ್ಲಿಯೂ ತಮ್ಮನ್ನು ತಾವು ಗೊಲ್ಲರೆಂದು ಪರಿಭಾವಿಸಿಕೊಂಡದ್ದಕ್ಕೆ ಯಾವ ನಿದರ್ಶನಗಳೂ ಕಂಡುಬಂದಿಲ್ಲ.

ಚರಿತ್ರೆಯಲ್ಲಿ ಯಾದವ ಪದಬಳಕೆ ಮತ್ತು ಯಾದವರೆಂದು ಕರೆಯಲ್ಪಡುವ ವಂಶ ನಿರ್ಧಾರಣೆ ಕುರಿತಂತೆ ಇತಿಹಾಸತಜ್ಞ ಡಾ॥ ಎ. ವಿ. ನರಸಿಂಹಮೂರ್ತಿಯವರ ಅಭಿಪ್ರಾಯ ಸಾಕಷ್ಟು ಜಿಜ್ಞಾಸೆಗೆ ಒಳಪಡಿಸುತ್ತದೆ. "ಪ್ರಾಚೀನ ಭಾರತದಲ್ಲಿ 'ಯಾದವ ವಂಶ ಕುಲೋದ್ಭವ', 'ದ್ವಾರಾವತಿ ಪುರವರಾಧೀಶ್ವರ' ಮುಂತಾದ ಬಿರುದುಗಳು ಸಾಮಾನ್ಯವಾಗಿ ಅನೇಕ ರಾಜವಂಶದವರಿಗೂ ಇದ್ದವು. ಶ್ರೀಕೃಷ್ಣನ ಕುಲದವರೆಂದು ತಮ್ಮ ಘನತೆಯನ್ನು ಹೆಚ್ಚಿಸಿಕೊಳ್ಳುವ ಪ್ರವೃತ್ತಿ ಹೊಸದೇನಲ್ಲ. ಹೀಗೆ ಹೇಳಿಕೊಳ್ಳುವ ಎಲ್ಲಾ ರಾಜ ಮನೆತನದವರೂ ದ್ವಾರಾವತಿಯವರಲ್ಲ... ಪಲ್ಲವರ ನಂತರ ದಕ್ಷಿಣ ಭಾರತದಲ್ಲಿ ಆಳಿದ ಅನೇಕ ರಾಜಮನೆತನಗಳು



ಬ್ರಾಹ್ಮಣ ಅಥವಾ ಕ್ಷತ್ರಿಯ ಪಂಗಡಗಳಿಗೆ ಸೇರಿರಲಿಲ್ಲ. ಆದರೆ ಅವರುಗಳು ತಮ್ಮ ಸ್ವಂತ ಪರಾಕ್ರಮದಿಂದ ಬಹಳ ಶಕ್ತಿಯುತವಾದ ರಾಜ ಮನೆತನದವರಾಗಿದ್ದರು. ತಮ್ಮ ಶಕ್ತಿಯ ಮೇಲ್ಮೆಗೆ ತಕ್ಕಂತೆ ಅವರಿಗೆ ಜಾತಿಯ ಮೇಲ್ಮೆ ಇರಲಿಲ್ಲ. ಅಂಥ ರಾಜರುಗಳು ಯದುವಂಶದವರೆಂದೂ ಮತ್ತು ದ್ವಾರಾವತಿಯವರೆಂದೂ ಹೇಳಿಕೊಂಡು ತಮ್ಮ ಘನತೆಯನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಸೇವುಣರೂ ಕೂಡ ಈ ಗುಂಪಿಗೆ ಸೇರಿದವರು. ಚರಿತ್ರೆಯ ದೃಷ್ಟಿಯಿಂದ ಆ ಸಮಯದಲ್ಲಿ ದ್ವಾರಾವತಿಯಿಂದ ಯಾದವರು ದಕ್ಷಿಣಕ್ಕೆ ಬಂದರೆಂದು ಹೇಳಲು ಯಾವ ಆಧಾರಗಳೂ ಇಲ್ಲ". (ಕರ್ನಾಟಕ ಸೇವುಣರ ಇತಿಹಾಸ–ಪು: ೧೦) ಸೇವುಣರ ಸಮಕಾಲೀನ ಅರಸರಾದ ಹೊಯ್ಸಳರು, ರಾಷ್ಟ್ರಕೂಟರು, ಚಾಲುಕ್ಯರು ಹಾಗೂ ಅಧೀನ ಅರಸರಾದ ರಟ್ಟರು, ಸಿಂಧರು, ಈ ಯಾರೂ ಸಹ ಸೇವುಣರನ್ನು ಯಾದವರೆಂದು ಕರೆದಿರುವುದಾಗಿ ಕಂಡುಬಂದಿರುವುದಿಲ್ಲ. ಯಾದವ ಎಂಬ ಪದ ಬಳಕೆಯನ್ನು ಈಗಾಗಲೇ ಪ್ರಸ್ತಾಪಿಸಿದಂತೆ ಸೇವುಣರು ಸಾಮಾಜಿಕ ಉನ್ನತೀಕರಣಕ್ಕಾಗಿ ತಮಗೆ ತಾವೇ ಯಾದವ ಶಬ್ದವನ್ನು ಆರೋಪಿಸಿಕೊಂಡದ್ದಾಗಿರುತ್ತದೆ.

ಕ್ರಿ. ಶ. ೧೪೩೫ರಿಂದ ೧೪೭೮ರವರೆಗೆ ಚಿತ್ರದುರ್ಗದ ಬೂದಿಹಾಳನ್ನು ರಾಜಧಾನಿಯನ್ನಾಗಿಸಿಕೊಂಡು ಆಳ್ವಿಕೆ ನಡೆಸಿದ ಸಿರುಮಣ ನಾಯಕ ಮೂಲತಃ ಗೊಲ್ಲ ಜಾತಿಗೆ ಸೇರಿದವನು. ಸಿರುಮನೃಪಾಲನಾಗಲೀ, ಅವನ ವಂಶದವರಾಗಲೀ ತಮ್ಮನ್ನು ಯಾದವರೆಂದು ಕರೆದುಕೊಂಡಿರುವುದಿಲ್ಲ.

*"ಹುಲ್ಲು ಮನೆಯ ಕಟ್ಟಿ ಬಾಳ್ವ ಗೊಲ್ಲರು ನಾವು*
*ಗೊಲ್ಲನ ವಂಶಕೆ ಕೊರತೆಯ ತಂದರೆ*
*ಕಲ್ಲುಗಾಣಕೆ ಹಾಕಿಸುವೆ"* (ಮಲ್ಲಕವಿ – ಗೊಲ್ಲ ಸಿರುಮನ ಚರಿತೆ: ಪು–೩೨)

ಎಂಬ ಹೆಗ್ಗಳಿಕೆಯಿಂದ ಬದುಕಿ ಬಾಳಿದವರು. ಈ ಮನೆತನವನ್ನು ಕುರಿತಂತೆ ೧೭ನೇ ಶತಮಾನದಲ್ಲಿ ಮೂರು ಸಾಂಗತ್ಯ ಕಾವ್ಯಗಳು ರೂಪುಗೊಂಡಿವೆ. ಅಲ್ಲಿಯೂ ಸಹ ಯಾವ ಕವಿಯೂ ಇವರನ್ನು ಯದುವಂಶೀಯರೆಂದು ಉಚ್ಚರಿಸಿರುವುದಿಲ್ಲ.

ಇಂದು ಯಾದವ ಪದಬಳಕೆ ಉಚ್ಛ್ರಾಯ ಸ್ಥಿತಿಯಲ್ಲಿರುವ ಉತ್ತರ ಭಾರತದಲ್ಲಿಯೂ ಸಹ ಯಾದವರೆಂದು ಪರಿಗಣಿಸಲ್ಪಟ್ಟಿರುವವರು ಮೂಲತಃ ಯದುವಂಶೀಯ ಯಾದವರಲ್ಲ. ವಾಸ್ತವಿಕವಾಗಿ ಅವರು ಗೋವಳರು. ಪ್ರಾದೇಶಿಕ ಭಿನ್ನತೆಯಲ್ಲಿ ಅವರು 'ಅಹೀರ್', 'ಗೂರ್ಜರ್', 'ಗೋಪಾಲ' ಮುಂತಾಗಿ ಗುರುತಿಸಲ್ಪಟ್ಟಿದ್ದಾರೆ. ಈ ಜನಾಂಗವನ್ನು ಹಿಂದಿ ಭಾಷೆಯಲ್ಲಿ 'ಗ್ವಾಲಾ' ಎಂತಲೂ, ಇವರ ಗೀತೆಗಳನ್ನು 'ಗ್ವಾಲ್‌ಗೀತ್'ಗಳೆಂದೂ ಕರೆಯಲಾಗುತ್ತಿದೆ. ಸುಮಾರು ಮೂರು–ನಾಲ್ಕು ತಲೆಮಾರುಗಳಿಂದೀಚೆಗೆ ಅಹೀರರು ತಮ್ಮನ್ನು ಯಾದವರೆಂದು ಕರೆದುಕೊಳ್ಳಲು ಅನುವಾದರೆಂದು ಹೇಳಲಾಗುತ್ತಿದೆ. ಇದಕ್ಕೆ ಕಾರಣಗಳು ಹೀಗಿವೆ –

೧) ಸಾಮಾಜಿಕವಾಗಿ ಕೆಳಹಂತದಲ್ಲಿದ್ದ ಅಹೀರರು ಕುಲ ಶ್ರೇಷ್ಠತೆಯನ್ನು ಪ್ರತಿಬಿಂಬಿಸಿಕೊಳ್ಳಬೇಕಾಗಿತ್ತು. ಹಾಗಾಗಿ ಶ್ರೀಕೃಷ್ಣನ ಮೇಲ್ಮೆಯ ಹಿನ್ನೆಲೆಯಲ್ಲಿ ತಮ್ಮನ್ನು ಯಾದವರು, ಕ್ಷತ್ರಿಯರು ಎಂದು ಕರೆದುಕೊಂಡು ಜನಿವಾರ ಧರಿಸಿಕೊಂಡು ಜಾತ್ಯುಪಕರ್ಷಕ್ಕೆ ಒಳಗಾಗುವ ಅಪೇಕ್ಷೆ ಇತ್ತು.
೨) ಸ್ಥಳೀಯರಾಗಿ ಪ್ರಬಲ ಭೂಮಾಲೀಕರಾಗಿದ್ದ ಜಾಠರು, ರಜಪೂತರು, ಬಬ್ಬನ್ ಮೊದಲಾದವರ ಖಾಸಗಿ ಸೇನೆಗಳಿಂದ ಗೋವಳರ ಮೇಲೆ ಆಕ್ರಮಣಗಳಾಗುತ್ತಿದ್ದವು. ಇದಕ್ಕೆ ಪ್ರತಿಯಾಗಿ ಗೋವಳರು ಯಾದವ ಶ್ರೇಷ್ಠತೆಯನ್ನು ಎದುರಿಟ್ಟುಕೊಂಡು ಸಾಮಾಜಿಕವಾಗಿ ತಾವು ಪ್ರಬಲ ವರ್ಗವೆಂದು ತೋರಿಸಿಕೊಳ್ಳಬೇಕಾಗಿತ್ತು.
೩) ರಾಜಕೀಯ ಪ್ರಾಬಲ್ಯ ತೋರಿಸಲು ಬೇರೆ ಬೇರೆ ಹೆಸರುಗಳಿಂದ ಗುರುತಿಸಿಕೊಂಡಿದ್ದ ಗೋವಳರನ್ನು ಒಂದುಗೂಡಿಸಲು 'ಯಾದವ ಪ್ರಜ್ಞೆ'ಯನ್ನು ಬೆಳೆಸುವ ಮನೋವಾಂಛೆ.

'ಯಾದವಮಹಾಸಭಾ', 'ಯಾದವಸೇನೆ' ಪ್ರೇರಣೆಯಿಂದಾಗಿ ಉತ್ತರ ಭಾರತದ ಅಹೀರರು ಮುಂದಿನ ಹಂತದಲ್ಲಿ ತಮ್ಮನ್ನು ಯಾದವರೆಂದೇ ನಿಶ್ಚಿತವಾಗಿ ಗುರುತಿಸಿಕೊಳ್ಳಲಾರಂಭಿಸಿದರು. ಈ ಸಕಾರಾತ್ಮಕ ಬೆಳವಣಿಗೆ ದಕ್ಷಿಣ ಭಾರತದ ಗೊಲ್ಲರ ಮೇಲೆ ಪ್ರಭಾವ ಬೀರಿತು. ಸಂಘಟನಾತ್ಮಕ ರಾಜಕೀಯ ಪ್ರಾಬಲ್ಯವನ್ನು ತೋರಿಸಿಕೊಳ್ಳಬೇಕಾಗಿತ್ತು. ಹಾಗಾಗಿ ಊರು ಗೊಲ್ಲರು, ಕಾಡು ಗೊಲ್ಲರು, ಹಂದಿ ಗೊಲ್ಲರು, ಗಂಗೆತ್ತಿನ ಗೊಲ್ಲರು, ಹಾವು ಗೊಲ್ಲರು, ಪೆದ್ದಟ್ಟಿ ಗೊಲ್ಲರು, ಕಂಚಿ ಗೊಲ್ಲರು, ಹಣಬರು ಗೌಳಿಗರು, ಮಣಿಯಾಣಿಗಳು ಮುಂತಾದ ಗೊಲ್ಲರ ಒಳಪ್ರಭೇದಗಳನ್ನು ಮರೆತು ಎಲ್ಲ ಬಗೆಯ ಗೊಲ್ಲರನ್ನು ಒಂದುಗೂಡಿಸುವ ಪ್ರಯತ್ನ ನಡೆಯಿತು. ಅಲ್ಲದೆ ಸಮುದಾಯಕ್ಕೆ ಸಾರ್ವತ್ರಿಕವಾಗಿ 'ಗುರುತಿಸಿಕೊಳ್ಳುವಿಕೆ' ಬೇಕಾಗಿತ್ತು. ಇದರೊಂದಿಗೆ ನಿರ್ದಿಷ್ಟ ಲಾಂಛನದ ಅವಶ್ಯಕತೆ ಇತ್ತು. ಹಾಗಾಗಿ ದಕ್ಷಿಣ ಭಾರತದಲ್ಲೂ ಶ್ರೀಕೃಷ್ಣ–ಕುಲಲಾಂಛನವಾಗಿಯೂ, 'ಯಾದವ'–'ಗುರುತಿಸಿಕೊಳ್ಳುವ' (ಐಡೆಂಟಿಟಿ) ಪದವಾಗಿ ಗೊಲ್ಲರೊಂದಿಗೆ ಬೆಸುಗೆಯಾಯಿತು. ಸಾಮಾಜಿಕ ಉನ್ನತೀಕರಣದ ಅಭೀಪ್ಸೆಯಾಗಿ, ಮೇಲುಚಲನೆಯಾಗಿ ಸಾಗುತ್ತಾ ಬಂದಿತು.

ಗೊಲ್ಲರ ಯಾದವೀಕರಣದ ಫಲಶ್ರುತಿ, ಕಾಲಕ್ರಮೇಣ ಕರ್ನಾಟಕದ ಮೂಲ ನಿವಾಸಿ ಕನ್ನಡ ಬುಡಕಟ್ಟು ಕಾಡುಗೊಲ್ಲರಿಗೆ ವ್ಯತಿರಿಕ್ತವಾಗಿ ಕಂಡುಬಂದಿತು. ಸರ್ಕಾರದ ಮೀಸಲಾತಿ ಸೌಲಭ್ಯಗಳಿಂದ ಹಿನ್ನಡೆ ಪಡೆಯುವಂತಾಯಿತು. ಕರ್ನಾಟಕದ ಮಟ್ಟಿಗೆ 'ಅನುಸೂಚಿತ ಬುಡಕಟ್ಟು' ಪಟ್ಟಿಗೆ ಸೇರ್ಪಡೆಯಾಗಲು ಸಾಮಾಜಿಕ, ಸಾಂಸ್ಕೃತಿಕಾಂಶದ ಎಲ್ಲಾ ಅರ್ಹತೆಗಳು ಇದ್ದಾಗ್ಯೂ ಮೀಸಲಾತಿ ಪ್ರವರ್ಗ–೧ಕ್ಕೆ ತೃಪ್ತಿಪಟ್ಟುಕೊಳ್ಳಬೇಕಾಯಿತು. ಮುಂದಿನ ದಿನಗಳಲ್ಲಿ ಗೊಲ್ಲರಿಗೆ ಪ್ರವರ್ಗ–೧ ಮೀಸಲಾತಿಯೂ ಕೈಬಿಟ್ಟುಹೋದರೆ ಅಚ್ಚರಿಪಡಬೇಕಾಗಿಲ್ಲ ಎಂಬ ಆತಂಕ ಕಾಡುಗೊಲ್ಲರಲ್ಲಿ ಆರಂಭವಾಯಿತು. ಮುಂದೊದಗಲಿರುವ ಈ ಅಪಾಯಕಾರಿ ಸನ್ನಿವೇಶಗಳನ್ನು ಆಲೋಚಿಸಿ ಸಮುದಾಯದ ನಾಯಕರು ಜಾಗೃತರಾದರು. ನಿರ್ದಿಷ್ಟವಾಗಿ ಕಾಡುಗೊಲ್ಲರ ತಳಮಟ್ಟದ ಮೂಲಭೂತ ಅಭಿವೃದ್ಧಿ ಹಾಗೂ ವಿಕಾಸದ ಕನಸು ಕಂಡು ೨೦೦೫ರಲ್ಲಿ ರಾಜ್ಯಮಟ್ಟದ 'ಕಾಡುಗೊಲ್ಲರ ಕ್ಷೇಮಾಭಿವೃದ್ಧಿ ಸಂಘ'ವನ್ನು ಹಾಗೂ ೨೦೧೪ರಲ್ಲಿ 'ಕರ್ನಾಟಕ ರಾಜ್ಯ ಕಾಡುಗೊಲ್ಲ ಯುವಸೇನೆ'ಯನ್ನು ಸ್ಥಾಪಿಸಿಕೊಂಡರು. ಈ ಸಂಘಟನೆಗಳು ಹಾಗೂ ಬುಡಕಟ್ಟಿನ ಪ್ರಜ್ಞಾವಂತ ಹೋರಾಟಗಾರರ ಮತ್ತು ಸಮುದಾಯದ ಹೊರಗಿನ ವಿಚಾರಶೀಲರ ಅವಿರತ ಪರಿಶ್ರಮದಿಂದಾಗಿ ಕಾಡುಗೊಲ್ಲ ಬುಡಕಟ್ಟಿನ ಬಗ್ಗೆ ಕರ್ನಾಟಕ ಸರ್ಕಾರ ಕುಲಶಾಸ್ತ್ರೀಯ ಅಧ್ಯಯನ ನಡೆಸಿ ಬುಡಕಟ್ಟನ್ನು ಕರ್ನಾಟಕ ಜಾತಿ ಪಟ್ಟಿಗೆ ಸೇರಿಸುವುದರೊಂದಿಗೆ ಪರಿಶಿಷ್ಟ ಪಂಗಡಕ್ಕೆ (ಎಸ್.ಟಿ) ಸೇರಿಸಲು ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ. ಕೇಂದ್ರ ಸರ್ಕಾರದ ಅನುಮೋದನೆಗಾಗಿ ಸಮುದಾಯ ಕಾದು ನೋಡುತ್ತಿದೆ.

ಉತ್ತರದ 'ಯಾದವಪ್ರಜ್ಞೆ' ದಕ್ಷಿಣದಲ್ಲಿ ಚಿಗುರೊಡೆದು ಯಾದವೀಕರಣ ಹೆಮ್ಮರವಾಗಿ ಬೆಳೆಯುತ್ತಿರುವ ಈ ಹಂತದಲ್ಲಿ ಕರ್ನಾಟಕದ ಕಾಡುಗೊಲ್ಲ ಬುಡಕಟ್ಟಿನ ಹೊಸತಲೆಮಾರಿನ ಯುವ ಸಮುದಾಯ ಯಾದವೀಕರಣದಿಂದ ಹೊರ ಬಂದು ಬುಡಕಟ್ಟಿನ ಸಾಂಸ್ಕೃತಿಕ ಅನನ್ಯತೆಯ ಉಳಿವಿಗಾಗಿ ಯಾದವ ಪದ ಬಳಕೆಯನ್ನು ಕೈ ಬಿಟ್ಟು ತಮ್ಮತಮ್ಮ ಹೆಸರಿನ ಮುಂದೆ 'ಕಾಡುಗೊಲ್ಲ' ಎಂದು ಪದ ನಾಮೀಕರಿಸಿಕೊಳ್ಳಲಾರಂಭಿಸಿದ್ದಾರೆ. 'ಜೈಯಾದವ' 'ಜೈಮಾಧವ' ಉದ್ಘೋಷಗಳ ಬದಲಾಗಿ ಬುಡಕಟ್ಟು ಪಾರಂಪರಿಕ ಸಾಂಸ್ಕೃತಿಕ ನಾಯಕರಾದ ಯತ್ತಪ್ಪ, ಜುಂಜಪ್ಪ, ಚಿತ್ತಯ್ಯ, ಕಾಟಯ್ಯ, ಪಾತಪ್ಪಕ್ಯಾತಪ್ಪ ಮುಂತಾದವರ ಹೆಸರುಗಳನ್ನು ಹಾಗೂ ಅವರ ಲಾಂಛನಗಳನ್ನು ಉದ್ಘೋಷಗಳಾಗಿ ಬಳಸುವುದರ ಮೂಲಕ ಮತ್ತೊಮ್ಮೆ ಮೂಲ ಕುಲ ಗೌರವದ ಕಡೆಗೆ ಹೆಜ್ಜೆ ಇಡಲಾರಂಭಿಸಿದ್ದಾರೆ. ಇದೊಂದು ಗುಣಾತ್ಮಕ ಬೆಳವಣಿಗೆಯೆಂಬುದು ಸಮುದಾಯದ ಚಿಂತಕರ ಚಾವಡಿಯಲ್ಲಿ ಕೇಳಿಬರುತ್ತಿರುವ ಮನದ ಮಾತಾಗಿದೆ.

ಜಾಗತೀಕರಣದ ಈ ಹೊತ್ತಿನಲ್ಲಿ ಗೊಲ್ಲ ಸಮುದಾಯದ ಎಲ್ಲಾ ಒಳಪಂಗಡಗಳು ತಮ್ಮತಮ್ಮ ಕುಲಸಂಕಥನಗಳ ಸಾಂಸ್ಕೃತಿಕ ಅಸ್ಮಿತೆಯನ್ನು ಕಾಪಿಟ್ಟುಕೊಂಡೇ ರಾಜಕೀಯ ಧ್ರುವೀಕರಣಕ್ಕಾಗಿ, ಸಾಂಘಿಕ ಶಕ್ತಿ ಬಲವರ್ಧನೆಗಾಗಿ 'ಶ್ರೀಕೃಷ್ಣ' ಮತ್ತು 'ಯಾದವ ಪ್ರಜ್ಞೆ'ಯನ್ನು ಸಮಚಿತ್ತದಿಂದ ಸಂಚಲನೆಗೊಳಿಸಿ ಆಂತರಿಕ ಸಹಬಾಳುವೆಯ ಸೂತ್ರಹಿಡಿದಾಗ ಮಾತ್ರ ಐತಿಹಾಸಿಕ ಯಾದವೀಕರಣದ ಯಾನಕ್ಕೆ ಸುಗಮದಾರಿ ಸಿಕ್ಕೀತು.

**ಡಾ॥ ಮಲ್ಲಿಕಾರ್ಜುನ ಕಲಮರಹಳ್ಳಿ**
ಸಂಸ್ಕೃತಿ ಚಿಂತಕರು, ಮಲ್ಲಿಗೆ, ನಂ. ೭೮/೧೩/೧೬೮
ಜಯನಗರ 'ಎ' ಬ್ಲಾಕ್, ನೀರಿನ ಟ್ಯಾಂಕ್ ಹತ್ತಿರ, ದಾವಣಗೆರೆ – ೫೭೭೦೦೪

ರಾಜೀವ್ ಎನ್. ಮಾಗಲ್

# ದೇಶದ ಆರ್ಥಿಕತೆ...



# ‘ಬಂಗಾರ’ದಿಂದ ಸುಭದ್ರತೆ

ಒಬ್ಬ ವ್ಯಕ್ತಿಯ ಬಳಿಯಾಗಲಿ, ಒಂದು ಸಂಸ್ಥೆಯ ಬಳಿಯಾಗಲಿ, ಒಂದು ದೇಶದ ಬಳಿಯಾಗಲಿ ಹಳದಿ ಲೋಹದ ದಾಸ್ತಾನಿದ್ದರೆ ಖರೀದಿಸುವ ಸಾಮರ್ಥ್ಯದ ಬಗ್ಗೆ ದೃಢವಿಶ್ವಾಸ ಮೂಡುವುದು ನಿಶ್ಚಲ. ಸಾವಿರಾರು ವರ್ಷಗಳಿಂದಲೂ, ತಲೆತಲಾಂತರಗಳಿಂದಲೂ ಸಹ ಬಂಗಾರಕ್ಕೆ ಅದರದೇ ಆದ ಶಕ್ತಿ–ಸಾಮರ್ಥ್ಯ ಇರುವುದಕ್ಕೆ ಮೂಲ, ಪ್ರಬಲ ಕಾರಣ ಅದಕ್ಕಿರುವ ಸ್ಥಿರತೆ, ವಿಭಜನೆಗೆ ಸಾಧ್ಯತೆ, ಸಾಗಿಸಲಾಗುವಿಕೆ ಹಾಗೂ ಅದರ ಕೊರತೆ; ಇದೇ ಸಮಯದಲ್ಲಿ ಎದುರಾಗುವ ಒಂದು ಬೃಹತ್ ಅನಾನುಕೂಲತೆ ಅದರ ಸುರಕ್ಷತೆ; ಹೀಗಾಗಿ ಬಹುತೇಕ ಮಂದಿ, ಸಂಸ್ಥೆಗಳು ಬಹುತೇಕ ರಾಷ್ಟ್ರಗಳು ತಮ್ಮ ಕಷ್ಟ ಕಾಲಕ್ಕೆ ಅನುಕೂಲವಾಗಲೆಂದೇ ಲಭ್ಯವಿರುವ ಹಣಕಾಸಿನ ನಿಗದಿತ, ಕೊಂಚ ಭಾಗವನ್ನು ಹಳದಿ ಲೋಹದ ಮೇಲೆ ಬಂಡವಾಳವಾಗಿ ಹೂಡುವ ಪದ್ಧತಿ ರೂಢಿಸಿಕೊಂಡಿದ್ದು, ಈ ಪದ್ಧತಿಯಲ್ಲಿ ಶ್ರೀಮಂತರು ಹಾಗೂ ಶ್ರೀಮಂತ ರಲ್ಲದವರು ಪಾಲುದಾರರಾಗಿದ್ದಾರೆ. ಮುಂಬರುವ ಪೀಳಿಗೆಗಳೂ ಸಹ ಈ ಪದ್ಧತಿಯನ್ನು ಪಾಲಿಸುವ ಸಕಲ ಸಾಧ್ಯತೆಗಳಿವೆ. ಇವೆಲ್ಲ ವಾಸ್ತವಗಳ ನಡುವೆ ಮನದಲ್ಲಿ ಮೂಡುವ ಮತ್ತೊಂದು ಪ್ರಶ್ನೆಯೆಂದರೆ ವೈಯಕ್ತಿಕ ತಕ್ಕುಮೆಯಲ್ಲಿ ಸಂಪಾದನೆಯ ಎಷ್ಟು ಭಾಗವನ್ನು ಬಂಗಾರದಲ್ಲಿ ಹೂಡಬೇಕು ಎಂಬುದು.

ಒಂದು ದೇಶದ ಆರ್ಥಿಕತೆಯನ್ನು ಪ್ರತಿಬಿಂಬಿಸುವ ಬಹು ಮುಖ್ಯವಾದ ಅಂಶಗಳೆಂದರೆ ಆರ್ಥಿಕ ಪ್ರಗತಿಯಲ್ಲಿ ಪಾಲ್ಗೊಳ್ಳುವ ಹಲವಾರು ಇಲಾಖೆಗಳಿಗೆ ಅಥವಾ ಗುಂಪುಗಳಿಗೆ ಇರುವ ಹಣಕಾಸಿನ ಸಾಮರ್ಥ್ಯ, ದೇಶದ ನಾಗರಿಕರಿಗೆ ಇರುವ ಹಣ ಖರ್ಚುಮಾಡುವ ಶಕ್ತಿ, ಉದ್ಯಮ ಗಳಲ್ಲಿ ತೊಡಗಿಸಬಹುದಾದ ಬಂಡವಾಳ, ಆಡಳಿತ ದಲ್ಲಿರುವ ಸರ್ಕಾರ ವಿವಿಧ – ವಿಭಿನ್ನ ಅಭಿವೃದ್ಧಿ ಯೋಜನೆಗಳಲ್ಲಿ, ನಾಗರಿಕ ಸೇವಾ ಯೋಜನೆಗಳಲ್ಲಿ ತೊಡಗಿಸುವ ಹಣಕಾಸಿನ ಪ್ರಮಾಣ ಹಾಗೂ ಬಹುಮುಖ್ಯವಾಗಿ ದೇಶದ ನಿವ್ವಳ ರಫ್ತು. ಅಂದರೆ ರಫ್ತು ಹಾಗೂ ಆಮದಿನಲ್ಲಿರುವ ವ್ಯತ್ಯಾಸ, ಶೇಷ. ಈ ಎಲ್ಲ ಅಂಶಗಳು ಸಮತೋಲನದಲ್ಲಿದ್ದಾಗ ಮಾತ್ರ ದೇಶ ಆರ್ಥಿಕವಾಗಿ ಪ್ರಗತಿಯಲ್ಲಿದೆ, ದೇಶದ ಆರ್ಥಿಕತೆ ಆರೋಗ್ಯಕರವಾಗಿದೆ ಎನ್ನಬಹುದು.

ಜಾಗತಿಕ ಮಟ್ಟದಲ್ಲಿ, ಆರ್ಥಿಕತೆಯ ವಿಚಾರದಲ್ಲಿ ಮಹತ್ತರವಾದ ಅಂಶವೆಂದರೆ ಯಾವುದೇ ದೇಶದಲ್ಲಿ ಚಾಲ್ತಿಯಲ್ಲಿರುವ, ವಿಧ–ವಿಧವಾದ ವಹಿವಾಟುಗಳಲ್ಲಿ ಬಳಸುವ ಹಣಕಾಸಿನ ನೋಟುಗಳಿಗಿರುವ ಬೆಲೆ; ಈ ನೋಟುಗಳಿಗೆ ನ್ಯಾಯಸಮ್ಮತವಾದ ಬೆಲೆ ಸಿಗುವುದೇ ದೇಶದಲ್ಲಿ ಲಭ್ಯವಿರುವ ಬಂಗಾರದ (ಹಳದಿ ಲೋಹ) ದಾಸ್ತಾನಿನ ಪ್ರಮಾಣದ ಅನುಗುಣವಾಗಿ ಮಾತ್ರ. ಅಂದರೆ, ಸಂಕ್ಷಿಪ್ತವಾಗಿ ಹೇಳಬೇಕೆಂದರೆ ದೇಶದ ಬಂಗಾರದ ದಾಸ್ತಾನು ಹೆಚ್ಚಿದಂತೆಲ್ಲ ಆ ದೇಶದ ನೋಟುಗಳಿಗೆ ಬೆಲೆ ಅಧಿಕವಾಗುತ್ತ ಹೋಗುತ್ತೆ. ಈ ಕಾರಣಕ್ಕೇ ಜಗತ್ತಿನಾದ್ಯಂತ ಅಮೆರಿಕದ ಡಾಲರ್ ಅತೀ ಹೆಚ್ಚು ಬೆಲೆಯುಳ್ಳದ್ದಾಗಿದೆ. ಮಾರ್ಚ್ ೨೦೧೯ರ ಅಂಕಿ–ಅಂಶಗಳ ಪ್ರಕಾರ ಜಗತ್ತಿನಲ್ಲಿಯೇ ಮೊದಲ ಸ್ಥಾನದಲ್ಲಿರುವ ಅಮೆರಿಕದ ಬಂಗಾರದ ದಾಸ್ತಾನು ೮೧೩೪ ಟನ್‌ಗಳು, ಎರಡನೆಯ ಸ್ಥಾನದಲ್ಲಿ ಜರ್ಮನಿ (೩೩೭೯ ಟನ್) ಹಾಗೂ ಹತ್ತನೆಯ ಸ್ಥಾನದಲ್ಲಿರುವ ಭಾರತದಲ್ಲಿನ ದಾಸ್ತಾನು ೬೦೮ ಟನ್‌ಗಳು. ಈ ವಿಚಾರದಲ್ಲಿ ಜಾಗತಿಕವಾಗಿ ವ್ಯಾಪಾರ–ವಹಿವಾಟಿನಲ್ಲಿ ಸತತವಾಗಿ ಸುದ್ದಿಯಲ್ಲಿ ಇರುವ, ಮಿಕ್ಕೆಲ್ಲ ದೇಶಗಳನ್ನು ಹಿಂದಿಕ್ಕುವ ಪ್ರಯತ್ನದಲ್ಲಿರುವ ಚೀನ ಕೂಡ ಜಗತ್ತಿನ ದೊಡ್ಡಣ್ಣ ಎನಿಸಿಕೊಂಡಿರುವ ಅಮೆರಿಕದ ಹಣಕಾಸಿನ ಸಾಮರ್ಥ್ಯಕ್ಕೆ, ಬಂಗಾರದ ದಾಸ್ತಾನಿಗೆ ಹೋಲಿಸಿದರೆ, ಆರನೇ ಸ್ಥಾನದಲ್ಲಿದ್ದು, ಚೀನಾ ದೇಶದ ಬಂಗಾರದ ದಾಸ್ತಾನು ಕೇವಲ ೧೮೬೪ ಟನ್ ಮಾತ್ರ, ಅಂದರೆ ಅಮೆರಿಕದ ಕಾಲು ಭಾಗದಷ್ಟು ಮಾತ್ರ. ಈ ವಾಸ್ತವಿಕ ಕಾರಣದಿಂದಲೇ ಜಾಗತಿಕ ಮಟ್ಟದಲ್ಲಿ ಕಚ್ಚಾ ತೈಲ ಹಾಗೂ ಇತರೆ ಅನೇಕ ಪದಾರ್ಥಗಳ ಬೆಲೆ ನಿಗದಿಯಾಗುವುದು ಅಮೆರಿಕದ ಡಾಲರ್ ಬೆಲೆಯ ಆಧಾರದಡಿಯಲ್ಲಿಯೇ! ಇದೇ ಮೂಲ ಕಾರಣಕ್ಕೆ ಆರ್ಥಿಕವಾಗಿ ಸುಭದ್ರವಾಗುತ್ತಿರುವ ಬಹುತೇಕ ರಾಷ್ಟ್ರಗಳು ತಮ್ಮ–ತಮ್ಮ ನೋಟುಗಳ ಮೌಲ್ಯವರ್ಧನೆಯ ಬಗ್ಗೆ ಗಮನ ಹರಿಸುತ್ತಿದ್ದು, ಸಾಧ್ಯವಾದಷ್ಟು ಮಟ್ಟಿಗೆ ಬಂಗಾರದ ದಾಸ್ತಾನನ್ನು ವೃದ್ಧಿಗೊಳಿಸುವ ತವಕದಲ್ಲಿವೆಯಾದರೂ ಈ ಪ್ರಕ್ರಿಯೆಯಿಂದ ದೇಶದಲ್ಲಿ ಯಾವುದೇ ರೀತಿಯ ಆಂತರಿಕ ಆರ್ಥಿಕ ಸಮಸ್ಯೆ ಎದುರಾಗದಂತೆ ಬಂಗಾರದ ಆಮದಿನತ್ತ ಗಮನ ಹರಿಸುವುದು ಮುಖ್ಯವಾದ ಸಂಗತಿ ಎಂದೇ ಹೇಳಬಹುದು. ಇದನ್ನೇ ನಮ್ಮ ಹಿರಿಯರು ಮಾರ್ಮಿಕವಾಗಿ ಹೇಳಿರುವುದು – “ಸಾಲ ಮಾಡಿ ತುಪ್ಪ ತಿನ್ನುವುದು ಬೇಡ’ ಎಂದು! ಈ ಪ್ರಕ್ರಿಯೆಯಲ್ಲಿ ಚೀನ ದೇಶ ಕೂಡ ಸತತವಾಗಿ ಪ್ರಯತ್ನಿಸುತ್ತಿದೆಯಾದರೂ ಅಮೆರಿಕದ

ಪ್ರಾಬಲ್ಯಕ್ಕೆ ಸವಾಲು ಹಾಕಲಾಗುತ್ತಿಲ್ಲ ಎಂಬುದು ಅಂಕಿ-ಅಂಶಗಳಿಂದ ಸಾಬೀತಾಗುವ ವಾಸ್ತವ. ಜಾಗತಿಕ ಮಟ್ಟದಲ್ಲಿ ಯಾವುದೇ ಒಂದು ದೇಶಕ್ಕೆ ಹಣಕಾಸಿನ ಸೌಲಭ್ಯ, ಸವಲತ್ತು, ಸಾಲ ಸೌಕರ್ಯ ದಕ್ಕಲು ಆ ದೇಶದ ಆರ್ಥಿಕ ಸುಭದ್ರತೆಯೇ ಕಾರಣವಾಗುತ್ತೆ ಎಂಬುದು ಅತ್ಯಂತ ಮಹತ್ವದ ಸಂಗತಿ. ಸರಳವಾಗಿ ವಿವರಿಸಬೇಕೆಂದರೆ ಯಾವುದೇ ವ್ಯಕ್ತಿ ಅಥವಾ ಸಂಸ್ಥೆ ಸಾಲದ ರೂಪದಲ್ಲಿ ಹಣಕಾಸಿನ ನೆರವು ಕೋರಿದರೆ ನಿರ್ಧಾರವಾಗುವುದು ಆ ಸಂಸ್ಥೆಯ ಅಥವಾ ವ್ಯಕ್ತಿಯ ಬಳಿ ಇರುವ ಒಟ್ಟು ಆಸ್ತಿಯ ಮೌಲ್ಯದ ಆಧಾರದಡಿ.

೮೦ ಹಾಗೂ ೯೦ರ ದಶಕದಲ್ಲಿ ಭಾರತ ಎದುರಿಸಿದ ಘೋರ ಹಣಕಾಸಿನ ಬಿಕ್ಕಟ್ಟಿನ ಸಮಯದಲ್ಲಿ, ದೇಶದಲ್ಲಿ ಲಭ್ಯವಿದ್ದ ಕೇವಲ ೪೭ ಟನ್ ಹಳದಿ ಲೋಹವನ್ನು 'ಬ್ಯಾಂಕ್ ಆಫ್ ಇಂಗ್ಲೆಂಡ್' ಬಳಿ ಒತ್ತೆ ಇಟ್ಟು ಸಾಲ ಪಡೆಯುವ ಆಲೋಚನೆ ಮಾಡಿದರೂ ಸಹ ಬೆಲೆಬಾಳುವ ಲೋಹವನ್ನು ಹೊರದೇಶಕ್ಕೆ ಸುರಕ್ಷಿತವಾಗಿ ಸಾಗಿಸುವುದೇ ಅತೀ ದೊಡ್ಡ ಸವಾಲಾಗಿ ಪರಿಣಮಿಸಿತ್ತು. ಆದರೂ ಅನಿವಾರ್ಯವಾಗಿ, ದೇಶದ ಹಣಕಾಸಿನ ದುಃಸ್ಥಿತಿಯನ್ನು ಸರಿದೂಗಿಸಲು ಇದ್ದ ಏಕೈಕ ಮಾರ್ಗ ತನ್ನ ತಿಜೋರಿಯಲ್ಲಿದ್ದ ಬಂಗಾರವನ್ನು ಇಂಗ್ಲೆಂಡ್ ದೇಶಕ್ಕೆ ಸಾಗಿಸಿ ೪೦೫ ಮಿಲಿಯನ್ ಡಾಲರ್‌ಗಳ ಮೊತ್ತದ ಸಾಲ ಪಡೆಯುವುದು, ದೇಶವನ್ನು ಆರ್ಥಿಕ ದಿವಾಳಿಯಿಂದ ಪಾರುಮಾಡುವುದು!

೨೦೧೬ನೇ ಇಸವಿಯಿಂದಲೂ ಹಳದಿ ಲೋಹವನ್ನು ಖರೀದಿಸುವವರ ಸಂಖ್ಯೆಯಲ್ಲಿ ಕೊಂಚ ಇಳಿಮುಖವಾದ ಕಾರಣಕ್ಕೆ, ಕುಸಿದ ಬೇಡಿಕೆಯ ಹಿನ್ನೆಲೆಯಲ್ಲಿ, ಜಾಗತಿಕ ಮಟ್ಟದಲ್ಲಿನ ಬೆಲೆ ಹೆಚ್ಚು ಏರಿಳಿತ ಕಂಡಿಲ್ಲ. ಈ ಬದಲಾವಣೆಗೆ ಸಾಂಸ್ಕೃತಿಕ, ಸಾಮಾಜಿಕ ಹಾಗೂ ಆರ್ಥಿಕ ಕಾರಣಗಳೂ ಸೇರಿದಂತೆ ಹಲವಾರು ಸಮರ್ಥನೆ ಗಳಿರಬಹುದು! ೨೦೧೮ ಇಸವಿ ಒಂದರಲ್ಲಿಯೇ ಜಗತ್ತಿನ ಹಲವಾರು ದೇಶದ ಕೇಂದ್ರ ಹಣಕಾಸು ಸಂಸ್ಥೆಗಳು ಒಟ್ಟು ೬೮೭ ಟನ್ ಬಂಗಾರವನ್ನು ಖರೀದಿಸಿವೆ ಹಾಗೂ ೨೦೧೭ರಿಂದ ಭಾರತ ಕೂಡ ಬಂಗಾರದ ಖರೀದಿಯನ್ನು ಕ್ರಮೇಣವಾಗಿ ಹೆಚ್ಚಿಸುವಲ್ಲಿ ಮುಂದಾಗಿದೆ. ಹಣಕಾಸಿನ ವಿಚಾರದಲ್ಲಿ ಅಮೆರಿಕದ ಡಾಲರ್ ಮೇಲಿನ ಅವಲಂಬನೆಯನ್ನು ಕಡಿಮೆಗೊಳಿಸುವ ದೇಶಗಳು ಬಂಗಾರದ ದಾಸ್ತಾನಿಗೆ ಹೆಚ್ಚು ಒತ್ತು ನೀಡುವಲ್ಲಿ ಮುಂದಾಗಿರುವ ಸನ್ನಿವೇಶ ಬಲವಾಗುತ್ತಿದೆ. ವಿದೇಶಿ ವಿನಿಮಯದ ಹೂಡಿಕೆಯನ್ನು ಬಲಪಡಿಸುವಲ್ಲಿ ಪ್ರಯತ್ನಿಸುತ್ತಿದ್ದು, ಉಕ್ರೇನ್ ವಿಚಾರದಲ್ಲಿ ಅಮೆರಿಕದೊಟ್ಟಿಗಿನ ಬಾಂಧವ್ಯಕ್ಕೆ ಧಕ್ಕೆಯಾಗಿರುವ ಹಿನ್ನೆಲೆಯಲ್ಲಿ, ರಷ್ಯಾ ದೇಶ ಹಳದಿ ಲೋಹದ ದಾಸ್ತಾನಿನಲ್ಲಿ ಮುಂಚೂಣಿಯಲ್ಲಿದೆ ಹಾಗೂ ಟರ್ಕಿಯಂತಹ (ಒಟ್ಟು ದಾಸ್ತಾನು ೨೬೧ ಟನ್) ಪುಟ್ಟ ರಾಷ್ಟ್ರ ಕೂಡ ಈ ಪ್ರಕ್ರಿಯೆಯಲ್ಲಿ ಎಚ್ಚರ ವಹಿಸುತ್ತಿದ್ದು ಬಂಗಾರದ ಸತತ ದಾಸ್ತಾನಿನತ್ತ ಗಮನ ಹರಿಸುತ್ತಿದೆ ಹಾಗೂ ಅಮೆರಿಕದ ಸರ್ಕಾರಿ ಸಾಧನೆಗಳಲ್ಲಿ ತಮ್ಮ ಬಂಡವಾಳದ ಹೂಡಿಕೆಯನ್ನು ಕಡಿಮೆಗೊಳಿಸುತ್ತಿದ್ದು, ಜಗತ್ತಿನ ಹಲವಾರು ದೇಶಗಳು ಅಮೆರಿಕಕ್ಕೆ ಸವಾಲೊಡ್ಡುವ ತವಕದಲ್ಲಿವೆ ಎಂದೇ ಅರ್ಥ. ರಷ್ಯಾ ದೇಶದ ಒಟ್ಟು ವಿದೇಶಿ ಬಂಡವಾಳದ ಐದನೇ ಒಂದು ಭಾಗ 'ಹಳದಿಲೋಹ' ಎಂದರೆ ಅಚ್ಚರಿಯಾಗಬಹುದು.

ಇಂಗ್ಲಿಷನ್ನು ಅದ್ಭುತವಾಗಿ ಮಾತನಾಡ ಬಲ್ಲ ಕಾರ್ನಾಡರು ಬರೆಯಲು ಕನ್ನಡ ವನ್ನೇ ಆಯ್ದುಕೊಂಡರು ಎಂಬುದು ಬಹಳ ಮುಖ್ಯ.

*– ಗೀತಾ ಹರಿಹರನ್, ಲೇಖಕಿ*

ತುಘಲಕ್ ನಾಟಕವು ಭಾರತೀಯ ರಂಗಭೂಮಿಯ ಶಾಶ್ವತ ನಾಟಕಗಳಲ್ಲಿ ಒಂದು.

*– ಜನನಾಟ್ಯ ಮಂಚ್*

ಈ ಪ್ರಕ್ರಿಯೆಯಲ್ಲಿ ಭಾರತೀಯ ಕೇಂದ್ರ ಹಣಕಾಸು ಸಂಸ್ಥೆ (ಆರ್. ಬಿ.ಐ.) ಕೂಡ ಹಿಂದೆ ಬೀಳದೆ (೨೦೦೯ರಲ್ಲಿ ಭಾರತ ಐ.ಎಮ್.ಎಫ್. ನಿಂದ ೨೦೦ ಟನ್ ಹಳದಿ ಲೋಹವನ್ನು ಖರೀದಿ ಮಾಡಿದ್ದನ್ನು ನೆನಪಿಸಿಕೊಳ್ಳಬಹುದು) ೨೦೧೮ರ ಮಾರ್ಚ್ ತಿಂಗಳಿನಿಂದ ಇದುವರೆಗೂ ಪ್ರತೀಮಾಸಿಕ ೪.೨೦ ಟನ್‌ಗಳಷ್ಟು ಬಂಗಾರವನ್ನು ಸತತವಾಗಿ ಆಮದು ಮಾಡುತ್ತಲೇ ಬಂದಿದ್ದು ಪ್ರಸ್ತುತ ದಾಸ್ತಾನು ೬೦೮ ಟನ್ ಮುಟ್ಟಿದೆ. ಇತ್ತೀಚಿನ ದಿನಗಳಲ್ಲಿ ಅಮೆರಿಕ ಹಾಗೂ ಚೀನಾ ದೇಶಗಳ ನಡುವಿನ ವ್ಯಾಪಾರ-ವಹಿವಾಟಿನ ವಿಚಾರದಲ್ಲಿನ ಮುಗ್ಗಟ್ಟು, ಇತರೆ ದೇಶಗಳೊಟ್ಟಿಗೆ ಅಮೆರಿಕದ ಪದೇ-ಪದೇ ಬದಲಾಯಿಸುತ್ತಿರುವ ರಾಜ್ಯನೀತಿ ಯಲ್ಲಿನ ನಿರ್ಧಾರಗಳು, ಅಮೆರಿಕದಲ್ಲಿ ತಲೆದೋರಿರುವ ಹಣಕಾಸಿನ ಆಂತರಿಕ ಬಿಕ್ಕಟ್ಟು ಹಾಗೂ ಈ ಸಮಸ್ಯೆಯನ್ನು ಸರಿದೂಗಿಸಲು ಹೆಚ್ಚೆಚ್ಚು ಮುದ್ರಣವಾಗುತ್ತಿರುವ ಡಾಲರ್ ನೋಟುಗಳಿಂದ ಡಾಲರ್ ತನ್ನ ಮೌಲ್ಯವನ್ನು ಕಳೆದುಕೊಳ್ಳುತ್ತಿರುವುದು ಆತಂಕಕಾರಿಯಾಗಿದ್ದರೂ ಸಹ ಅಮೆರಿಕದಲ್ಲಿರುವ ಹಳದಿ ಲೋಹದ ಬೃಹತ್ ದಾಸ್ತಾನಿನ (೮೧೩೩ ಟನ್) ಕಾರಣಕ್ಕೆ ಇಂದಿಗೂ ಸಹ ಅಮೆರಿಕದ ಡಾಲರ್ ಜಗತ್ತಿನಲ್ಲಿಯೇ ಬಲಶಾಲಿಯಾಗಿದೆ. ಸಂಯುಕ್ತ ಐರೋಪ್ಯ ಒಕ್ಕೂಟದ 'ಯೂರೋ' ಸಹ ಕೆಲವು ಆಂತರಿಕ ಬಿಕ್ಕಟ್ಟುಗಳ ಹಿನ್ನೆಲೆಯಲ್ಲಿ ಅಮೆರಿಕದ ಡಾಲರ್‌ಗೆ ಸವಾಲೆಸೆಯಲು ಸಾಧ್ಯವಾಗುತ್ತಿಲ್ಲ.

ಒಟ್ಟಿನಲ್ಲಿ, ಒಂದು ವ್ಯಕ್ತಿಯ ಬಳಿಯಾಗಲಿ, ಒಂದು ಸಂಸ್ಥೆಯ ಬಳಿಯಾಗಲಿ, ಒಂದು ದೇಶದ ಬಳಿಯಾಗಲಿ ಹಳದಿ ಲೋಹದ ದಾಸ್ತಾನಿದ್ದರೆ ಖರೀದಿಸುವ ಸಾಮರ್ಥ್ಯದ ಬಗ್ಗೆ ದೃಢವಿಶ್ವಾಸ ಮೂಡುವುದು ನಿಶ್ಚಲ. ಸಾವಿರಾರು ವರ್ಷ ಗಳಿಂದಲೂ, ತಲೆತಲಾಂತರಗಳಿಂದಲೂ ಸಹ ಬಂಗಾರಕ್ಕೆ ಅದರದೇ ಆದ ಶಕ್ತಿ-ಸಾಮರ್ಥ್ಯ ಇರುವುದಕ್ಕೆ ಮೂಲ ಪ್ರಬಲ ಕಾರಣ ಅದಕ್ಕಿರುವ ಸ್ಥಿರತೆ, ವಿಭಜನೆಗೆ ಸಾಧ್ಯತೆ, ಸಾಗಿಸಲಾಗುವಿಕೆ ಹಾಗೂ ಅದರ ಕೊರತೆ; ಇದೇ ಸಮಯದಲ್ಲಿ ಎದುರಾಗುವ ಒಂದು ಬೃಹತ್ ಅನಾನುಕೂಲತೆ ಯೊಂದರ ಅದರ ಸುರಕ್ಷತೆ. ಹೀಗಾಗಿ ಬಹುತೇಕ ಮಂದಿ, ಸಂಸ್ಥೆಗಳು ಬಹುತೇಕ ರಾಷ್ಟ್ರಗಳು ತಮ್ಮ ಕಷ್ಟ ಕಾಲಕ್ಕೆ ಅನುಕೂಲವಾಗಲೆಂದೇ ಲಭ್ಯವಿರುವ ಹಣಕಾಸಿನ ನಿಗದಿತ, ಕೊಂಚ ಭಾಗವನ್ನು ಹಳದಿ ಲೋಹದ ಮೇಲೆ ಬಂಡವಾಳ ರೂಪದಲ್ಲಿ ಹೂಡುವ ಪದ್ಧತಿ ರೂಢಿಸಿಕೊಂಡಿದ್ದು, ಈ ಪದ್ಧತಿಯಲ್ಲಿ ಶ್ರೀಮಂತರು ಹಾಗೂ ಶ್ರೀಮಂತರಲ್ಲದವರು ಪಾಲುದಾರರಾಗಿದ್ದಾರೆ. ಮುಂಬರುವ ಪೀಳಿಗೆಗಳೂ ಸಹ ಈ ಪದ್ಧತಿಯನ್ನು ಪಾಲಿಸುವ ಸಕಲ ಸಾಧ್ಯತೆಗಳಿವೆ. ಇವೆಲ್ಲ ವಾಸ್ತವಗಳ ನಡುವೆ ಮನದಲ್ಲಿ ಮೂಡುವ ಮತ್ತೊಂದು ಪ್ರಶ್ನೆ ಎಂದರೆ ವೈಯಕ್ತಿಕ ತಕ್ಕುಮೆಯಲ್ಲಿ ಸಂಪಾದನೆಯ ಎಷ್ಟು ಭಾಗವನ್ನು ಬಂಗಾರದಲ್ಲಿ ಹೂಡಬೇಕು ಎನ್ನುವುದು... ಕಾರಣ ಆಪತ್ಕಾಲಕ್ಕೆ ನೆರವಾಗುವ ಹಳದಿ ಲೋಹ ತಿಜೋರಿಯಲ್ಲಿ ಭದ್ರವಾಗಿರುವ ದಿನಗಳಲ್ಲಿ ಅದರಿಂದ ಯಾವುದೇ ರೀತಿಯ ಆದಾಯ ಗಳಿಸಲು ಸಾಧ್ಯವಿರದು, ಹೊರತಾಗಿ ಅದರ ರಕ್ಷಣೆ ಒಂದು ಜವಾಬ್ದಾರಿಯಾಗುತ್ತೆ, ಆರ್ಥಿಕ ಹೊರೆ ಯಾಗುತ್ತದೆ. ಹಾಗಾಗಿ ಅದು ಒಂದು ಮಾದರಿಯಲ್ಲಿ ವ್ಯರ್ಥ ಬಂಡವಾಳವೇ ಸರಿ! ಹಳದಿ ಲೋಹದ ಮೌಲ್ಯವರ್ಧನೆಯ ವಿಚಾರದಲ್ಲಿ ಪ್ರಸ್ತುತ ಜಾಗತಿಕ ಪರಿಸ್ಥಿತಿಯನ್ನು ಗಮನಿಸಿದರೆ ಆವರ್ತಕಾಲದಲ್ಲಿ ಬಂಗಾರದ ಬೆಲೆ ಅಷ್ಟಾಗಿ ಏರಿಕೆಯಾಗುವಂತೆ ಕಾಣುತ್ತಿಲ್ಲವಾದ ಕಾರಣ ಬಂಗಾರ ಒಂದರ ಮೇಲೆಯೇ ಅತೀ ಹೆಚ್ಚಿನ ಹೂಡಿಕೆ ಲಾಭದಾಯಕ ವಾಗದು ಎಂಬುದು ಆರ್ಥಿಕ ತಜ್ಞರ ವಾದ, ವಿಶ್ಲೇಷಣೆ.

**ರಾಜೀವ್ ಎನ್. ಮಾಗಲ್**
ಶ್ರೀ ಸಾಯಿ ಸಿರಿ ಎಸ್ಟೇಟ್, ಅಂ. ಪೆ. ಸಂ. : ೬೩
ಸಕಲೇಶಪುರ – ೫೭೩ ೧೩೪, ಹಾಸನ ಜಿಲ್ಲೆ



ಡಾ॥ ಕೆ. ಎಸ್. ಪವಿತ್ರ

# ಐರ್ಲೆಂಡಿನ 'ಗರ್ಭಪಾತ'ಗಳ ಕಥೆ–ವ್ಯಥೆ



ಪ್ಯಾರಿಸ್‌ನಲ್ಲಿ ವಿಶ್ವ ಮಹಿಳಾ ಮಾನಸಿಕ ಆರೋಗ್ಯ ಸಮ್ಮೇಳನದಲ್ಲಿ ಕುಳಿತಿದ್ದೆ. ಹಿರಿಯ ಐರಿಷ್ ಮನೋವೈದ್ಯೆ ವೆರೋನಿಕಾ ಓ ಕೀನ್‌ರಿಂದ ಎರಡು ವರ್ಷಗಳ ಹಿಂದೆ ಡಬ್ಲಿನ್‌ನಲ್ಲಿ ಇದೇ ಸಮ್ಮೇಳನ ನಡೆದಾಗ ನಾವೆಲ್ಲಾ ಮಹಿಳಾ ಮನೋವೈದ್ಯೆಯರು ಸೇರಿ ಘೋಷಿಸಿದ 'ಡಬ್ಲಿನ್ ಡಿಕ್ಲರೇಷನ್' ಬಗೆಗೆ ಉಪನ್ಯಾಸ ನಡೆಯುತ್ತಿತ್ತು. ಐರ್ಲೆಂಡ್ ಎಂದ ತಕ್ಷಣ ನಮ್ಮೆಲ್ಲರ ಕಣ್ಣ ಮುಂದೆ ನಿಲ್ಲುವ ಚಿತ್ರ ಬೆಳಗಾವಿಯ ದಂತವೈದ್ಯೆ ತಾಯಿಯಾಗುವಾಗ ಗರ್ಭಪಾತ ಮಾಡಿಸಿಕೊಳ್ಳುವ ಅವಕಾಶವಿರದೆ ಮರಣಿಸಿದ 'ಸವಿತಾ ಹಾಲಪ್ಪನವರ್' ಎಂಬ ಸುಂದರ ಯುವತಿಯ ಮುಖ!

'ಗರ್ಭಪಾತ' ಎಂಬ ಮಗುವನ್ನು ಕಳೆದು ಕೊಳ್ಳುವ ಪ್ರಕ್ರಿಯೆ ದೈಹಿಕವಾಗಿ–ಭಾವನಾತ್ಮಕವಾಗಿ ಹೇಗೆ ಸುಲಭದ್ದಲ್ಲವೋ ಹಾಗೆಯೇ ಕಾನೂನುಬದ್ಧ ವಾಗಿಯೂ ಅಲ್ಲ. ಇತಿಹಾಸದಲ್ಲಿ 'ಗರ್ಭಪಾತ'ದ ವಿಷಯಕ್ಕೆ ಧಾರ್ಮಿಕ–ನೈತಿಕ–ರಾಜಕೀಯ ಆಯಾಮ ಗಳಿರುವ ಸಂಗತಿ ಸ್ಪಷ್ಟವಾಗಿ ಕಾಣುತ್ತದೆ.

ಬೇಡದ ಗರ್ಭವನ್ನು ಕಳೆದುಕೊಳ್ಳಲು ಅಥವಾ ಗರ್ಭಪಾತದಿಂದ ಮಾತ್ರ ತಾಯಿಯ ಜೀವವನ್ನು ಉಳಿಸಲು ಸಾಧ್ಯ ಎಂಬಂತಹ ಸಂದರ್ಭಗಳಲ್ಲಿ ಗರ್ಭಪಾತ ನಡೆಯುತ್ತಿದ್ದದ್ದು ಹಿಂದಿನಿಂದಲೂ ಕಂಡುಬರುತ್ತದೆ. ಹಾಗಾಗಿ ಯಾವುದೇ ಧರ್ಮ ಏನೇ ಹೇಳಲಿ, ಯಾವ ಕಾನೂನೇ ಇರಲಿ, ಗರ್ಭಪಾತ ನಿಷೇಧ ಕಾನೂನುಗಳು ಹೆಚ್ಚಿನ ದೇಶಗಳಲ್ಲಿ ಯಶಸ್ವಿಯಾಗಲೇ ಇಲ್ಲ. ವಿಶ್ವ ಆರೋಗ್ಯ ಸಂಸ್ಥೆಯ ವರದಿಯೊಂದರ ಪ್ರಕಾರ ಗರ್ಭಪಾತ ನಿಷೇಧವಿದ್ದ ದೇಶಗಳಿಗೂ, ಗರ್ಭಪಾತ ನಿಷೇಧವಿರದಿದ್ದ ದೇಶಗಳಿಗೂ ಗರ್ಭಪಾತದ ಸಂಖ್ಯೆಯಲ್ಲಿ ಯಾವುದೇ ವ್ಯತ್ಯಾಸವಿರಲಿಲ್ಲ. ಕಾನೂನಿಗೆ ಹೆದರಿ ಅಸುರಕ್ಷಿತ ವಿಧಾನಗಳಿಂದ, ಗೋಪ್ಯವಾಗಿ ನಡೆಯುವ ಗರ್ಭಪಾತ ಮಾತೃಮರಣದ ಮೂರನೇ ಅತಿ ದೊಡ್ಡ ಕಾರಣ ಎಂಬುದು ಈಗಲೂ ನಿಜವೇ. ಇಂಥ ಅಂಶಗಳನ್ನು ಮನಗಂಡೇ ೧೯೬೦ರಷ್ಟು ಹಿಂದೆಯೇ ಬಹಳಷ್ಟು ರಾಷ್ಟ್ರಗಳು 'ಗರ್ಭಪಾತ'ವನ್ನು, ಅಂದರೆ ಗರ್ಭಧಾರಣೆ ೨೦ ವಾರಗಳನ್ನು ತಲುಪುವವರೆಗೆ, ಕೆಲವೊಂದು ಅಪರೂಪದ ಸಂದರ್ಭಗಳಲ್ಲಿ, ನಂತರವೂ 'ಕಾನೂನುಬದ್ಧ'ವಾಗಿ ಮಾಡಿದವು. ತಾಯಿಯ ದೈಹಿಕ–ಮಾನಸಿಕ ಆರೋಗ್ಯಕ್ಕೆ ಗಂಭೀರ ಅಪಾಯವಿದ್ದಾಗ, ಮಗುವಿಗೆ ಅಂಗವೈಕಲ್ಯ ಇರಬಹುದೆಂಬ ಅಪಾಯವಿದ್ದಾಗ, ಗರ್ಭಧಾರಣೆ ಅತ್ಯಾಚಾರದ ಫಲವಾಗಿ ನಡೆದಿದ್ದರೆ, ಗರ್ಭನಿರೋಧಕಗಳ ವೈಫಲ್ಯದಿಂದ ಬಸಿರು ಉಂಟಾಗಿದ್ದರೆ ಅಂಥ ಸಂದರ್ಭಗಳಲ್ಲಿ ಗರ್ಭಪಾತ ಮಾಡಿಸಿಕೊಳ್ಳುವ ಹಕ್ಕನ್ನು ಈ ದೇಶಗಳು ನೀಡಿದವು. ಭಾರತವೂ ೧೯೭೧ರಷ್ಟು ಹಿಂದೆಯೇ "ದ ಮೆಡಿಕಲ್ ಟರ್ಮಿನೇಷನ್ ಆಫ್ ಪ್ರೆಗ್ನೆನ್ಸಿ ಆ್ಯಕ್ಟ್" ಎಂಬ ಕಾನೂನನ್ನು ಅಂಗೀಕರಿಸಿತು.

ಈಗ ಐರ್ಲೆಂಡಿನ ಕಥೆಗೆ ಬರೋಣ. ಯೂರೋಪ್‌ನ ಹೆಚ್ಚಿನ ದೇಶಗಳಂತೆ 'ಅಫೆನ್‌ಸಸ್ ಎಗೈನ್‌ಸ್ಟ್ ದ ಪರ್ಸನ್ ಆ್ಯಕ್ಟ್ ೧೮೬೧' ಎಂಬ ಕಾನೂನಿನಿಂದ ಯಾವುದೇ ಸಂದರ್ಭದಲ್ಲಿಯೂ ಗರ್ಭಪಾತಕ್ಕೆ ಅನುಮತಿಯಿರಲಿಲ್ಲ. ಆದರೂ ಗೋಪ್ಯವಾಗಿ ನಡೆಯುವ, ಅಸುರಕ್ಷಿತ ಗರ್ಭಪಾತ ಗಳಿಂದ ಸಾವಿರಾರು ಐರಿಷ್ ಮಹಿಳೆಯರು ಪ್ರತಿವರ್ಷ ಮರಣಹೊಂದುತ್ತಿದ್ದರು. ಇಂಗ್ಲೆಂಡ್‌ನಲ್ಲಿ ಗರ್ಭಪಾತವನ್ನು ಕಾನೂನುಬದ್ಧಗೊಳಿಸಿದಾಗ ಐರಿಷ್ ತಾಯಿಯರು ಬೇಡದ ಮಗುವನ್ನು ತೆಗೆಸಿಕೊಳ್ಳಲು ಧಾವಿಸುತ್ತಿದ್ದದ್ದು ಪಕ್ಕದ ಇಂಗ್ಲೆಂಡಿಗೆ! ಸಮಸ್ಯೆಗಳು ಉಂಟಾದಾಗ, ಸಿಕ್ಕಿಬಿದ್ದಾಗ ಐರಿಷ್ ನ್ಯಾಯಾಂಗ ವ್ಯವಸ್ಥೆ ಅವರನ್ನು ಕಠಿಣವಾಗಿ ಶಿಕ್ಷಿಸುತ್ತಿತ್ತು. ಮ್ಯಾಮೀ ಕ್ಯಾಡೆನ್ ಎಂಬಾಕೆಗೆ ಮರಣದಂಡನೆ ದೊರಕಿದ್ದು ಇದಕ್ಕೆ ಒಂದು ನಿದರ್ಶನ.

೧೯೬೭ರ ಹೊತ್ತಿಗೆ ಇಂಗ್ಲೆಂಡ್‌ನ 'ಅಬಾರ್ಷನ್ ಆ್ಯಕ್ಟ್ – ೧೯೬೭' ತನ್ನ ಪ್ರಜೆಗಳಿಗೆ ಗರ್ಭಪಾತದ ಹಕ್ಕು ನೀಡಿತು. ಇದರ ತಕ್ಷಣದ ಪರಿಣಾಮ ಶಿಶುಹತ್ಯೆಯಲ್ಲಿ ಗಣನೀಯ ಇಳಿಕೆ! ಪಕ್ಕದ ಇಂಗ್ಲೆಂಡನ್ನು ಐರ್ಲೆಂಡ್ ವಿರೋಧಿಸಿತು. ೧೯೮೩ರಲ್ಲಿ ಶೀಲಾ ಹೋಡ್ಜರ್ಸ್ ಎಂಬಾಕೆ ತನ್ನ ಮೂರನೆಯ ಮಗುವಿಗೆ ಜನ್ಮ ನೀಡುತ್ತಾ ಸತ್ತುಹೋದಳು. ಮಗುವೂ ಉಳಿಯಲಿಲ್ಲ. "ಆಕೆ ಗರ್ಭಿಣಿ, ಮಗುವಿಗೆ ತೊಂದರೆಯಾಗಬಹುದು" ಎಂಬ ಕಾರಣಕ್ಕೆ, ತನ್ನ ಧಾರ್ಮಿಕ ನಿಲುವಿನಿಂದ ಆಸ್ಪತ್ರೆ ಆಕೆಗಿದ್ದ ಕ್ಯಾನ್ಸರ್‌ಗೆ ಚಿಕಿತ್ಸೆ ನೀಡಿರಲಿಲ್ಲ. ಸರಿಸುಮಾರು ಇದೇ ಸಮಯದಲ್ಲಿ ಐರಿಷ್ ಜನಮತ ಸಂಗ್ರಹದಿಂದ ೮ನೇ ಸಾಂವಿಧಾನಿಕ ತಿದ್ದುಪಡಿಯಲ್ಲಿ ತಾಯಿಯ ಜೀವಕ್ಕೂ, ಇನ್ನೂ ಹುಟ್ಟದ ಶಿಶುವಿನ ಜೀವಕ್ಕೂ ಸಮಾನ ಹಕ್ಕು ಎಂದು ಐರ್ಲೆಂಡ್ ಒಪ್ಪಿಬಿಟ್ಟಿತು!

**'x ಕೇಸ್'**

೧೯೯೨ರಲ್ಲಿ ನಡೆದ ಘಟನೆಯೊಂದು ಇಡೀ ಐರ್ಲೆಂಡ್‌ಅನ್ನು ಬೆಚ್ಚಿಬೀಳಿಸಿತು. ೧೪ ವರ್ಷದ ಶಾಲಾ ಬಾಲಕಿಯೊಬ್ಬಳು ಅತ್ಯಾಚಾರಕ್ಕೊಳಗಾಗಿ ಗರ್ಭಿಣಿ ಯಾದಳು. ನ್ಯಾಯಾಲಯ ಇಂಥ ಸಂದರ್ಭದಲ್ಲಿ ಆಕೆಗೆ ಐರ್ಲೆಂಡಿನಲ್ಲಿ ಗರ್ಭಪಾತವನ್ನು ನಿರಾಕರಿಸಿತು.

ಆ ಹೊತ್ತಿಗಾಗಲೇ ೧೩ ಮತ್ತು ೧೪ನೇ ಸಾಂವಿಧಾನಿಕ ತಿದ್ದುಪಡಿಗಳಿಂದ ಗರ್ಭಪಾತವನ್ನು ಐರ್ಲೆಂಡಿನ ಹೊರಗೆ ಮಾಡಿಸಿಕೊಳ್ಳುವುದು ಐರಿಷ್ ಮಹಿಳೆಯರಿಗೆ ಸಾಧ್ಯವಾಗಿತ್ತು. ಆದ್ದರಿಂದ 'x ಕೇಸ್'ನಲ್ಲಿ ಆ ಬಾಲಕಿ ಇಂಗ್ಲೆಂಡಿಗೆ ಪ್ರಯಾಣಿಸಬೇಕಾಯಿತು. ಕಥೆ ಇಷ್ಟಕ್ಕೆ ಮುಗಿಯಲಿಲ್ಲ! ನ್ಯಾಯಾಲಯದ ಸರಣಿ ಆದೇಶಗಳು ಗರ್ಭಪಾತಕ್ಕೆ ಮೊದಲೇ ಬಾಲಕಿಯನ್ನು ವಾಪಸ್ ಕರೆಸಿತು. "ನಾನಿದ್ದರೆ ಇವೆಲ್ಲಾ ಕಷ್ಟ. ನಾನು ರೈಲಿನಿಂದ ಬಿದ್ದು ಸಾಯುತ್ತೇನೆ/ ಮಹಡಿಯಿಂದ ಹಾರುತ್ತೇನೆ" ಎಂಬ ಆತ್ಮಹತ್ಯೆ ಮಾಡಿಕೊಳ್ಳುವ ಹತಾಶೆಯಲ್ಲಿ ಆ ಬಾಲಕಿ ನರಳಲಾರಂಭಿಸಿದಳು. ಇಷ್ಟಾದರೂ ನ್ಯಾಯಾಲಯ ಹೇಳಿದ್ದೇನು ಗೊತ್ತೆ? – "ಈ ಬಾಲಕಿಗೆ ಕುಟುಂಬದ ಪ್ರೀತಿ – ಆರೈಕೆಗಳಿವೆ. ಹಾಗಾಗಿ ಕಷ್ಟದ ೯ ತಿಂಗಳುಗಳನ್ನು ಕಳೆಯಲು ಆಕೆಗೆ ಸಹಾಯ ಮಾಡಬೇಕು. ಹುಟ್ಟದ ಮಗುವಿನ ಜೀವಿಸುವ ಹಕ್ಕನ್ನು ಯಾರೂ ಕಸಿದುಕೊಳ್ಳುವ ಹಾಗಿಲ್ಲ" ಎಂದು. ಬಾಲಕಿಯ ಕುಟುಂಬ ಸುಪ್ರೀಂ ಕೋರ್ಟಿನ ಮೆಟ್ಟಿಲೇರಿತು. ಅದು ಬಾಲಕಿಗೆ ಅನುಮತಿಯನ್ನೇನೋ ನೀಡಿತು. ಆದರೆ ಅಷ್ಟು ಹೊತ್ತಿಗಾಗಲೇ ಬಾಲಕಿಗೆ ಸಹಜವಾಗಿ ಪ್ರಾಕೃತಿಕ ಗರ್ಭಪಾತವಾಗಿ ಹೋಗಿತ್ತು!

ಇದು ಜನರಲ್ಲಿ ಆಕ್ರೋಶ ಮೂಡಿಸಿತು. ಮತ್ತೆ ಜನಮತ ಮೊದಲಾಯಿತು. ಮಹಿಳೆಯು ಸ್ವತಂತ್ರವಾಗಿ ಪ್ರಯಾಣಿಸುವ ಹಕ್ಕು ಮತ್ತು ಸ್ವತಂತ್ರವಾಗಿ ಬದುಕುವ ಹಕ್ಕು, ಗರ್ಭಪಾತದ ಬಗೆಗಿನ ಮಾಹಿತಿಯ ಹಕ್ಕು ಇವು ಈ ಜನಮತದ ಕೇಂದ್ರ ಪ್ರಶ್ನೆಗಳಾದವು. 'x ಕೇಸ್'ನ ಬಾಲಕಿಗಿಂತ ಈ ವಿಷಯವೇ ದೊಡ್ಡದಾದರೂ, ಅದರ ಕೇಂದ್ರದಲ್ಲಿದ್ದದ್ದು ಅತ್ಯಾಚಾರಕ್ಕೊಳಗಾಗಿ ಆತ್ಮಹತ್ಯೆಯ ಪ್ರಯತ್ನದಲ್ಲಿದ್ದ ಗರ್ಭಿಣಿಯಾಗಿದ್ದ ಒಬ್ಬ ಮುಗ್ಧ ಬಾಲಕಿ.

೧೯೯೨ರಿಂದ ೨೦೧೨ರವರೆಗೆ ಸುಮಾರು ೨೦ ವರ್ಷಗಳು, ಈ ಪರಿಸ್ಥಿತಿ ಹೆಚ್ಚೇನೂ ಬದಲಾಗಲಿಲ್ಲ. ಗರ್ಭಪಾತಕ್ಕಾಗಿ ಹೊರದೇಶಕ್ಕೆ ಪಯಣಿಸಲು ಮಾತ್ರ ಅನುಮತಿ ದೊರೆತು, ಈ ೨೦ ವರ್ಷಗಳಲ್ಲಿ ಸುಮಾರು ಎರಡು ಲಕ್ಷ ಮಹಿಳೆಯರು ಐರ್ಲೆಂಡಿನ ಹೊರಗೆ ಪಯಣಿಸಿ ಗರ್ಭಪಾತ ಮಾಡಿಸಿಕೊಂಡು ಬಂದರು. ಐರ್ಲೆಂಡಿನ ಧಾರ್ಮಿಕ ಕಟ್ಟಳೆಗಳು, ವ್ಯಾಪಾರೀ ವೈದ್ಯಕೀಯ ಧೋರಣೆ ಎರಡೂ ಸೇರಿ 'ಗರ್ಭಪಾತ ಮಾಡಿಸಿಕೊಳ್ಳುವುದು ಪಾಪ' ಎಂಬ ನಂಬಿಕೆಯನ್ನು ಗಟ್ಟಿಯಾಗಿ ಹಿಡಿದದ್ದನ್ನು ಐರಿಷ್ ಮನೋವೈದ್ಯೆ ವೆರೋನಿಕಾ ಕೀನ್ ತಮ್ಮ ಉಪನ್ಯಾಸದಲ್ಲಿ ನೆನೆಸಿಕೊಂಡರು. ಪೋಪ್ ಡಬ್ಲಿನ್‌ಗೆ ಭೇಟಿಯಿತ್ತು, ಐರಿಷ್ ನೆಲಕ್ಕೆ ಮುತ್ತಿಟ್ಟ ಸಂದರ್ಭದಲ್ಲಿ, ಬೈಪೋಲಾರ್ ಕಾಯಿಲೆಯ ಉನ್ಮಾದದ ಸ್ಥಿತಿಯಲ್ಲಿದ್ದ ಒಬ್ಬ ರೋಗಿ ಹೇಳಿದ "ಪೋಪ್ ಭೂಮಿಯನ್ನು ಮುತ್ತಿಡುತ್ತಾರೆ, ಮಹಿಳೆಯರನ್ನು ತುಳಿದು ಓಡಾಡುತ್ತಾರೆ" ಎಂಬ ಮಾತು ವೆರೋನಿಕಾ ಕೀನ್‌ರಿಗೆ 'ಸ್ವಸ್ಥ ಚಿಂತನೆಯ ಮಾತು' ಎಂದೆನಿಸಿತ್ತು!

ಎಂಟನೇ ಜನಮತ ಎಂಬ ಗರ್ಭಪಾತ ನಿಷೇಧದ ಕಾನೂನನ್ನು ಅಂತಿಮವಾಗಿ ತೆಗೆದು ಐರಿಷ್ ಮಹಿಳೆಯರಿಗೆ ಗರ್ಭಪಾತದ ಹಕ್ಕನ್ನು ದೊರಕಿಸಿಕೊಟ್ಟಿದ್ದು ೩೧ರ ಹರೆಯದ ಸವಿತಾ ಹಾಲಪ್ಪನವರ್ ಎಂಬ ಭಾರತೀಯ ದಂತವೈದ್ಯೆಯ ಮರಣದ ದುರಂತ.

ಸವಿತಾ ಹಾಲಪ್ಪನವರ್ ಗ್ಯಾಲ್‌ವೇಯಲ್ಲಿದ್ದ ಆಸ್ಪತ್ರೆಯಲ್ಲಿ ದಾಖಲಾಗಿದ್ದ ಯುವತಿ. ಆಕೆ ತನ್ನ ಅನಾರೋಗ್ಯದಿಂದ ಗರ್ಭಪಾತಕ್ಕಾಗಿ ಕೋರಿದಾಗ ಆಸ್ಪತ್ರೆ "ಐರ್ಲೆಂಡ್ ಒಂದು ಕ್ಯಾಥೋಲಿಕ್ ದೇಶ" ಎಂಬ ಕಾರಣದಿಂದ ಅದನ್ನು ನಿರಾಕರಿಸಿತು. ಮಗು ಬದುಕುವ ಸಾಧ್ಯತೆಯಿಲ್ಲವೆಂಬುದೂ ಕೂಡ ವೈದ್ಯಕೀಯ ತಂಡಕ್ಕೆ ಅರಿವಿತ್ತು. ಆದರೆ ಕಾನೂನು ಅವರ ಕೈ ಕಟ್ಟಿಹಾಕಿತ್ತು. ತೀವ್ರ ಸೋಂಕು – ಸೆಪ್ಸಿಸ್ ಆಕೆಗಿದ್ದರೂ, ಅದು ಪ್ರಾಣಾಪಾಯ ತರಬಹುದೆಂಬ ಶಂಕೆಯಿದ್ದರೂ, ಭ್ರೂಣದ ಹೃದಯಬಡಿತ ಕ್ಷೀಣವಾಗಿ ಕೇಳುತ್ತಿದೆ, ಹಾಗಾಗಿ ಅದಕ್ಕಿನ್ನೂ ಜೀವವಿದೆ ಎಂಬ ಒಂದೇ ಕಾರಣದಿಂದ ಗರ್ಭಪಾತವನ್ನು ನಿರಾಕರಿಸಲಾಯಿತು. ಭ್ರೂಣದ ಹೃದಯ ಬಡಿತ ನಿಂತ ತಕ್ಷಣ ಗರ್ಭವನ್ನು ಸ್ವಚ್ಛ ಮಾಡಿದರು. ಆದರೆ ಆ ಹೊತ್ತಿಗಾಗಲೇ ಸೋಂಕು ಕೈ ಮೀರಿತ್ತು. ಕಾಣದ ಮಗುವಿಗಾಗಿ ಸವಿತಾ ಹಾಲಪ್ಪನವರ್ ತನ್ನ ಜೀವವನ್ನು ತೊರೆಯಬೇಕಾಯಿತು!

ಸವಿತಾರ ತಾಯಿ ಈ ಸಂದರ್ಭದಲ್ಲಿ ದುಃಖ–ಆಕ್ರೋಶಗಳಿಂದ ಹೇಳಿದ ಮಾತು ಇದು: "೪ ತಿಂಗಳ ಭ್ರೂಣವನ್ನುಳಿಸಲು ೩೦ ವರ್ಷದ ನನ್ನ ಮಗುವನ್ನು ಇವರು ಕೊಂದುಹಾಕಿದರು."

ಸವಿತಾರ ಮರಣ ಇಡೀ ದೇಶದ ತುಂಬಾ ಹೊಸ ಸಂವಾದವನ್ನು ಹುಟ್ಟುಹಾಕಿತು. ಅಲ್ಲಿಯವರೆಗೆ ಮುಂದಾಳುಗಳು ಸಂಘಟಿಸಬೇಕಿದ್ದ ಮಹಿಳೆಯರ ಗುಂಪುಗಳು ತಾವಾಗಿ ಹೊರಬಂದವು, ಹೋರಾಡತೊಡಗಿದವು.

ದೇಶದ ಗರ್ಭಪಾತದ ಕಾನೂನು ಬರುವಾಗ ಮತದಾನದಲ್ಲಿ ಭಾಗವಹಿಸದ ಯುವ ಮಹಿಳೆಯರನ್ನು ಸವಿತಾರ ಮರಣ ಬಡಿದೆಬ್ಬಿಸಿತು. ತಮ್ಮ ಜೀವಕ್ಕೆ ಸುರಕ್ಷತೆಯೇ ಇಲ್ಲ ಎಂಬ ಭಾವ ಅವರನ್ನು ರೊಚ್ಚಿಗೆಬ್ಬಿಸಿತು. ಅಲ್ಲಿಯವರೆಗೆ ಬದಲಾವಣೆಗೆ ಕರೆಯಿತ್ತು, ಪ್ರಯತ್ನವಿತ್ತು, ನಿಜ. ಆದರೆ ರಾಜಕೀಯ ಛಲವಿರಲಿಲ್ಲ, ಮನಸ್ಸಿನ ಬಲವಿರಲಿಲ್ಲ. ಸವಿತಾ ಮರಣದಿಂದ ಈ ಛಲ–ಬಲಗಳೆರಡೂ ಜಾಗೃತಗೊಂಡವು. ತಮ್ಮ ದೇಶದ ಅತಿಥಿಯಾದ ಸವಿತಾರ ಮರಣ ಐರಿಷ್ ಆತ್ಮಸಾಕ್ಷಿಯನ್ನು ಕದಡಿತ್ತು. "ನಮ್ಮದು ಕ್ಯಾಥೋಲಿಕ್ ದೇಶ, ನಾವು ನಿನಗೆ ಸಹಾಯ ಮಾಡಲಾರೆವು ಎಂದು ಸವಿತಾಗೆ ನಾವು ಹೇಳಬೇಕಾಗಿ ಬಂದದ್ದು ಎಂಥ ಅಪಮಾನದ, ತಲೆ ತಗ್ಗಿಸುವ ಸಂಗತಿ" ಎಂದು ವೆರೋನಿಕಾ ಕೀನ್ ತಮ್ಮ ಉಪನ್ಯಾಸದಲ್ಲಿ ಹೇಳಿದರು.

ಈ ದೀರ್ಘ ಹೋರಾಟದ ನಂತರ ೨೦೧೮ ಮೇ ತಿಂಗಳಿನಲ್ಲಿ ೨೬ರಂದು ಮತ್ತೊಂದು ಜನಮತದಂತೆ ೧೨ ವಾರಗಳವರೆಗೆ ಅಂದರೆ ಮೂರು ತಿಂಗಳುಗಳವರೆಗೆ ಗರ್ಭಪಾತ ಮಾಡಿಸಿಕೊಳ್ಳುವ, ಅದರ ನಂತರ ಇಬ್ಬರು ಪರಿಣತ ವೈದ್ಯರ ಸಲಹೆಯ ನಂತರ ಗರ್ಭಪಾತ ಮಾಡಿಸಿಕೊಳ್ಳಬಹುದಾದ ಹಕ್ಕು ಐರಿಷ್ ಮಹಿಳೆಯರದಾಯ್ತು.

ಉಪನ್ಯಾಸ ಮುಗಿದಾಗ ಕೇಳುತ್ತಿದ್ದ ನಮ್ಮ ಕಣ್ಣಲ್ಲಿ ನೀರಿತ್ತು. ಅಲ್ಲಿದ್ದದ್ದು ಜಗತ್ತಿನ ೬೦ ರಾಷ್ಟ್ರಗಳಿಗೆ ಸೇರಿದ ೬೦೦ ಮಹಿಳಾ ಮನೋವೈದ್ಯೆಯರು. ಮಹಿಳೆಯರು ಯಾವ ಧರ್ಮದವರೇ ಆಗಲಿ, ಯಾವ ದೇಶದವರೇ ಆಗಲಿ ಸವಾಲುಗಳು – ಕಷ್ಟಗಳು ತಪ್ಪುವುದೇ ಇಲ್ಲ ಎಂಬ ಭಾವ ನಮ್ಮೆಲ್ಲರ ಮನಸ್ಸಿನಲ್ಲಿ ಆ ಕ್ಷಣ ಬಂದದ್ದು ಸತ್ಯ. ತಾಯ್ತನದ ಪವಿತ್ರತೆಯ ಬಗ್ಗೆ, ಮಗುವಿನ ಲಾಲನೆ–ಪಾಲನೆಯ ಬಗ್ಗೆ ಉದ್ದುದ್ದ ಮಾತನಾಡುವ, ಕಣ್ಣಲ್ಲಿ ನೀರು ಬರಿಸಿಕೊಳ್ಳುವ ನಮ್ಮ ಸಮಾಜಕ್ಕೆ ತಾಯಿ ಜೀವದ ಬೆಲೆಯೂ ಗೊತ್ತಾಗಬೇಕಲ್ಲವೆ? 'ಮುಂದುವರಿದಿದೆ' ಎಂದು ನಾವಂದುಕೊಳ್ಳುವ ಪಾಶ್ಚಾತ್ಯ ದೇಶಗಳಲ್ಲಿಯೂ 'ಅಮ್ಮ'ನದು ಎಂಥ ಕರುಣಾಜನಕ ಪರಿಸ್ಥಿತಿ ಎಂದೆನಿಸಿತು. ಕಳೆದ ವರ್ಷದ 'ಅಮ್ಮಂದಿರ ದಿನ'ದ ಹೊತ್ತಿಗೆ ಗರ್ಭಪಾತ ಮಾಡಿಸಿಕೊಳ್ಳುವ ಹಕ್ಕು ಐರಿಷ್ ಮಹಿಳೆಯರಿಗೆ ದೊರೆತದ್ದು ಯೋಗಾಯೋಗ ! ಆರೋಗ್ಯವನ್ನು ಕಾಪಾಡುವ, ತಮ್ಮ ಖಾಸಗೀ ವಿಷಯವನ್ನು ತಮ್ಮೊಳಗೇ ಕಾಯ್ದುಕೊಳ್ಳುವ ಹಕ್ಕಾಗಿ ತಾಯಿಗೆ ಈ ಪ್ರಕ್ರಿಯೆ ಕಾರಣವಾಯಿತು ಎನ್ನಬಹುದು. ತನ್ನ ಮಗುವನ್ನು ಕಳೆದುಕೊಳ್ಳಲು ಯಾವ ತಾಯಿಯೂ ಇಷ್ಟಪಡಲಾರಳು. ಆದರೆ ಅನಿವಾರ್ಯತೆಯಿಂದ ಹಾಗೆ ಮಾಡಬೇಕಾದಾಗ, ಗರ್ಭಪಾತ ಮಾಡಿಸಿಕೊಳ್ಳುವ ಅವಕಾಶ ಆಕೆಗಿರಬೇಕು. ಈ ಚರಿತ್ರೆಯನ್ನು ನೆನೆಸಿಕೊಂಡು, ಲೋಕದ ಅಮ್ಮಂದಿರ ಕಾಳಜಿ ವಹಿಸುವ ಕಾರ್ಯಕ್ಕೆ ತೊಡಗಬೇಕು ಎಂದು ಈಗನ್ನಿಸುತ್ತಿದೆ ಅಲ್ಲವೆ? !

**ಡಾ|| ಕೆ. ಎಸ್. ಪವಿತ್ರ**
ಶ್ರೀಧರ ನ್ಯೂರೊಸೈಕಿಯಾಟ್ರಿಕ್ ಸೆಂಟರ್, ರಾಜೇಂದ್ರನಗರ
ಶಿವಮೊಗ್ಗ – ೫೭೭೨೦೪

# ಅಭಿವೃದ್ಧಿಯ ಪಥ ಮತ್ತು ಪ್ರತಿರೋಧದ ಮುಖಾಮುಖಿ

## ಭಾರತದ ಸಂದರ್ಭದಲ್ಲಿ 'ನವ ರೈತ ಚಳವಳಿಗಳು'





*(ಕಳೆದ ಸಂಚಿಕೆಯ ಮುಂದುವರಿದ ಭಾಗ)*

**ಡಾ॥ ಮುಜಾಫ್ಫರ್ ಅಸ್ಸಾದಿ**

### ೧೯೮೦ರ ದಶಕ ಮತ್ತು ನವ ರೈತ ಹೋರಾಟಗಳು

ಈ ರೀತಿಯ ಚಳವಳಿಗಳಿಗೆ ಕಾರಣಗಳೇನು? ಇವುಗಳು ಬರೇ ಆರ್ಥಿಕ ಬಿಕ್ಕಟ್ಟಿನ ಫಲಶ್ರುತಿಗಳೇ? ಕೃಷಿಯಲ್ಲಿ ಬಂಡವಾಳಶಾಹಿಯ ಪ್ರತಿರೋಧವೇ? ಅಥವಾ ರೈತರ ರಾಜಕೀಯಕರಣ ಪ್ರಕ್ರಿಯೆಯ ಫಲಶ್ರುತಿಯೇ? ಇಂತಹ ಅನೇಕ ಗೊಂದಲಗಳಿವೆ. ಕೊರ್ನೆಲಿಯಾ ಲೆಲನ್‌ಬರ್ಗ್ ಇದನ್ನು ರೈತರ ರಾಜಕೀಯಕರಣದ ಭಾಗವೆಂದು ವಾದಿಸುತ್ತಾನೆ. ವಾಸ್ತವವಾಗಿ ಭೂ ಸುಧಾರಣೆ, ಚುನಾವಣಾ ರಾಜಕೀಯ, ಪ್ರಜಾಪ್ರಭುತ್ವ ಚೌಕಟ್ಟಿನ ವಿಸ್ತರಣೆ, ಹಸಿರು ಕ್ರಾಂತಿ, ವಿಕೇಂದ್ರೀಕರಣ, ಹೊಸ ಮಾರುಕಟ್ಟೆ ಇತ್ಯಾದಿಗಳು ರೈತರನ್ನು ರಾಜಕೀಯಕರಣದ ಭಾಗವನ್ನಾಗಿಸಿದ್ದು ದಿಟ. ಭೂ ಸುಧಾರಣೆಯ ಒಂದು ಫಲಶ್ರುತಿ ಏನೆಂದರೆ ಸಾವಿರಾರು ರೈತರನ್ನು, ಗೇಣಿದಾರರನ್ನು ಗ್ರಾಮೀಣ ಪ್ರದೇಶದಲ್ಲಿ ಅಧಿಕಾರದ ರಾಜಕಾರಣದ ಹೊಸ್ತಿಲಲ್ಲಿ ನಿಲ್ಲಿಸಿತ್ತು. ಇದಕ್ಕೆ ಪೂರಕವೆಂಬಂತೆ ಮೀಸಲಾತಿ ಮತ್ತು ವಿಕೇಂದ್ರೀಕರಣಗಳು ಕೂಡ ಕೆಲಸ ಮಾಡಿದ್ದವು. ಆದರೆ ೧೯೭೦ ಮತ್ತು ೧೯೮೦ರ ದಶಕಗಳಲ್ಲಿ ರಾಜಕೀಯಕರಣಕ್ಕೆ ಅವಕಾಶ ನೀಡಿದ್ದು ಭೂ ಸುಧಾರಣೆ, ಹಸಿರು ಕ್ರಾಂತಿ, ಮೀಸಲಾತಿ ಮತ್ತು ರಾಜಕೀಯ ಪಕ್ಷಗಳ ರ‍್ಯಾಲಿಗಳು.

ಇನ್ನೊಂದೆಡೆ ಇದನ್ನು ಈ ರೀತಿ ವಾದಿಸಬಹುದು: ಇದನ್ನು ಅಭಿವೃದ್ಧಿ ಪಥದ ವೈರುಧ್ಯಗಳ ಪ್ರತಿರೋಧಗಳೆನ್ನಬಹುದು. ಕೃಷಿಯಲ್ಲಿ ಅಳವಡಿಸಿದ ಬಂಡವಾಳಶಾಹಿ ಬೆಳವಣಿಗೆಯಲ್ಲಿನ ಬಿಕ್ಕಟ್ಟಿನ ಫಲಶ್ರುತಿ ಕೂಡ ಹೌದು. ಯಾಕೆಂದರೆ ಬಂಡವಾಳಶಾಹಿಯು ಕೃಷಿಯ ಮತ್ತು ರೈತರ ಮೂಲಭೂತ ಸಮಸ್ಯೆಗಳನ್ನು ಪರಿಹರಿಸಲು ಸಾಧ್ಯವಾಗಲಿಲ್ಲ. ಅದು ರೈತರನ್ನು ಸಾಲದ ವರ್ತುಲದಿಂದ ಬಿಡುಗಡೆ ಮಾಡಲಿಲ್ಲ, ಅವರ ಸಾಲವನ್ನು ಹೆಚ್ಚಿಸಿತೇ ಹೊರತು ಅವರನ್ನು ಋಣಮುಕ್ತರನ್ನಾಗಿಸಲಿಲ್ಲ, ಅವರ ಬೆಳೆಗಳಿಗೆ ಬೆಂಬಲ ಮತ್ತು ವೈಜ್ಞಾನಿಕ ಬೆಲೆಗಳನ್ನು ನಿರ್ಧರಿಸಲು ಅಸಮರ್ಥವಾಯಿತು, ಹಿಡುವಳಿಗಳ ಗಾತ್ರವನ್ನು ಕುಗ್ಗಿಸಿತೇ ಹೊರತು ಹೆಚ್ಚಿಸಲಿಲ್ಲ. ರೈತರ ಬೆಳೆಗಳಿಗೆ ತುಲನಾತ್ಮಕ ಬೆಳೆಗಳನ್ನು ನೀಡಲಿಲ್ಲ, ಹೀಗಾಗಿ ಕೃಷಿ ಒಂದು ಲಾಭದಾಯಕವಲ್ಲದ ಉದ್ಯೋಗವಾಯಿತು. ಇವೆಲ್ಲಾ ಕಾರಣಗಳಿಗಾಗಿ ರೈತ ಚಳವಳಿ ಅನಿವಾರ್ಯವಾಗಿತ್ತು. ಇವುಗಳು ತತ್‌ಕ್ಷಣದ ಕಾರಣಗಳು. ವಾಸ್ತವವಾಗಿ ಬಂಡವಾಳಶಾಹಿಯು ಕೃಷಿಯಲ್ಲಿ ಆಂತರಿಕ ವೈರುಧ್ಯಗಳನ್ನು, ಸಂಘರ್ಷಗಳನ್ನು, ಪ್ರತಿರೋಧಗಳನ್ನು ನಿರ್ಮಿಸಿತ್ತು. ಈ ಆಂತರಿಕ ವೈರುಧ್ಯಗಳ ಮೂಲ ಇರುವುದು ಬಂಡವಾಳಶಾಹಿಯ ಅಭಿವೃದ್ಧಿಯ ಪಥದಲ್ಲಿ ಮತ್ತು ಅದಕ್ಕೆ ಪೂರಕವೆಂಬಂತೆ ತಂದ ಹಸಿರು ಕ್ರಾಂತಿಯಲ್ಲಿ.

ನವ ರೈತ ಹೋರಾಟ ೧೯೮೦ರ ಸುಮಾರಿಗೆ ಮಹಾರಾಷ್ಟ್ರದ ನಾಸಿಕದ ಚೆಕಾನ್‌ನಲ್ಲಿ ತುಲನಾತ್ಮಕ ಬೆಲೆಗಳಿಗಾಗಿ ಆರಂಭವಾಯಿತು. ವಿಚಿತ್ರವೆಂದರೆ ಉತ್ತರ ಭಾರತದಲ್ಲಿ ಇದು ಆರಂಭಗೊಂಡದ್ದು ೧೯೮೭ರ ಸುಮಾರಿಗೆ, ಮೀರತ್‌ನ ಸಿಸೋಲಿ ಮತ್ತು ಶಾಮ್ಲಿ ಹಳ್ಳಿಗಳಲ್ಲಿ. ಇದಕ್ಕೆ ಒಂದು ನಿರ್ದಿಷ್ಟವಾದ ಬೇಡಿಕೆ ಪಟ್ಟಿ ಇರಲಿಲ್ಲ. ಕೆಲವೊಮ್ಮೆ ಅದು ಅತೀ ದೀರ್ಘವಾಗಿರುತ್ತಿತ್ತು. – ದೆಹಲಿಯ ರ‍್ಯಾಲಿಯಲ್ಲಿನ ಪಟ್ಟಿಯಲ್ಲಿ ೩೫ ಬೇಡಿಕೆಗಳಿದ್ದವು, ಅಂತಿಮವಾಗಿ ಅದು ವಾದಿಸಿದ್ದು ಎರಡು ಬೇಡಿಕೆಗಳಿಗಾಗಿ ಮಾತ್ರ – ಕಬ್ಬು ಬೆಳೆಗಾರರಿಗೆ ಬೆಂಬಲ ಬೆಲೆ ಮತ್ತು ಸಾಲ ಮರುಪಾವತಿ. ಕರ್ನಾಟಕದಲ್ಲಿ ಇದು ೧೯೮೦ರಲ್ಲಿ ಆರಂಭಗೊಂಡದ್ದು ನವಿಲುಗುಂದ ಮತ್ತು ನರಗುಂದದಲ್ಲಿ. ಕೆಲವೇ ದಿನಗಳಲ್ಲಿ ಶಿವಮೊಗ್ಗ ರೈತ ಚಳವಳಿಯ ನೇತೃತ್ವದಡಿಯಲ್ಲಿ ಬಂದರೂ ಅದಕ್ಕೆ ಸಂಘಟನಾತ್ಮಕ ರೂಪ ಸಿಕ್ಕಿದ್ದು ಕರ್ನಾಟಕ ರಾಜ್ಯ ರೈತ ಸಂಘದ ಸ್ಥಾಪನೆಯಾದ ಮೇಲೆ. ಪ್ರೊ॥ ನಂಜುಂಡಸ್ವಾಮಿ ಇದರ ಅನಭಿಷಿಕ್ತ ನಾಯಕರಾದರು ಮತ್ತು ಹೋರಾಟಕ್ಕೆ ಹೊಸ ತಾತ್ವಿಕ ಚೌಕಟ್ಟನ್ನು ನೀಡಿದರು. ರೈತ ಹೋರಾಟವು ಆರಂಭದ ದಿನಗಳಲ್ಲಿ ೧೯ ಬೇಡಿಕೆಗಳ

ಸನ್ನದನ್ನು ತಯಾರಿಸಿತ್ತು. ಅದರಲ್ಲಿದ್ದ ಪ್ರಮುಖ ಬೇಡಿಕೆಗಳೆಂದರೆ – ಸಾಲ ಮನ್ನಾ, ಕೃಷಿಗೆ ಬೆಂಬಲ ಮತ್ತು ವೈಜ್ಞಾನಿಕ ಬೆಲೆ, ಕೃಷಿಗೆ ಕೈಗಾರಿಕೆಯ ಸ್ಥಾನಮಾನ, ಲೆವಿ ರದ್ದು, ಇತ್ಯಾದಿ.

ನವ ರೈತ ಚಳವಳಿಗಳ ಹೋರಾಟಗಳು ಏಕರೂಪಿಯಾಗಿರಲಿಲ್ಲ, ಅದು ಪರಿಸ್ಥಿತಿಗನುಗುಣವಾಗಿ ರಾಜ್ಯದಿಂದ ರಾಜ್ಯಕ್ಕೆ ಬದಲಾಗುತ್ತಾ ಹೋಯಿತು. ಉತ್ತರ ಪ್ರದೇಶದ ಹೋರಾಟದಲ್ಲಿ ಬಹು ಮುಖ್ಯವಾಗಿದ್ದದ್ದು ಕಬ್ಬಿನ ಬೆಲೆ ಮತ್ತು ಅದಕ್ಕೆ ಸಂಬಂಧಿಸಿದ ವಿಷಯಗಳು. ಮಹಾರಾಷ್ಟ್ರದಲ್ಲಿ ನೀರುಳ್ಳಿ ಬೆಲೆ; ಕರ್ನಾಟಕದಲ್ಲಿ ಮಾತ್ರ ಒಂದೇ ವಿಷಯ ಮಹತ್ವದ್ದಾಗಲಿಲ್ಲ, – ಎಲ್ಲವನ್ನೂ ಒಳಗೊಂಡಿತ್ತು. ಉತ್ತರ ಪ್ರದೇಶದ ರೈತರ ಹೋರಾಟಗಳನ್ನು ಈ ರೀತಿ ಪಟ್ಟಿ ಮಾಡಬಹುದು : ೧೯೮೭ಕ್ಕೆ ೧೧ ಬೇಡಿಕೆಗಳೊಂದಿಗೆ ಕಮರುಕೆರ ವಿದ್ಯುಚ್ಛಕ್ತಿ ಕೇಂದ್ರದ ಘೇರಾವೊ, ಅವುಗಳಲ್ಲಿ ವಿದ್ಯುಚ್ಛಕ್ತಿ ದರದ ವಿಷಯ ಮತ್ತು ಅದರ ವಿತರಣೆ ವಿಷಯ ಪ್ರಮುಖವಾಗಿತ್ತು, ೧೯೮೮ರಲ್ಲಿ ಮೀರತ್‌ನ ದಿಗ್ಬಂಧನ, ಅದೇ ವರುಷ ದೆಹಲಿಯ ಬೋಟ್ ಕ್ಲಬ್‌ನಲ್ಲಿ ೩೫ ಬೇಡಿಕೆಗಳ ಸನ್ನದ್‌ನೊಂದಿಗೆ, ಅದರಲ್ಲಿ ಕಬ್ಬಿಗೆ ಹೆಚ್ಚಿನ ಬೆಂಬಲ ಬೆಲೆ, ವಿದ್ಯುಚ್ಛಕ್ತಿ ಮತ್ತು ನೀರಿನ ದರಗಳಲ್ಲಿ ಮಾಫಿ, ೧೯೮೮ರಲ್ಲಿ ರಜಾಬ್ಪುರದ ೧೧೦ ದಿನಗಳ ರಸ್ತೆ ರೋಕೊ–ರೈಲ್ ರೋಕೊ ಚಳವಳಿ. ೧೯೮೯ರಲ್ಲಿ ನಲಿಮ ಲಾವೋ ಚಳವಳಿ, ೧೯೯೦ಕ್ಕೆ ಲಕ್ನೋದಲ್ಲಿ ಬೃಹತ್ ಸಮಾವೇಶ – ಇದರಲ್ಲಿ ಕಬ್ಬಿಗೆ ಹೆಚ್ಚಿನ ಬೆಲೆ, ವಿದ್ಯುಚ್ಛಕ್ತಿಯ ದರಗಳಲ್ಲಿ ಕಡಿತ, ೧೯೯೨ ಮತ್ತೊಮ್ಮೆ ಲಕ್ನೋದಲ್ಲಿ ಒಂದು ತಿಂಗಳ ಕಾಲ ರೈತ ಪಂಚಾಯತ್ ಮತ್ತು ಧರಣಿ, ರೂ. ೨೦,೦೦೦ ಕೋಟಿಗೂ ಹೆಚ್ಚು ರೈತರ ಸಾಲ ಮನ್ನಾ, ಗೊಬ್ಬರದ ಮತ್ತು ಕಬ್ಬಿನ ಬೆಲೆಯಲ್ಲಿ ಕಡಿತ ಇತ್ಯಾದಿಗಳು ಹೋರಾಟದಲ್ಲಿನ ಬೇಡಿಕೆಗಳಾಗಿದ್ದವು. ಅದೇ ವರುಷ ಗಾಝಿಯಾಬಾದ್‌ನಲ್ಲಿ ಟೆಲ್ಕೊ ಕಂಪೆನಿಯ ವಿರುದ್ಧ ಭೂ ಪರಿಹಾರ ಚಳವಳಿ – ರೈತರ ಭೂ ಸ್ವಾಧೀನತೆಗೆ ಹೆಚ್ಚಿನ ಪರಿಹಾರ, ೧೯೯೧ರಲ್ಲಿ ಗೊಬ್ಬರದ ಸಬ್ಸಿಡಿಗಾಗಿ ದೆಹಲಿ ಪಂಚಾಯತ್, ೧೯೯೨ರಲ್ಲಿ ರೂ. ೧೦,೦೦೦ ಕೋಟಿ ಸಾಲ ಮನ್ನಾಕ್ಕಾಗಿ ಒಂದು ತಿಂಗಳು ಲಕ್ನೋ ಪಂಚಾಯತ್, ೧೯೯೨ರಲ್ಲಿ ಗಾಝಿಯಾಬಾದ್‌ನಲ್ಲಿ ೧೯೭೨ರಲ್ಲಿ ಸ್ವಾಧೀನಪಡಿಸಿದ ರೈತರ ಭೂಮಿಗೆ ಪರಿಹಾರ ಹಾಗೂ ಅವರ ಕುಟುಂಬಸ್ಥರಿಗೆ ಉದ್ಯೋಗ, ೧೯೯೩ರಲ್ಲಿ ಭೂ ಪರಿಹಾರಕ್ಕಾಗಿ ಚಿನಾಟ್ ಕಟುವಾ ಪಂಚಾಯತ್, ಅದೇ ವರುಷ ಗೋವು ಸತ್ಯಾಗ್ರಹ ಅದರೊಂದಿಗೆ ಕಬ್ಬಿನ ಬಾಕಿ ಮರುಪಾವತಿಗೆ ಸತ್ಯಾಗ್ರಹ. ೧೯೯೩ಕ್ಕೆ ಬೀಜ ಸತ್ಯಾಗ್ರಹ, ೨೦೦೫ಕ್ಕೆ ಕಬ್ಬಿನ ಬೆಲೆ ನಿಗದಿಗಾಗಿ ಬರೇಲಿಯಲ್ಲಿ ಮತ್ತು ಲಕ್ನೋದಲ್ಲಿ ಪಂಚಾಯತ್, ೨೦೦೭ಕ್ಕೆ ಸಾಲ ಮರುಪಾವತಿಗಾಗಿ, ೨೦೦೮ಕ್ಕೆ ಜಂತರ್ ಮಂತರ್‌ನಲ್ಲಿ ಧರಣಿ ಇತ್ಯಾದಿ. ೨೦೧೦ರ ನಂತರ ಹೋರಾಟಗಳು ಕೋಮು ರಾಜಕಾರಣದಿಂದಾಗಿ ಕುಂಠಿತವಾದವು. ಆದರೆ ೨೦೧೮ಕ್ಕೆ ೨೫ ಬೇಡಿಕೆಗಳನ್ನು ಮುಂದಿಟ್ಟು ದೆಹಲಿ ತನಕ ಕಿಸಾನ್ ಕ್ರಾಂತಿ ಯಾತ್ರದ ಚಳವಳಿಯ ಪುನಶ್ಚೇತನವನ್ನು ನೋಡಬಹುದು. – ಇಲ್ಲಿದ್ದ ಪ್ರಮುಖ ಬೇಡಿಕೆಗಳೆಂದರೆ ಸ್ವಾಮಿನಾಥನ್ ಸಮಿತಿ ವರದಿ ಜಾರಿಗೆ ಒತ್ತಾಯ ಮತ್ತು ಸಾಲ ಮನ್ನಾ.

ಮಹಾರಾಷ್ಟ್ರದ ಶೇತ್ಕರಿ ಸಂಘದ ಹೋರಾಟದಲ್ಲಿ ಪ್ರಮುಖವಾದ ವಿಷಯ ಬೆಂಬಲ ಬೆಲೆಗಳು ಮತ್ತು "ರೈತರಿಗೆ ಮಾರುಕಟ್ಟೆ ಮತ್ತು ತಾಂತ್ರಿಕತೆಯ ಸ್ವಾತಂತ್ರ್ಯ." ಇವೆರಡನ್ನು ಮುಂದಿಟ್ಟುಕೊಂಡು ಶೇತ್ಕರಿ ಸಂಘಟನೆ ಬಹಳಷ್ಟು ಚಳವಳಿ ಅಥವಾ ಹೋರಾಟಗಳನ್ನು ಮಾಡಿತ್ತು. ನೀರುಳ್ಳಿಗೆ ಬೆಂಬಲ ಬೆಲೆಗಾಗಿ ೧೯೮೦ರಲ್ಲಿ ನಾಸಿಕ್ ಚಳವಳಿ, ತಂಬಾಕಿಗೆ ಬೆಂಬಲ ಬೆಲೆಗಾಗಿ ೧೯೮೧ರಲ್ಲಿ ನಿಪ್ಪಾಣಿ ಹೋರಾಟ, ಕೃಷಿ ಬೆಳೆಗಳಿಗೆ ಬೆಂಬಲ ಬೆಲೆಗಾಗಿ ೧೯೮೧ ಮತ್ತು ೧೯೮೭ರಲ್ಲಿ ರೈಲ್ ಮತ್ತು ರಾಸ್ತ ರೋಕೊ, ೧೯೮೩ರಲ್ಲಿ ಪಂಡರ್ಪುರ್ ರ‍್ಯಾಲಿ. ರಾಜೀವ್ ವಸ್ತ್ರದ ವಿರುದ್ಧ ೧೯೮೭–೮೭ರಲ್ಲಿ ರಾಜೀವ್ ವಸ್ತ್ರ ಚಳವಳಿ, ೧೯೮೭ರಲ್ಲಿ ಚಾಂದ್ವಾಡ್‌ನಲ್ಲಿ ಬೃಹತ್ ಮಹಿಳಾ ಸಮಾವೇಶ, ೧೯೯೮ರಲ್ಲಿ ರೈತ ಉದ್ಯಮಶೀಲತೆಗಾಗಿ ಜನಸಂಸದ್, ೨೦೧೫ಕ್ಕೆ ಧುಲೆ ರ‍್ಯಾಲಿ. ವಾಸ್ತವವಾಗಿ ೧೯೯೦ರ ದಶಕದಲ್ಲಿ ಅದು ನಡೆಸಿದ ಹೋರಾಟಗಳು ಕಡಿಮೆ.

ಕರ್ನಾಟಕದಲ್ಲಿ ರೈತ ಚಳವಳಿ ೧೯೮೦ರ ದಶಕದ ತನಕ ಬಹಳ ತೀಕ್ಷ್ಣವಾಗಿತ್ತು, ಸರಕಾರವನ್ನು ಉರುಳಿಸುವಷ್ಟು ಶಕ್ತಿಶಾಲಿಯಾಗಿತ್ತು. ಬೇಡಿಕೆಯ ಪಟ್ಟಿಯೂ ಕೂಡ ಉದ್ದವಾಗಿತ್ತು. ರೈತ ಹೋರಾಟ ಆರಂಭಗೊಂಡದ್ದೇ ೧೯ ಬೇಡಿಕೆಗಳ ಪಟ್ಟಿಯೊಂದಿಗೆ. ೧೯೮೦ರ ದಶಕದ ತನಕ ಅದರ ಬೇಡಿಕೆಗಳ ಪಟ್ಟಿಯಲ್ಲಿ ಇದ್ದಂತಹ ವಿಷಯಗಳು – ಸಾಲ ಮನ್ನಾ, ಬೆಂಬಲ ಮತ್ತು ವೈಜ್ಞಾನಿಕ ಬೆಲೆ, ಲೆವಿ ಪ್ರಶ್ನೆ, ನಗರ ಕೇಂದ್ರಿತ ಬೆಳವಣಿಗೆ, ಸಬ್ಸಿಡಿ, ಕೈಗಾರಿಕೆ ಮತ್ತು ಕೃಷಿ ನಡುವೆ ಹೆಚ್ಚುತ್ತಿರುವ ಅಂತರ, ರೈತರ ಪ್ರತಿನಿಧಿತ್ವ . ಆದಕಾರಣ ೧೯೮೦ರ ದಶಕದ ತನಕ ಬೇಡಿಕೆಗಳು ಮತ್ತು ರೈತ ಹೋರಾಟದ ಪ್ರತಿರೋಧಗಳು ಅಭಿವೃದ್ಧಿ ವಿಷಯಕ್ಕೆ, ರಾಜಕೀಯ ವ್ಯವಸ್ಥೆಗೆ ಮತ್ತು ಕರ್ನಾಟಕಕ್ಕೆ ಸೀಮಿತವಾಗಿತ್ತು. ೧೯೯೦ರ ದಶಕದಲ್ಲಿ, ಅಂದರೆ ಜಾಗತೀಕರಣದ ದಶಕದಲ್ಲಿ, ಹೊಸ ಬೇಡಿಕೆಗಳು ಮತ್ತು ವಿಷಯಗಳು ಸೇರ್ಪಡೆಯಾದವು. ಅದರೊಟ್ಟಿಗೆ ಅದರ ಹೋರಾಟಗಳು ಮತ್ತು ಅದರ ಸ್ವರೂಪ ಬದಲಾದವು. ಹೊಸ ವಿಷಯಗಳಲ್ಲಿ ಬೌದ್ಧಿಕ ಆಸ್ತಿಯ ಹಕ್ಕು, ಡಂಕೆಲ್ ಪ್ರಸ್ತಾವನೆ, ವಿಶ್ವ ವ್ಯಾಪಾರ ಸಂಸ್ಥೆ, ಅಂತರರಾಷ್ಟ್ರೀಯ ಬಂಡವಾಳ, ಆಹಾರ ಸಂಸ್ಕೃತಿ, ಬೀಜ ಸಂಸ್ಕೃತಿ, ಜಾಗತಿಕ ಬಂಡವಾಳದಿಂದ ಶೋಷಣೆ, ಇತ್ಯಾದಿಗಳು ಸೇರ್ಪಡೆಯಾದವು. ಸ್ವಾಮಿನಾಥನ್ ಸಮಿತಿಯ ಅನುಷ್ಠಾನದ ಬೇಡಿಕೆ ಇತ್ತೀಚಿನ ಬೇಡಿಕೆ. ಇವೆಲ್ಲದರ ನಡುವೆ ೧೯೮೦ರ ನಂತರ ಅದರ ಹೋರಾಟದ ದೊಡ್ಡ ಪಟ್ಟಿಯೇ ಇದೆ :

೧೯೮೧ರಲ್ಲಿ ಬೆಂಬಲ ಬೆಲೆಗಾಗಿ ರಸ್ತೆ ತಡೆ ಹೋರಾಟ, ೧೯೮೨ರಲ್ಲಿ ಜೈಲ್ ಭರೋ, ಅದೇ ವರುಷ ಜಾಥ, ೧೯೮೩ರಲ್ಲಿ ಪುನಃ ಜಾಥ ಮತ್ತು ಬೆಂಬಲ ಬೆಲೆಗಾಗಿ ವಿಧಾನ ಸೌಧದೊಳಗೆ ಧರಣಿ, ೧೯೮೦–೮೩ರ ನಡುವೆ ಲೆವಿ ವಿರುದ್ಧ ಹೋರಾಟ, ೧೯೮೦–೯೦ ಗ್ರಾಮ್ ಸ್ವರಾಜ್‌ಗಾಗಿ ಚಳವಳಿ, ೧೯೮೪ ಸರಕಾರದ ನೀತಿಗಳ ವಿರುದ್ಧ ರೈಲ್ ಮತ್ತು ರಾಸ್ತ ರೋಕೊ, ೧೯೮೪ರಲ್ಲಿ ಜಾಥ ಮತ್ತು ರ‍್ಯಾಲಿ, ೧೯೮೭ ಪಾನಮುಕ್ತ ಕರ್ನಾಟಕಕ್ಕಾಗಿ ಚಳವಳಿ, ೧೯೮೩ರಲ್ಲಿ ಹಳಿಯಾಳದಲ್ಲಿ ಬೃಹತ್ ಮಹಿಳಾ ಸಮಾವೇಶ, ಅದೇ ದಶಕದಲ್ಲಿ ಸಾಮಾಜಿಕ ಅರಣ್ಯದ ವಿರುದ್ಧ ಹೋರಾಟ, ೧೯೮೯ರಲ್ಲಿ ರೈಲ್ ಮತ್ತು ರಾಸ್ತ ರೋಕೊ, ೧೯೮೭ರಲ್ಲಿ ಜೈಲ್ ಭರೋ ಚಳವಳಿ, ೧೯೮೭ರಲ್ಲಿ ಪಕ್ಷ ಸ್ಥಾಪನೆಗಾಗಿ ರ‍್ಯಾಲಿ, ೧೯೮೯ರಲ್ಲಿ ರೈಲ್

## ಓದುಗರಲ್ಲೊಂದು ವಿಶೇಷ ಮನವಿ

'ಹೊಸತು' ಪತ್ರಿಕೆ ಜಾಹಿರಾತುಗಳಗಿಂತ ಹೆಚ್ಚಾಗಿ ಚಂದಾದಾರರ ಮೇಲೆ ಅವಲಂಬಿಸಿರುವುದರಿಂದ ಅದು ಆರ್ಥಿಕವಾಗಿ ಇನ್ನೂ ಸ್ವಾವಲಂಬಿಯಾಗಿಲ್ಲ. ಆದುದರಿಂದ ಆರ್ಥಿಕ ಬೆಂಬಲ ನೀಡುವ ಪ್ರಾಯೋಜಕರ ನೆರವಿನ ಅಗತ್ಯವಿದೆ. ಕನಿಷ್ಠ ರೂ. ೫೦೦೦/– ಹಣ ನೀಡಿ ಪ್ರಾಯೋಜಕರಾಗುವವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು. ಹಾಗೆಯೇ, ಅವರು ಸೂಚಿಸುವ ಯಾವುದಾದರೂ ಇಬ್ಬರು ವ್ಯಕ್ತಿಗಳಿಗೆ / ವಿಳಾಸಗಳಿಗೆ ತಲಾ ಮೂರು ವರ್ಷಗಳ ಅವಧಿಗೆ 'ಹೊಸತು' ಪತ್ರಿಕೆಯನ್ನು ಉಚಿತವಾಗಿ ಕಳಿಸಲಾಗುವುದು (ಅಥವಾ ನಾಲ್ಕು ವ್ಯಕ್ತಿಗಳಿಗೆ ತಲಾ ಒಂದು ವರ್ಷ). ಹಿತೈಷಿಗಳು ಈ ರೀತಿ ಪ್ರಾಯೋಜಕರಾಗುವ ಮೂಲಕ ಪತ್ರಿಕೆ ಆರ್ಥಿಕವಾಗಿ ಸದೃಢಗೊಳ್ಳಲು ಸಹಾಯವಾಗುವುದು.

ನಮ್ಮ ಓದುಗರು ಸ್ವತಃ ಪ್ರಾಯೋಜಕರಾಗಬಹುದು ಅಥವಾ ಅಂತಹವರನ್ನು ಗುರುತಿಸಿ ಅವರು ಪ್ರಾಯೋಜಕರಾಗುವಂತೆ ಪ್ರೇರೇಪಿಸಬಹುದು. ಪ್ರಾಯೋಜಕರಾಗಬಹುದಾದ ಸಮಾನಮನಸ್ಕರ ಹೆಸರು, ವಿಳಾಸ ತಿಳಿಸಿದಲ್ಲಿ ನಾವೇ ಅವರನ್ನು ಸಂಪರ್ಕಿಸುತ್ತೇವೆ.

ಈ ನಿಟ್ಟಿನಲ್ಲಿ ನಮ್ಮ ಓದುಗರು ಹೆಚ್ಚಿನ ಮುತುವರ್ಜಿ ವಹಿಸಿ ಪತ್ರಿಕೆಯ ಬೆಳವಣಿಗೆಗೆ ನೆರವಾಗಬೇಕೆಂದು ನಮ್ಮ ಕಳಕಳಿಯ ಮನವಿ.

ಪ್ರಾಯೋಜಕತ್ವದ ರೂ. ೫,೦೦೦ ಮೊಬಲಗನ್ನು 'ಹೊಸತು' ಹೆಸರಿಗೆ ಚೆಕ್ ಅಥವಾ ನಗದು ಮೂಲಕ ಇಲ್ಲವೇ ಕೆನರಾ ಬ್ಯಾಂಕ್, ಮಾಧವನಗರ ಶಾಖೆ, Current A/c No. 0788201015590, IFSC code CNRB0000788 ಇಲ್ಲಿಗೆ ನೇರವಾಗಿ ವರ್ಗಾಯಿಸಬಹುದು.

– ಪ್ರಕಾಶಕ

ಮತ್ತು ರಾಸ್ತ ರೋಕೊ ಚಳವಳಿ, ೧೯೯೧ರಲ್ಲಿ ರಾಸ್ತ ರೋಕೊ ಚಳವಳಿ, ೧೯೯೨ರಲ್ಲಿ ರೈಲ್ ಮತ್ತು ರಾಸ್ತ ರೋಕೊ ಚಳವಳಿ, ೧೯೯೪ರಲ್ಲಿ ರ್‍ಯಾಲಿ, ೧೯೯೪ರಲ್ಲಿ ಭಾರತೀಯ ಕಿಸಾನ್ ಯೂನಿಯನ್‌ನ ಜತೆಗೆ ಡಂಕೆಲ್ ಪ್ರಸ್ತಾವನೆ ವಿರುದ್ಧ ದೆಹಲಿಯಲ್ಲಿ ಬೃಹತ್ ರ್‍ಯಾಲಿ, ೧೯೯೬ರಲ್ಲಿ ಕೆಂಟಕಿ ಚಿಕನ್ ಫ್ರೈಡ್ ಕಂಪೆನಿಯ ಮೇಲೆ ದಾಳಿ, ೧೯೯೬ರಲ್ಲಿ "ಆಪರೇಶನ್ ಕ್ರಿಮೇಶನ್ ಮೊನ್ಸಾಂಟೊ", ೨೦೧೧ರಲ್ಲಿ ಡ್ಯೂಪಾಂಟ್ ಕುಲಾಂತರಿ ಹೊಲಗಳ ಮೇಲೆ ದಾಳಿ, ೨೦೧೮ರಲ್ಲಿ ರೈತ ಸಂಘ ಹರಿದ್ವಾರ್ – ದೆಹಲಿ ಜಾಥದಲ್ಲಿ ಭಾಗಿ ಇತ್ಯಾದಿ.

**ಜಾಗತೀಕರಣ ಮತ್ತು ನವ ರೈತ ಚಳವಳಿ**

ಜಾಗತೀಕರಣ ಮತ್ತು ರೈತರಿಗೆ ಮಾರುಕಟ್ಟೆಯ ಅನಿಯಂತ್ರಿತ ಅವಕಾಶವನ್ನು ಅತ್ಯಂತ ಪ್ರಬಲವಾಗಿ ಪ್ರತಿಪಾದಿಸಿದ್ದು ಮಹಾರಾಷ್ಟ್ರದ ಚಳವಳಿ. ಶರದ್ ಜೋಶಿ ಮೂಲತಃ ಆರ್ಥಿಕ ಉದಾರವಾದಿ. ಆದಕಾರಣ ಅವರು ಕೃಷಿಯ ಮೇಲೆ ರಾಜ್ಯದ ನಿಯಂತ್ರಣವನ್ನು ವಿರೋಧಿಸುತ್ತಾ ಬಂದವರು. ಇದೇ ಕಾರಣಕ್ಕಾಗಿ ಅವರು ವಿಶ್ವ ವ್ಯಾಪಾರ ಸಂಸ್ಥೆ, ಡಂಕೆಲ್ ಪ್ರಸ್ತಾವನೆ ಮತ್ತು ಜಾಗತೀಕರಣವನ್ನು ಪರಿಪೂರ್ಣವಾಗಿ ಬೆಂಬಲಿಸಿದರು. ಅವರ ವಾದ ಇಷ್ಟೇ – ರೈತರಿಗೆ ಅನಿಯಂತ್ರಿತ ಮಾರುಕಟ್ಟೆ ಲಾಭದಾಯಕವಾಗಿರುತ್ತದೆ, ಬಂಡವಾಳಕ್ಕೆ ಮತ್ತು ಪೈಪೋಟಿಗೆ ಅನುವು ಮಾಡಿಕೊಡುತ್ತದೆ, ರೈತರನ್ನು ಬಂಡವಾಳಶಾಹಿ ಅಥವಾ ಶ್ರೀಮಂತ ರೈತರನ್ನಾಗಿಸುತ್ತದೆ. ಈ ನಿಲುವುಗಳಿಂದಾಗಿ ಶೇತ್ಕರಿ ಸಂಘಟನೆ ಯಾವತ್ತೂ ಜಾಗತೀಕರಣವನ್ನು ವಿರೋಧಿಸುವ ಹೋರಾಟಗಳನ್ನು ಮಾಡಲೇ ಇಲ್ಲ. ಮತ್ತೊಂದು ವಿಶೇಷವೆಂದರೆ ಮಹಾರಾಷ್ಟ್ರದ ಚಳವಳಿ ಸಮಾಜವಾದದ ವಿರೋಧಿಯಾಗಿತ್ತು. ಇದು ವ್ಯಕ್ತವಾಗುವುದು ಅದರ ತಾತ್ವಿಕತೆಯಲ್ಲಿ ಹಾಗೂ ರಾಜಕಾರಣದಲ್ಲಿ. ಸಂವಿಧಾನದ ಪ್ರಸ್ತಾವನೆಯಲ್ಲಿರುವ "ಸಮಾಜವಾದ"ವನ್ನು ತೆಗೆದುಹಾಕಲು ಶರದ್ ಜೋಶಿ ರಾಜ್ಯಸಭೆಯಲ್ಲಿ ಖಾಸಗಿ ಮಸೂದೆಯನ್ನು ಮಂಡಿಸಿದ್ದರು. ಸಮಾಜವಾದದ ಕುರಿತು ಅವರ ವಿರೋಧಕ್ಕೆ ಕಾರಣವಿದೆ– ಸಮಾಜವಾದ ಒಂದೆಡೆ ರಾಜಕೀಯ ಶಕ್ತಿಯ ಕೇಂದ್ರೀಕರಣ ಮಾಡುತ್ತದೆ, ಮತ್ತೊಂದೆಡೆ ಆರ್ಥಿಕ, ಉತ್ಪಾದನಾ, ವಿತರಣಾ, ಬಳಕೆ, ಜ್ಞಾನ, ಸಂಸ್ಕೃತಿ, ಇತ್ಯಾದಿ ಕ್ಷೇತ್ರಗಳ ಖಾಸಗೀತನವನ್ನು ನಾಶಮಾಡುತ್ತದೆ.

ಇದಕ್ಕೆ ತೀರ ವಿರುದ್ಧವಾಗಿ ಕಂಡುಬರುವುದು ಕರ್ನಾಟಕ ರೈತ ಹೋರಾಟ. ಜಾಗತೀಕರಣವನ್ನು ಅತ್ಯಂತ ತೀಕ್ಷ್ಣವಾಗಿ ಮತ್ತು ಅತ್ಯಂತ ಶಕ್ತಿಯುತವಾಗಿ ಪ್ರತಿರೋಧಿಸಿದ್ದು ಕರ್ನಾಟಕದ ಚಳವಳಿ. ಉತ್ತರ ಪ್ರದೇಶದ ಚಳವಳಿ ಇದರೊಂದಿಗೆ ಭಾಗಿಯಾಗಿದ್ದರೂ, ಅದರ ಪಾತ್ರ ನಿರ್ಣಾಯಕವಾಗಿರಲಿಲ್ಲ. ಯಾಕೆಂದರೆ ಜಾಗತೀಕರಣದ ತಾತ್ವಿಕ ಚೌಕಟ್ಟನ್ನು, ಕಥನಗಳನ್ನು, ನೆಲೆಗಟ್ಟುಗಳನ್ನು ಮತ್ತದರ ಹಿಂದಿರುವ ದೊಡ್ಡ ಕಾರಸ್ಥಾನಗಳನ್ನು ಬಯಲಿಗೆಳೆಯಲು ಕರ್ನಾಟಕ ಹೋರಾಟದಿಂದ ಮಾತ್ರ ಸಾಧ್ಯವಿತ್ತು. ಆದ ಕಾರಣ ಜಾಗತೀಕರಣವನ್ನು ಕರ್ನಾಟಕ ರೈತ ಹೋರಾಟವು ರೈತ ವಿರೋಧಿಯಾಗಿ, ಐಡೆಂಟಿಟಿ ವಿರೋಧಿಯಾಗಿ, ಜೀವ ವಿರೋಧಿಯಾಗಿ, ಆಹಾರ ಸಂಸ್ಕೃತಿ ವಿರೋಧಿಯಾಗಿ, ಸಮುದಾಯ ವಿರೋಧಿಯಾಗಿ ಚಿತ್ರಿಸಿತ್ತು ಮತ್ತು ಪ್ರತಿರೋಧಿಸಿತ್ತು. ಇದರ ಪ್ರತಿರೋಧ ವಿವಿಧ ರೂಪಗಳಲ್ಲಿ ಅಭಿವ್ಯಕ್ತಗೊಂಡದ್ದು ಸತ್ಯ. ಇದೇ ದಶಕದಲ್ಲಿ ರೈತ ಸಂಘ ಆಹಾರ ಮತ್ತು ಬೀಜಗಳ ರಕ್ಷಣೆಗಾಗಿ ಮತ್ತು ಸಾರ್ವಭೌಮತ್ವಕ್ಕಾಗಿ ಬೀಜ ಸತ್ಯಾಗ್ರಹವನ್ನು ಹಮ್ಮಿಕೊಂಡಿತ್ತು, ಅಮೃತ ಭೂಮಿ ಎಂಬ ಸಂಸ್ಥೆಯನ್ನು ಹುಟ್ಟುಹಾಕಿತ್ತು. ಇದೊಂದು ರೀತಿಯ ಪ್ರಯೋಗಶಾಲೆ, ಇಲ್ಲಿ ಬೀಜಗಳ ಬ್ಯಾಂಕ್, ಸ್ಥಳೀಯ ಔಷಧಿ ಗಿಡಗಳು ಇತ್ಯಾದಿಗಳನ್ನು ಉಳಿಸುವ ಯತ್ನವನ್ನು ನೋಡಬಹುದು.

ಬಹಳ ಮುಖ್ಯವಾಗಿ ಜಾಗತಿಕ ಬಂಡವಾಳವನ್ನು ಪ್ರತಿನಿಧಿಸುವ ಕಂಪೆನಿಗಳಾದ ಕಾರ್ಗಿಲ್, ಮೊನ್ಸಾಂಟೊ ಮತ್ತು ಕೆಂಟಕಿ ಫ್ರೈಡ್ ಚಿಕನ್ ಮೇಲೆ ಹಠಾತ್ ದಾಳಿಯನ್ನು ಮಾಡಿತ್ತು. ಮೊನ್ಸಾಂಟೊ ಕುರಿತಾದ ಅದರ ಚಳವಳಿ "ಆಪರೇಶನ್ ಕ್ರಿಮೇಶನ್ ಮೊನ್ಸಾಂಟೊ" ಒಂದು ಜಾಗತಿಕ ಹೋರಾಟವಾಗಿತ್ತು. ಫ್ರಾನ್ಸ್, ಇಂಡೋನೇಶಿಯಾದಲ್ಲಿ ರೈತರು ಕುಲಾಂತರಿ ಹೊಲಗಳನ್ನು ಸುಟ್ಟುಬಿಟ್ಟಿದ್ದು ವಾಸ್ತವ. ಇದು ರೈತ ಚಳವಳಿಯ ಪ್ರಭಾವವನ್ನು ತೋರಿಸುತ್ತದೆ.

ಇದೇ ದಶಕದಲ್ಲಿ ಬಹುರಾಷ್ಟ್ರೀಯ ಕಂಪೆನಿಗಳು ರಾಷ್ಟ್ರೀಯ ಹೋರಾಟದಲ್ಲಿ ಗಾಂಧಿ ನೀಡಿದ ಕರೆಯಂತೆ "ಭಾರತದಿಂದ ತೊಲಗಿ"ಎಂಬ ಕರೆಯನ್ನು ಕೂಡ ನೀಡಿತ್ತು. ಜಾಗತೀಕರಣದ ವಿರೋಧಿಯಾದ ಮುಂಬೈ ರಸಿಸ್ಟೆಂಟ್ ಎಂಬ ಪ್ರತಿರೋಧ ಹೋರಾಟದೊಂದಿಗೆ ಕೈಜೋಡಿಸಿತ್ತು, ಅಲ್ಲದೇ ಅಂತರರಾಷ್ಟ್ರೀಯ ಚಳವಳಿಯಾದ ಲಾ ವಿಯಾ ಕಂಪೆನ್ ಸಿನಾದ ಅಂಗ ಸಂಸ್ಥೆಯಾಗಿ ಹೋರಾಟವನ್ನು ಜಾಗತಿಕಗೊಳಿಸಿತ್ತು. ಇನ್ನೊಂದು ಸಂಘಟನೆಯಾದ ಪೀಪಲ್ಸ್ ಗ್ಲೋಬಲ್ ಆಕ್ಷನ್‌ನ ಭಾಗವಾಗಿ ಜಾಗತೀಕರಣವನ್ನು ವಿರೋಧಿಸುತ್ತಾ ಬಂತು. ಅದರ ಹೋರಾಟಗಳ ನೆಲೆಗಳು ವಾಸ್ತವವಾಗಿ ಜಾಗತಿಕವಾದವು–ಜಿನೇವಾ, ಪ್ರಾಗ್, ವಾಷಿಂಗ್‌ಟನ್, ಲಂಡನ್, ಫ್ರಾಂಕ್‌ಫರ್ಟ್, ಪ್ಯಾರೀಸ್ ಇತ್ಯಾದಿಗಳಾದವು.

**ಚಳವಳಿ, ರಾಜಕಾರಣ ಮತ್ತು ಸಂದಿಗ್ಧತೆ**

ಮಾರ್ಕ್ಸ್‌ವಾದಿ ಚಿಂತಕ ಮತ್ತು ಹೋರಾಟಗಾರ ಪಿ. ಸಿ. ಜೋಶಿ ಬಹಳ ವರುಷಗಳ ಹಿಂದೆ ಒಂದು ವಾದವನ್ನು ಮಂಡಿಸಿದ್ದರು – ರೈತರು ಚಳವಳಿಗಳನ್ನು ಮಾತ್ರ ಮಾಡಲು ಸಾಧ್ಯ, ರಾಜಕೀಯ ಪಕ್ಷ ಕಟ್ಟಿ ಅಧಿಕಾರವನ್ನು ಪಡೆಯುವುದು ಕಷ್ಟ . ಈ ಮಾತು ನವ ಚಳವಳಿಗಳಿಗೂ ಅನ್ವಯಿಸುತ್ತದೆಯೇ, ಎಂಬ ಪ್ರಶ್ನೆ ಇದೆ.

ವಿಚಿತ್ರವೆಂದರೆ ಎಲ್ಲಾ ಚಳವಳಿಗಳು ಆರಂಭದಲ್ಲಿ ವಾದಿಸಿದ್ದು ತಮ್ಮದು ರಾಜಕೀಯೇತರ ಚಳವಳಿಗಳು ಎಂದು. ರಾಜಕಾರಣಕ್ಕೂ ತಮಗೂ ಏನೂ ಸಂಬಂಧವಿಲ್ಲ, ರಾಜಕೀಯ ಅಧಿಕಾರ ರೈತರ ಗುರಿಯಲ್ಲ ಇತ್ಯಾದಿ. ಈ ವಿಷಯಕ್ಕಾಗಿಯೇ ಚಳವಳಿಯಲ್ಲಿ ಭಿನ್ನಾಭಿಪ್ರಾಯ ಸಹಜವಾಗಿ ಮೂಡಿತ್ತು.



ವಾಸ್ತವವಾಗಿ ಎಲ್ಲಾ ಚಳವಳಿಗಳು ಅಂತಿಮವಾಗಿ ರಾಜಕೀಯವಾಗಿರುತ್ತವೆ – ಯಾಕೆಂದರೆ ಅವರ ಬೇಡಿಕೆಗಳು, ಹೋರಾಟ ಮತ್ತು ಪ್ರತಿರೋಧಗಳು ಅಂತಿಮವಾಗಿ ರಾಜಕೀಯದ ಸುತ್ತ ಸುತ್ತಾಡುತ್ತಾ ಇರುತ್ತವೆ. ಆರಂಭದಿಂದಲೂ ತನ್ನ ಹೋರಾಟ ಗಳನ್ನು ರಾಜಕೀಯೇತರ ಹೋರಾಟವೆಂದು ಚಿತ್ರಿಸಿದರೂ, ಉತ್ತರ ಪ್ರದೇಶದ ಹೋರಾಟ ಅಂತಿಮವಾಗಿ ರಾಜಕೀಯವಾಗಿರುತ್ತಿತ್ತು. ಯಾಕೆಂದರೆ ಅದರ ಸಾಮಾಜಿಕ ತಳಹದಿಯಾದ ಖಾಪ್ ಪಂಚಾಯತ್‌ಗಳು ತೆಗೆದುಕೊಳ್ಳುವ ನಿರ್ಣಯಗಳು, ಸರಕಾರಗಳನ್ನು ವಿರೋಧಿಸುವ ಸಂದರ್ಭದಲ್ಲಿ ಅದು ಉಪಯೋಗಿಸುವ ಭಾಷೆಗಳು ರಾಜಕೀಯ ಪ್ರೇರೇಪಿತವಾಗಿರುತ್ತಿತ್ತು. ಒಂದೇ ಒಂದು ಅಪವಾದವೆಂದರೆ ಚುನಾವಣಾ ರಾಜಕಾರಣದಲ್ಲಿ ಪಕ್ಷವನ್ನು ಕಟ್ಟಿ (ಒಂದೆರಡು ವ್ಯಕ್ತಿಗಳನ್ನು ವೈಯಕ್ತಿಕ ನೆಲೆಗಳಲ್ಲಿ ಹೊರತುಪಡಿಸಿದರೆ), ಚುನಾವಣೆಗೆ ಸ್ಪರ್ಧಿಸುವ ರಾಜಕಾರಣವನ್ನು ಮಾಡಲಿಲ್ಲ. ಇದನ್ನು ಮಾಡಿದ್ದು ಕರ್ನಾಟಕ ಮತ್ತು ಮಹಾರಾಷ್ಟ್ರದ ರೈತ ಚಳವಳಿಗಳು.

ಮಹಾರಾಷ್ಟ್ರ ಮತ್ತು ಕರ್ನಾಟಕ ರೈತ ಸಂಘ ರಾಜಕೀಯಕ್ಕೆ ಧುಮುಕಲು ಪಕ್ಷವನ್ನೇ ಕಟ್ಟಿದವು, ಶರದ್ ಜೋಶಿ ಸ್ವತಂತ್ರ ಭಾರತ ಪಕ್ಷವನ್ನು ಕಟ್ಟಿದರು. ಈ ಪಕ್ಷದ ಪ್ರಣಾಳಿಕೆ ಮೂರು ವಿಷಯಗಳಿಗೆ ಒತ್ತು ಕೊಟ್ಟಿತ್ತು. ರೈತರಿಗೆ ಮಾರುಕಟ್ಟೆಯೊಳಗೆ ಯಾವುದೇ ನಿರ್ಬಂಧಗಳಿಲ್ಲದೆ ಪ್ರವೇಶಿಸುವ ಹಕ್ಕು, ಕೃಷಿ ಮತ್ತು ವಿದ್ಯುಚ್ಛಕ್ತಿ ಮೇಲಿನ ಸಾಲದ ಮನ್ನಾ, ಸ್ವಾಧೀನಪಡಿಸಿದ ಭೂಮಿಯನ್ನು ಮತ್ತೊಮ್ಮೆ ಪಡೆಯುವ ಹಕ್ಕನ್ನು ನೀಡುವುದು. ಅಲ್ಲದೇ ಶರದ್ ಜೋಶಿ ರಾಜ್ಯ ಸಭೆಯ ಸದಸ್ಯರು ಕೂಡ ಆಗಿದ್ದರು. ವಿಚಿತ್ರವೆಂದರೆ ಅತ್ಯಂತ ಶಕ್ತಿಶಾಲಿ ಮಹಿಳಾ ಸಂಘಟನೆ ಶೇತ್ಕರಿ ಮಹಿಳಾ ಅಗಾಢಿಯ ಸ್ಥಾಪಕರಾಗಿ ಮಹಿಳೆಯರ ಪರವಾಗಿ ಲಕ್ಷ್ಮಿ ಮುಕ್ತಿ ಮತ್ತು ಖರಜ್; ಸಾಲ ಮುಕ್ತಿ ಹೋರಾಟಗಳನ್ನು ಮಾಡಿದ್ದ ಶರದ್ ಜೋಶಿ ರಾಜ್ಯಸಭಾ ಸದಸ್ಯರಾದ ಮೇಲೆ ಮಹಿಳೆಯರಿಗೆ ಪಾರ್ಲಿಮೆಂಟ್ ಮತ್ತು ಶಾಸನ ಸಭೆಗಳಲ್ಲಿ ೩೩ ಶೇಕಡ ಮೀಸಲಾತಿಯನ್ನು ವಿರೋಧಿಸಿದರು (೨೦೧೦). ಇದು ವೈರುಧ್ಯವೂ ಹೌದು. ೨೦೧೧ರ ಸುಮಾರಿಗೆ ಶೇತ್ಕರಿ ಸಂಘಟನೆ ಕಾಂಗ್ರೆಸ್ಸೇತರ ವಿರೋಧ ಪಕ್ಷಗಳಿಗೆ ಬೆಂಬಲ ಸೂಚಿಸಿತ್ತು. ವಿಚಿತ್ರವೆಂದರೆ ಸಂಘಟನೆಯ ಕೆಲವು ಸದಸ್ಯರು ಚುನಾವಣಾ ರಾಜಕಾರಣದಲ್ಲಿ ಅಂದಿನ ಆಳುವ ಪಕ್ಷದ ಅಭ್ಯರ್ಥಿಗಳಾಗಿ ಕಣಕ್ಕಿಳಿದಿದ್ದರು, ಧುಲೆ ರ್‍ಯಾಲಿಯಲ್ಲಿ ವಿವಿಧ ಪಕ್ಷಗಳು ಭಾಗವಹಿಸಿದ್ದವು.

ಕರ್ನಾಟಕದ ರೈತ ಚಳವಳಿ ಮಹಾರಾಷ್ಟ್ರದ ಚಳವಳಿಯಿಂದ ಸಂಪೂರ್ಣವಾಗಿ ವಿಭಿನ್ನ ವಾಗಿರಲಿಲ್ಲ. ೧೯೮೩ರ ಚುನಾವಣೆ ಸಂದರ್ಭದಲ್ಲಿ ಅದು ಪಕ್ಷಾತೀತವಾಗಿ ಮತದಾರರ ವೇದಿಕೆಯ ಪ್ರಯೋಗವನ್ನು ಮಾಡಿತ್ತು. ಎಲ್ಲಾ ಮತದಾರರ ವೇದಿಕೆಯ ಅಭ್ಯರ್ಥಿಗಳು ಸೋತುಹೋದರು, ಠೇವಣಿಗಳನ್ನು ಕಳೆದುಕೊಂಡರು. ಈ ಚುನಾವಣಾ

**ಅಭಿನಂದನೆಗಳು...**

ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಟ್ರಸ್ಟ್‌ನವರು ನೀಡುವ ೨೦೧೯ನೇ ಸಾಲಿನ 'ಮಾಸ್ತಿ ಪ್ರಶಸ್ತಿ'ಯು ಲೇಖಕರಾದ ಡಾ॥ ಕೆ. ಮರುಳಸಿದ್ದಪ್ಪ, ಬೊಳುವಾರು ಮಹಮದ್ ಕುಂಞಿ, ಈಶ್ವರ ಚಂದ್ರ, ಸವಿತಾ ನಾಗಭೂಷಣ ಮತ್ತು ಡಾ॥ ಮೊಗಳ್ಳಿ ಗಣೇಶ್ ಅವರಿಗೆ ಲಭಿಸಿದೆ. ಇವರೆಲ್ಲರಿಗೂ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ರಾಜಕಾರಣ ರೈತ ಚಳವಳಿಯ ಆಂತರಿಕ ಘರ್ಷಣೆಗೆ ಮತ್ತು ವಿಭಜನೆಗೆ ಕಾರಣವಾಯಿತು. ಅಂದಿನ ಕಾಂಗ್ರೆಸ್ ಸರಕಾರ ಅಧಿಕಾರವನ್ನು ಕಳೆದು ಕೊಳ್ಳುವುದರ ಹಿಂದೆ ರೈತರ ಸಿಟ್ಟು ಅಡಕವಾಗಿತ್ತು. ರೈತ ಸಂಘ ಮುಂದೆ ತನ್ನದೇ ಆದ ಪಕ್ಷ "ಕನ್ನಡ ದೇಶ"ವನ್ನು ಹುಟ್ಟುಹಾಕಿತ್ತು ಮತ್ತು ಚುನಾವಣಾ ಕಣದಲ್ಲಿ ಸ್ಪರ್ಧಿಸಿತ್ತು. ಇಲ್ಲಿಯೂ ಕೂಡ ಅದು ಸೋತಿತ್ತು. ರೈತ ಸಂಘದ ಹೆಸರಿನಲ್ಲೂ ಕೂಡ ಚುನಾವಣಾ ರಾಜಕೀಯದಲ್ಲಿ ಭಾಗವಹಿಸಿತ್ತು. ಅಲ್ಲಿಯೂ ಸೋತಿತ್ತು. ೨೦೧೪ರಲ್ಲಿ ಸರ್ವೋದಯ ಪಕ್ಷದ ಭಾಗವಾಗಿ ಚುನಾವಣೆಯಲ್ಲಿ ಸ್ಪರ್ಧಿಸಿತ್ತು. ವಾಸ್ತವವಾಗಿ ಚುನಾವಣಾ ರಾಜಕಾರಣದಿಂದ ಅದಕ್ಕೆ ಲಾಭಕ್ಕಿಂತಲೂ ಹೆಚ್ಚು ನಷ್ಟವಾದದ್ದು ದಿಟ. ಕೇವಲ ಮೂವರು ರೈತ ಮುಖಂಡರು ಮಾತ್ರ ಶಾಸನ ಸಭೆಗೆ ಹೋಗಲು ಸಾಧ್ಯವಾಯಿತು. ರೈತರ ಸರಕಾರವನ್ನು ಕಟ್ಟುವ ಕನಸು ನನಸಾಗಲಿಲ್ಲ. ಈ ಪ್ರಕ್ರಿಯೆಯಲ್ಲಿ ಅದು ತನ್ನ ಸಾಮಾಜಿಕ ತಳಹದಿ ಗಳನ್ನು ಮತ್ತು ನೆಲೆಗಳನ್ನು ಕಳೆದುಕೊಳ್ಳುತ್ತಾ ಹೋಯಿತು. ಚಳವಳಿಗಳು ಮತಗಳನ್ನು ತರಲಿಲ್ಲ, ಅಧಿಕಾರವನ್ನು ನೀಡಲಿಲ್ಲ. ಪಿ. ಸಿ. ಜೋಶಿ ಹೇಳಿದ ಮಾತು ಸುಳ್ಳಾಗಲಿಲ್ಲ.

**ಜಾತಿ ಮತ್ತು ಚಳವಳಿ**

ನವ ರೈತ ಚಳವಳಿಗಳನ್ನು ಜಾತಿಯಾಚೆಯ ಚೌಕಟ್ಟಿನ ವರ್ಗ ಹೋರಾಟವೆಂದು ಪ್ರತಿಪಾದಿಸ ಲಾಗುತ್ತದೆ. ಯಾಕೆಂದರೆ ಅವುಗಳು ಎಲ್ಲಾ ವರ್ಗಗಳನ್ನು ಮತ್ತು ಅವುಗಳ ಆಸಕ್ತಿಯನ್ನೂ ಒಳಗೊಂಡಿರುವ ಹೋರಾಟಗಳು ಎಂದು ವಾದಿಸಲಾಗುತ್ತಿದೆ. ಮಹಾರಾಷ್ಟ್ರದ ಹೋರಾಟ ಇದೇ ಕಾರಣಕ್ಕಾಗಿ ತುಲನಾತ್ಮಕ ಬೆಲೆಗಳನ್ನು ಪ್ರತಿಪಾದಿಸುತ್ತದೆ. ಅದರ ಪ್ರಕಾರ ತುಲನಾತ್ಮಕ ಬೆಲೆಗಳ ಪರಿಣಾಮಗಳು ಎಲ್ಲಾ ವರ್ಗದ ಮೇಲಾಗುತ್ತವೆ – ಕೃಷಿ ಕಾರ್ಮಿಕರ ಕೂಲಿಯಲ್ಲಿ ಗಣನೀಯವಾದ ಏರಿಕೆಯಾಗುತ್ತದೆ. ಮಹಾರಾಷ್ಟ್ರ ಚಳವಳಿಯ ತಳಹದಿಯಲ್ಲಿ ಮರಾಠರು ಇದ್ದರೂ, ಅದು ಜಾತಿ ಹೋರಾಟವಲ್ಲವೆಂದು ಪ್ರತಿಪಾದಿಸುತ್ತದೆ.

ಕರ್ನಾಟಕ ರೈತ ಹೋರಾಟ ಇದಕ್ಕಿಂತ ವಿಭಿನ್ನವೇನಲ್ಲ. ಎರಡು ಬಲಾಢ್ಯ ಜಾತಿಗಳಾದ ಲಿಂಗಾಯತರು ಮತ್ತು ಒಕ್ಕಲಿಗರು ಇದರ ಸಾಮಾಜಿಕ ತಳಹದಿಗಳಾದರೂ, ಚಳವಳಿ ಯಾವುದೇ ಒಂದು ಜಾತಿಯೊಂದಿಗೆ ಗುರುತಿಸಿ ಕೊಳ್ಳುವುದಿಲ್ಲ. ಅದರ ಎಲ್ಲಾ ಕಥನಗಳು "ವರ್ಗ"ದ ಕಥನಗಳಾಗಿದ್ದವು – ಬೆಂಬಲ ಬೆಲೆ, ಜಾಗತಿಕ ಬಂಡವಾಳವನ್ನು ಎದುರಿಸುವ ಸಂದರ್ಭದಲ್ಲಿ ಮತ್ತು ಪರ್ಯಾಯಗಳನ್ನು ಕಟ್ಟುವ ಸಂದರ್ಭದಲ್ಲಿ ಅದು ಉಪಯೋಗಿಸಿದ ಭಾಷೆ "ವರ್ಗ". ದುರಂತವೆಂದರೆ ಚಳವಳಿಯಲ್ಲಿ ಕೃಷಿಕಾರ್ಮಿಕರು, ಹಿಂದುಳಿದ ಜಾತಿಗಳು ಮತ್ತು ದಲಿತರು ಭಾಗ ವಹಿಸಿದ್ದು ಮಾತ್ರ ಕಡಿಮೆ. ರೈತ ಚಳವಳಿಯ ಸಾಮಾಜಿಕ ತಳಹದಿಗಳಾದ ಬಲಾಢ್ಯ ಜಾತಿಗಳು ದಲಿತರ, ಹಿಂದುಳಿದ ವರ್ಗಗಳ ಪ್ರಾಥಮಿಕ ವೈರುಧ್ಯಗಳಾಗಿದ್ದು ಇದಕ್ಕೆ ಕಾರಣ. ಇಷ್ಟೆಲ್ಲಾ ಇದ್ದರೂ ಚಳವಳಿಯ ಭಾಷೆ ಮಾತ್ರ "ವರ್ಗ" ಭಾಷೆಯಾಗಿಯೇ ಉಳಿದದ್ದು ದಿಟ.

ದುರಂತವೆಂದರೆ, ಜಾತಿಯ ಗಟ್ಟಿತನ, ಜಾತಿಯ ಭಾಷೆಗಳು ಅಭಿವ್ಯಕ್ತಗೊಳ್ಳುವುದು ಉತ್ತರ ಪ್ರದೇಶದ ಹೋರಾಟದಲ್ಲಿ. ಮಹೇಂದ್ರ ಸಿಂಗ್ ತಿಕಾಯತ್ ಜಾತಿ ಪಂಚಾಯತ್‌ನ – ಬಲ್ಯನ್ ಖಾಪ್ ಪಂಚಾಯತ್‌ನ ಮುಖ್ಯಸ್ಥ ಚೌಧುರಿ. ಈ ಸ್ಥಾನ ತಲೆತಲಾಂತರವಾಗಿ ತಿಕಾಯತ್ ಕುಟುಂಬಕ್ಕೆ ಬಂದಿದೆ. ಈ ಖಾಪ್ ಪಂಚಾಯತ್ ರೈತರನ್ನು ಒಗ್ಗೂಡಿಸುವ ಒಂದು ಸಾಧನವಾಯಿತು ಮಾತ್ರ ವಲ್ಲದೇ ಹೋರಾಟದ ತಳಹದಿಯೂ ಆಯಿತು. ಆದಕಾರಣ ತಿಕಾಯತ್ ಒಬ್ಬ ರೈತ ಹೋರಾಟಗಾರ ನಲ್ಲದೆ ಒಬ್ಬ ಜಾತಿಯ ವ್ಯಕ್ತಿಯಾಗಿ ಕಂಡುಬರುತ್ತಾರೆ.

ಈ ಖಾಪ್ ಪಂಚಾಯತ್ ನಿಂತಿರುವುದೇ "ಭೈಚಾರ" – ಸಹೋದರತ್ವ ಮತ್ತು ಗೋತ್ರಗಳ ಆಧಾರದ ಮೇಲೆ. ಸ್ವಗೋತ್ರ ಮದುವೆ ಇಲ್ಲಿ ನಿಷಿದ್ಧ. ಪಾರ್ಲಿಮೆಂಟ್ ಸ್ವಗೋತ್ರ ಮದುವೆಯನ್ನು ಶಾಸನಬದ್ಧಗೊಳಿಸಲು ಮುಂದಾದಾಗ ಅದನ್ನು ತೀವ್ರವಾಗಿ ವಿರೋಧಿಸಿದ್ದು ಇದೇ ಕಿಸಾನ್ ಯೂನಿಯನ್. ಪಾರ್ಲಿಮೆಂಟಿಗೆ ಘೇರಾವೊ ಮಾಡಲು ತಿಕಾಯತ್ ಬಯಸಿದ್ದರು. ವಿಚಿತ್ರವೆಂದರೆ ಮಾಜಿ ಮುಖ್ಯಮಂತ್ರಿ ಮಾಯಾವತಿ ಕುರಿತಾದ ಅವರ ಸಾರ್ವಜನಿಕ ಅವಹೇಳನ ಜಾತಿ ಆಧಾರಿತವಾಗಿತ್ತು. ವಾಸ್ತವವಾಗಿ ಭಾರತೀಯ ಕಿಸಾನ್ ಯೂನಿಯನ್ನಿನ ತಳಹದಿಗಳು ಇದ್ದದ್ದು ಉತ್ತರ ಪ್ರದೇಶದ ಬಲಾಢ್ಯ ಜಾತಿಯಾದ ಜಾಟರಲ್ಲಿ. ಆದಕಾರಣ ಅದು ಜಾಟರ ಚಳವಳಿ ಎಂಬುದು ವಾಸ್ತವ.

**ಅಭಿವೃದ್ಧಿ ಮತ್ತು ರೈತರ ಐಡೆಂಟಿಟಿ**

ಮಹಾರಾಷ್ಟ್ರ ಮತ್ತು ಕರ್ನಾಟಕದ ರೈತ ಹೋರಾಟದಲ್ಲಿ ಒಂದು ಸಾಮ್ಯತೆ ಇದೆ. ರೈತರ ಸಾಲದ ಬಗ್ಗೆ ಮಾತು ಬಂದಾಗಲೆಲ್ಲಾ ಅವರಿಬ್ಬರೂ ರೈತರ ಸಾಲ ಸರಕಾರ ನಿಯೋಜಿತ ಕೃತಕ



ಸಾಲವೆಂದು ವಾದಿಸುತ್ತವೆ. ಅವುಗಳ ಪ್ರಕಾರ ಗ್ರಾಮೀಣ ಪ್ರದೇಶ ಮತ್ತು ಬಡತನಕ್ಕೆ ಅವೈಜ್ಞಾನಿಕ ಬೆಂಬಲ ಬೆಲೆ ಮತ್ತು ಅವ್ಯಾಹತವಾಗಿ ನಡೆಯುತ್ತಿರುವ ಗ್ರಾಮೀಣ ಪ್ರದೇಶದ ಶೋಷಣೆ ಕಾರಣಗಳು. ಈ ಶೋಷಣೆಯನ್ನು ಕರ್ನಾಟಕ ಚಳವಳಿ ಈ ರೀತಿಯ ಸ್ಲೋಗನ್‌ಗಳ ಮುಖಾಂತರ ಜನಪ್ರಿಯಗೊಳಿಸಿತ್ತು – "ಕೋಳಿ ನಮ್ಮದು ಮೊಟ್ಟೆ ಯಾರದೋ? ದನ ನಮ್ಮದು ಹಾಲು ಯಾರದೋ?" ಇತ್ಯಾದಿ. ವಾಸ್ತವವಾಗಿ ಭಾರತದ ಅಭಿವೃದ್ಧಿಯ ಕೊರತೆಗೆ ಎರಡು ಕಾರಣಗಳೆಂದು ಕರ್ನಾಟಕ ರೈತ ಹೋರಾಟ ವಾದಿಸುತ್ತದೆ: ೧೯೮೦ರ ದಶಕದಲ್ಲಿ ವಸಾಹತುಶಾಹಿಯ ಪಳೆಯುಳಿಕೆಗಳು ಬಡಕಲು ಬಂಡವಾಳಕ್ಕೆ ಕಾರಣ, ಅದಕ್ಕೆ ಪರ್ಯಾಯವಾಗಿ "ಗಾಂಧಿ" ಮತ್ತು "ಖಾದಿ ಕರ್ಟನ್"ಅನ್ನು ವಾದಿಸಿತ್ತು. ಎರಡನೆಯದಾಗಿ, ಅಂತರರಾಷ್ಟ್ರೀಯ ಬಂಡವಾಳ, ಅಂತರರಾಷ್ಟ್ರೀಯ ಸಂಸ್ಥೆಗಳು ಭಾರತದ ಬಡತನಕ್ಕೆ, ಅಭಿವೃದ್ಧಿ ಕೊರತೆಗೆ ಕಾರಣ – ಇದಕ್ಕಾಗಿ ಅಂತರರಾಷ್ಟ್ರೀಯ ಬಂಡವಾಳ, ಸಂಸ್ಥೆಗಳೊಂದಿಗೆ ನೇರ ಮುಖಾಮುಖಿ, ಪ್ರತಿರೋಧ ಮತ್ತು ಅದರ ನಾಶವನ್ನು ಬಯಸುತ್ತದೆ. ಇದಕ್ಕೆ ಪೂರಕವೆಂಬಂತೆ ಬಂಡವಾಳಶಾಹಿಯ ಶೋಷಣೆಗಳಿಲ್ಲದ, ರೈತರ ಮತ್ತು ಕೆಳಸ್ತರ ವರ್ಗದ ಐಡೆಂಟಿಟಿಯನ್ನು ಉಳಿಸಿಕೊಳ್ಳುವ ಪರ್ಯಾಯ ಜಗತ್ತನ್ನು ಕಲ್ಪಿಸುತ್ತದೆ. ಈ ವಾದದಲ್ಲಿ ತೀವ್ರತರ ಮಾರ್ಕ್ಸ್‌ವಾದವನ್ನು ನೋಡಬಹುದು. ಕರ್ನಾಟಕ ರೈತ ಹೋರಾಟದ ತಾತ್ವಿಕ ನಿಲುವುಗಳು ಗಾಂಧಿವಾದದಿಂದ ತೀವ್ರತರ ಮಾರ್ಕ್ಸ್‌ವಾದಕ್ಕೆ ವಾಲಿದ್ದು ನಿಚ್ಚಳ.

ಮಹಾರಾಷ್ಟ್ರ ಚಳವಳಿ ಶೋಷಕ-ಶೋಷಣೆಯ ಸಂಬಂಧಗಳನ್ನು "ಇಂಡಿಯಾ ವರ್ಸಸ್ ಭಾರತ" ಎಂಬ ಪರಿಕಲ್ಪನೆಯಲ್ಲಿ ವಿಶ್ಲೇಷಿಸಿತ್ತು. "ಭಾರತ ಎಂಬುದು ಒಂದು ನಂಬಿಕೆಯ ಪರಿಕಲ್ಪನೆ– ಅದು ಬಹುಮುಖ್ಯವಾಗಿ ಹಳ್ಳಿಗಳನ್ನು, ಗ್ರಾಮೀಣ ಪ್ರದೇಶಗಳನ್ನು, ರೈತರನ್ನು ಪ್ರತಿನಿಧಿಸುತ್ತದೆ. ಅದರ ಪ್ರಕಾರ, ಬ್ರಿಟಿಷರ ನಿರ್ಗಮನದ ನಂತರವೂ ಭಾರತದ ಶೋಷಣೆ ಕಡಿಮೆಯಾಗಿಲ್ಲ, ನಿರಂತರವಾಗಿ ಸಾಗುತ್ತಿದೆ. ವಿಚಿತ್ರವೆಂದರೆ ಭಾರತದ ಶೋಷಕರನ್ನು ಅದು "ಇಂಡಿಯಾ" ಪರಿಕಲ್ಪನೆಯಲ್ಲಿ ನೋಡುತ್ತದೆ. ದೊಡ್ಡ ದೊಡ್ಡ ಕೈಗಾರಿಕೆಗಳು, ನಗರ ಮತ್ತು ಅಂತರರಾಷ್ಟ್ರೀಯ ಸಾಮ್ರಾಜ್ಯಶಾಹಿ, ಬಂಡವಾಳಶಾಹಿ, ಇತ್ಯಾದಿ ಈ ಇಂಡಿಯಾವನ್ನು ಪ್ರತಿನಿಧಿಸುತ್ತವೆ. ಅವು ಶೋಷಿಸುವ ರೂಪಕಗಳು ಮಾತ್ರ ಬೇರೆ ಬೇರೆ. – ಅವೈಜ್ಞಾನಿಕ ಬೆಲೆ ನಿಗದಿ, ಅವೈಜ್ಞಾನಿಕ ಸಬ್ಸಿಡಿ, ವ್ಯಾಪಾರ ನಿಯಮಗಳಲ್ಲಿ ಬದಲಾವಣೆ, ಅಧಿಕ ಉತ್ಪನ್ನದ ಲೂಟಿ ಇತ್ಯಾದಿಗಳ ಮೂಲಕ ಶೋಷಿಸುತ್ತದೆ, ವಾಸ್ತವವಾಗಿ ಇಂಡಿಯಾ ಎಂಬ ಪರಿಕಲ್ಪನೆ ಭಾರತದೊಳಗೆ ಕೂಡ ಇರಬಹುದು – ಆಶ್ಚರ್ಯವಿಲ್ಲ. ಅದು ಹಳ್ಳಿಗಳ ಮಧ್ಯೆ ಸ್ಥಾಪಿತವಾಗುವ ಸಹಕಾರಿ ಸಕ್ಕರೆ ಕಾರ್ಖಾನೆ, ಬಟ್ಟೆ ಗಿರಣಿಗಳ ಮೂಲಕ ಇರಬಹುದು. ಇದನ್ನು ಆಂತರಿಕ ವಸಾಹತುಶಾಹಿ ಎಂದು ಶೇತ್ಕರಿ ಸಂಘಟನೆ ಕರೆಯುತ್ತದೆ. ಈ ವಾದ ಸಂಪೂರ್ಣವಾಗಿ ಹೊಸತಾಗಿರಲಿಲ್ಲ. ಈ ಹಿಂದೆ ಮಾರ್ಕ್ಸ್‌ವಾದಿ ಚಿಂತಕಿ ರೋಜಾ ಲುಕ್ಸೆಂಬರ್ಗ್ ವಾದಿಸಿದ್ದರು. ಆದರೆ ಇಲ್ಲಿ ಇಡೀ ಶೋಷಣೆಯ ಚಕ್ರವ್ಯೂಹವನ್ನು ಭೇದಿಸಲು ಅದು ವಾದಿಸಿದ್ದು ಮಾತ್ರ ಬೆಂಬಲ ಅಥವಾ ವೈಜ್ಞಾನಿಕ ಬೆಲೆ. ಬೆಂಬಲ ಬೆಲೆಯನ್ನು ವಾದಿಸಲು ಅದು ಏಳು ಕಾರಣಗಳನ್ನು ನೀಡುತ್ತದೆ. ಅದರ ಪ್ರಕಾರ ವೈಜ್ಞಾನಿಕ ಬೆಂಬಲ ಬೆಲೆ ಕೃಷಿಯಲ್ಲಿ ಬಂಡವಾಳವನ್ನು ವೃದ್ಧಿಸುತ್ತದೆ, ಕೃಷಿ ಕಾರ್ಮಿಕರಿಗೆ ಕೂಲಿ ಮತ್ತು ಬೇಡಿಕೆಗಳನ್ನು ಹೆಚ್ಚಿಸುತ್ತದೆ, ಇದರಿಂದ ವಿವಿಧ ಕ್ಷೇತ್ರಗಳ ಅಭಿವೃದ್ಧಿಯಾಗುತ್ತದೆ, ಉದ್ಯೋಗಗಳ ಸೃಷ್ಟಿ ಯಾಗುತ್ತದೆ, ಕೃಷಿಯಲ್ಲಿ ಹೊಸ ತಾಂತ್ರಿಕತೆಯನ್ನು ಅಳವಡಿಸಲು ಸಾಧ್ಯವಾಗುತ್ತದೆ, ವ್ಯಾಪಾರದ ವೃದ್ಧಿ ಕೂಡ ಆಗುತ್ತದೆ.

ಇದೆಲ್ಲದರ ಅರ್ಥ ಮಹಾರಾಷ್ಟ್ರದ ಚಳವಳಿ ಬಂಡವಾಳಶಾಹಿ ವಿರೋಧಿಯಾಗಿತ್ತು ಎಂಬ ಅರ್ಥವಲ್ಲ. ಅದು ಬಂಡವಾಳಶಾಹಿಯನ್ನು ಒಂದೆಡೆ ವಿಮರ್ಶಿಸುತ್ತಲೇ ಅದರ ಪರವಾಗಿ ವಾದಿಸುತ್ತಾ ಬಂತು. ಉದಾರವಾದ ಮತ್ತು ಜಾಗತೀಕರಣವನ್ನು ಬೆಂಬಲಿಸುವುದರಲ್ಲಿ ಈ ರಾಜಕಾರಣ ಕಂಡು ಬರುತ್ತದೆ. ಅದು ಜಾಗತೀಕರಣವನ್ನು ಪ್ರತಿಪಾದಿಸಲು ಕಾರಣವಿತ್ತು. ಜಾಗತೀಕರಣವು ರೈತರಿಗೆ ಜಾಗತಿಕ ಮಾರುಕಟ್ಟೆಯೊಳಗೆ ಹೋಗಲು ಅನುವು ಮಾಡುವ ಕಾರಣ ರೈತರು ಬಂಡವಾಳಶಾಹಿಗಳಾಗುವುದರಲ್ಲಿ ಅನುಮಾನವಿಲ್ಲ. ಅಲ್ಲದೇ ಜಾಗತೀಕರಣವು ರೈತರ ಮೂಲಭೂತ ಸಮಸ್ಯೆಗಳಾದ ಬಡತನ, ಹಸಿವು, ಇತ್ಯಾದಿಗಳಿಗೆ ಪರಿಹಾರ ನೀಡುವುದರಲ್ಲಿ ಅನುಮಾನ ಗಳಿಲ್ಲ, ಆದಕಾರಣವೇ ಇದು ನೆಹರೂ ಪರಂಪರೆಯ ಸಮಾಜವಾದವನ್ನು ಟೀಕಿಸುತ್ತಾ ಹೋಯಿತು. ಸಮಾಜವಾದಕ್ಕೆ ಏಕೈಕ ಪರ್ಯಾಯವೆಂದರೆ "ಆಧುನಿಕ ಬಂಡವಾಳಶಾಹಿ" ಎಂದೆಲ್ಲಾ ಶೇತ್ಕರಿ ಸಂಘಟನೆ ಪ್ರತಿಪಾದಿಸುತ್ತಾ ಹೋಯಿತು. ಒಂದೆಡೆ ಅದು "ಭಾರತ-ಇಂಡಿಯಾ" ಪರಿಕಲ್ಪನೆಯನ್ನು ಪ್ರತಿಪಾದಿಸುತ್ತಾ, ಮತ್ತೊಂದೆಡೆ ಜಾಗತೀಕರಣವನ್ನು ಪ್ರತಿಪಾದಿಸುತ್ತಾ ಹೋಗುವುದರಲ್ಲಿ ಅದರ ವಿರೋಧಾಭಾಸ ಅಡಗಿದೆ ಎಂದರೂ ತಪ್ಪಲ್ಲ.

ದುರಂತವೆಂದರೆ ಉತ್ತರ ಪ್ರದೇಶದ ಭಾರತೀಯ ಕಿಸಾನ್ ಯೂನಿಯನ್‌ಗೆ ಈ ರೀತಿಯ ಗೊಂದಲ ಗಳಿರಲಿಲ್ಲ, ಅದು ಪ್ರಾರಂಭದಿಂದಲೇ ತನ್ನನ್ನು ತಾನು 'ಗ್ರಾಮೀಣ ಚಳವಳಿ', 'ಹಳ್ಳಿಯ ಚಳವಳಿ' ಎಂದೆಲ್ಲಾ ಚಿತ್ರಿಸುತ್ತಾ ಹೋಯಿತು. ತನ್ನದೇ ತಾತ್ವಿಕ ಚಿಂತನೆಗಳ ಚೌಕಟ್ಟಿನೊಳಗೆ ಚಳವಳಿಯನ್ನು ಪ್ರತಿಪಾದಿಸುತ್ತಾ ಹೋಯಿತು, ಗಾಂಧಿ ಕೂಡ ಅದರ ಭಾಷೆಯಲ್ಲಿ ಇರಲಿಲ್ಲ. ಅದು ಉಪಯೋಗಿಸಿದ ಭಾಷೆ ಅಂತಿಮವಾಗಿ ಗ್ರಾಮ್ಯವಾಗಿತ್ತು.

ಇವೆಲ್ಲದರ ನಡುವೆ ಎರಡು ಪ್ರಶ್ನೆಗಳಿವೆ: ರೈತ ಚಳವಳಿಗಳ ಕಾಲ ಮುಗಿಯಿತೇ? ಅಥವಾ ಅವುಗಳು ಸೋತುಹೋದವೇ? ಚಳವಳಿಗಳಿಗೆ ಕೆಲವು ಸಂದರ್ಭಗಳಲ್ಲಿ ಹಿನ್ನಡೆಯಾದದ್ದು ಸತ್ಯ. ಅವುಗಳು ರೈತರ ಆತ್ಮಹತ್ಯೆಯನ್ನು ತಡೆಯಲು ವಿಫಲವಾದದ್ದು ಅಷ್ಟೇ ದಿಟ. ಆದರೆ ಚಳವಳಿಗಳ ಕಾಲ ಮುಗಿದಿಲ್ಲ, ಅವುಗಳು ಸಂಪೂರ್ಣವಾಗಿ ನೆಲ ಕಚ್ಚಿಲ್ಲ. ವಾಸ್ತವವಾಗಿ ಜಾಗತೀಕರಣ ಜಗತ್ತಿನ ವಿವಿಧ ಭಾಗಗಳಲ್ಲಿ ನೂರಾರು-ಸಾವಿರಾರು ಚಳವಳಿಗಳನ್ನು ಹುಟ್ಟುಹಾಕುತ್ತಿರುವುದು ಕೂಡ ಅಷ್ಟೇ ಸತ್ಯ. ಭಾರತದಲ್ಲಿ ಚಳವಳಿಗಳು ಈಗ ದಿನನಿತ್ಯದ ವಿಷಯಗಳಾಗಿವೆ – ಭಾರತ ದಿನನಿತ್ಯ ಚಳವಳಿಗಳ ದೇಶವಾಗುತ್ತಿದೆ. ರೈತ ಚಳವಳಿಗಳು ಈ ಸಂದರ್ಭದಲ್ಲಿ ಹೊಸ ಪ್ರತಿರೋಧಗಳೊಂದಿಗೆ, ಅಸ್ಮಿತೆಗಳ ಉಳಿವಿಗಾಗಿ ಫೀನಿಕ್ಸ್ ಹಕ್ಕಿಯಂತೆ ಮರುಹುಟ್ಟುತ್ತಿವೆ, ಹೊಸ ಕಥನಗಳಿಗೆ, ಹೊಸ ಇತಿಹಾಸಕ್ಕೆ ಸಾಕ್ಷಿಯಾಗುತ್ತಿವೆ ಮತ್ತು ಪ್ರಜಾಪ್ರಭುತ್ವದ ಗಟ್ಟಿತನಕ್ಕೆ ರೂಪಕಗಳಾಗುತ್ತಿವೆ.

**ಡಾ॥ ಮುಜಾಫ್ಫರ್ ಅಸ್ಸಾದಿ**
ವಿಶೇಷಾಧಿಕಾರಿಗಳು, ರಾಯಚೂರು ವಿಶ್ವವಿದ್ಯಾನಿಲಯ
ಜ್ಞಾನತುಂಗಾ, ಯರ್‌ಗೆರಾ ಅಂಚೆ
ರಾಯಚೂರು – ೫೮೪ ೧೩೩



# ಚಂದ್ರಗ್ರಹಣ

ಡಾ॥ ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು – ೫೬೦ ೦೦೧

ಗ್ರಹಣ ಎಂಬ ಪದಕ್ಕೆ ಇರುವ ಒಂದು ಆಕರ್ಷಕ ಗುಣ ಪತ್ರಿಕೆಗಳ ಮುಖ ಪುಟಗಳನ್ನೂ ಸೆಳೆದು ಬಿಡುತ್ತದೆ. ಜುಲೈ ತಿಂಗಳ ಪಾರ್ಶ್ವ ಚಂದ್ರಗ್ರಹಣವನ್ನೂ ಈ ಗುಂಪಿಗೆ ಸೇರಿಸಬಹುದು. ಹೇಳಿ ಕೇಳಿ ಮಾನ್‌ಸೂನ್ ಅಬ್ಬರದ ಕಾಲ; ಜೊತೆಗೆ ಮಧ್ಯರಾತ್ರಿಯ ಘಟನೆ. ಆದರೂ ಈ ಆಕರ್ಷಣೆ ಅಡೆತಡೆಗಳನ್ನು ಮೆಟ್ಟಿ ನಿಲ್ಲುತ್ತದೆ.

ಚಂದ್ರನ ಕಕ್ಷೆ, ಭೂ ಕಕ್ಷೆಯನ್ನು ಹಾದು ಹೋಗುವ ಬಿಂದುಗಳಲ್ಲಿ ಚಂದ್ರ ಇದ್ದಾಗ ಹುಣ್ಣಿಮೆಯಾದರೆ ಗ್ರಹಣ ಖಚಿತವೇ ಎನ್ನಬಹುದು. ಹದಿನೈದು ದಿನಗಳೊಳಗೆ ಚಂದ್ರ ಇಂತಹುದೇ ಇನ್ನೊಂದು ಬಿಂದುವನ್ನು ಹಾದುಹೋಗುವಾಗ ಅಮಾವಾಸ್ಯೆ ಆಗುವುದರಿಂದ ಸೂರ್ಯಗ್ರಹಣದ ಸಾಧ್ಯತೆ ಉಂಟು. ಹೀಗೆ ಈ ಎರಡೂ ಗ್ರಹಣಗಳು ಸಾಧಾರಣವಾಗಿ ಜೋಡಿಯಾಗಿಯೇ ಬರುತ್ತವೆ. ಜುಲೈ ೨ರಂದು ಸೂರ್ಯ ಗ್ರಹಣವೂ ಇದೆ. ಆದರೆ ಇದು ದಕ್ಷಿಣ ಅಮೆರಿಕದವರಿಗೆ ಮಾತ್ರ. (ಆಗ ನಮಗೆ ನಡುರಾತ್ರಿ ಆಗಿರುತ್ತದೆ).

ಚಂದ್ರಗ್ರಹಣದ ಆರಂಭವನ್ನು ಗುರುತಿಸುವುದು ಕಷ್ಟ ಸಾಧ್ಯ. ಭೂಮಿಯ ನೆರಳು ತೆಳುವಾಗಿ ಆರಂಭವಾಗಿ ದಟ್ಟವಾಗುತ್ತದೆ. ಇದನ್ನು ಪಾರ್ಶ್ವ ಛಾಯೆ ಮತ್ತು ಪೂರ್ಣ ಛಾಯೆ ಎಂದು ಪ್ರತ್ಯೇಕಿಸಿ ಸಮಯಗಳನ್ನು ಲೆಕ್ಕ ಹಾಕುತ್ತಾರೆ. ಪಾರ್ಶ್ವ ಛಾಯೆಯನ್ನು ಚಂದ್ರ ಹಾದು ಹೋಗುವಾಗ ಅದರ ಬೆಳಕಿನ ವ್ಯತ್ಯಾಸ ಬರಿಗಣ್ಣಿಗೆ ಗೋಚರವಾಗುವುದೇ ಇಲ್ಲ. ಆದ್ದರಿಂದ ೧೭ರ ಜುಲೈ ಬೆಳಿಗ್ಗೆ ೧ ಗಂಟೆಯಲ್ಲಿ ಚಂದ್ರನನ್ನು ನೋಡಿದಾಗ ಅದರ ಬೆಳಕು ಕುಂದಿರುವುದೆಂದು ಅರಿವಾಗುವುದೇ ಇಲ್ಲ. ೧:೩೧ಕ್ಕೆ ಚಂದ್ರ ಪೂರ್ಣ ಛಾಯೆಯನ್ನು ಪ್ರವೇಶಿಸಿದಾಗ ಅದರ ಅಂಚು ಮಂಕಾಗುವುದು ಆರಂಭವಾಗುತ್ತದೆ. ಬೆಳಗಿನ ೩:೦೦ ಗಂಟೆಗೆ ಅರ್ಧಕ್ಕಿಂತ ಹೆಚ್ಚು ಭಾಗ ಮಂಕಾಗಿರುತ್ತದೆ. ಇದೇ ಗ್ರಹಣದ ಗರಿಷ್ಠ ಅಂದರೆ ಇದು ಪೂರ್ಣಗ್ರಹಣವಲ್ಲ. ೪:೨೯ಕ್ಕೆ ಪೂರ್ಣ ಛಾಯೆಯನ್ನು ದಾಟಿ ಬಂದಾಗ ಅದು ಪ್ರಕಾಶಮಾನವಾಗಿ ಕಂಡರೂ ಇನ್ನೂ ಪಾರ್ಶ್ವಛಾಯೆಯ ಪ್ರಭಾವ ಇರುತ್ತದೆ. ೫:೪೭ಕ್ಕೆ ಗ್ರಹಣ ಮುಕ್ತಾಯವಾಗುತ್ತದೆ. ಗ್ರಹಣದ ಯಾವುದೇ ಹಂತ ನೋಡಲು (ಅಥವಾ ಚಿತ್ರ ತೆಗೆಯಲು) ಸಾಧ್ಯವಾದರೆ ನೆರಳಿನ ಆಕಾಶವನ್ನು ಗಮನವಿಟ್ಟು ನೋಡಿ. ೩೦೦೦ ವರ್ಷಗಳ ಹಿಂದೆ ಇದನ್ನು ಬರಿಗಣ್ಣಿನಿಂದ ವೀಕ್ಷಿಸಿ, ಭೂಮಿ ಗುಂಡಗಿದೆ ಎಂದು ನಿರ್ಧರಿಸಿದ್ದು ಹೇಗೆ ಎಂದು ಆಲೋಚಿಸಲು ಈ ಪಾರ್ಶ್ವಗ್ರಹಣ ಒಳ್ಳೆಯ ಅವಕಾಶ ಒದಗಿಸುತ್ತದೆ.

ಉ
ರಾಜಹಂಸ
ಸಪ್ತರ್ಷಿ ಮಂಡಲ
ವೀಣಾ
ಸಹದೇವ
ಭೀಮ
ಸಿಂಹ
ಗರುಡ
ಮಂಗಳ
ಪೂ
ಪ
ಕನ್ಯಾ
ತುಲಾ
ಚಿತ್ರಾ
ಜ್ಯೇಷ್ಠಾ
ಶನಿ ಧನು
ಗುರು
ವೃಶ್ಚಿಕ
ಹಸ್ತ
ಕಿನ್ನರ
ದ

ಈ ತಿಂಗಳಲ್ಲಿ ಸಾಧಾರಣವಾಗಿ ಮೋಡ ಇರುವುದರಿಂದ ನಭಾವಲೋಕನಕ್ಕೆ ಅವಕಾಶ ಕಡಿಮೆ. ಆದರೂ ಅವಕಾಶ ಸಿಕ್ಕಾಗ ಗಮನಿಸಿ ನೋಡಿ. ಗುರುಗ್ರಹ ಪೂರ್ವದ ಅಂಚಿನಲ್ಲಿ ಹೊಳೆಯುವುದನ್ನು ಕಾಣ ಬಹುದು. ಅದರ ಪಕ್ಕದಲ್ಲಿಯೇ ಆಕರ್ಷಕ ವೃಶ್ಚಿಕ ರಾಶಿಯೂ ಕಾಣುವುದು. ಉತ್ತರದಲ್ಲಿ ಸಪ್ತರ್ಷಿ ಮಂಡಲ ನೆತ್ತಿಯ ಮೇಲೆ ಹಸ್ತಾ, ಚಿತ್ರಾ ಮತ್ತು ಸ್ವಾತಿ, ದಕ್ಷಿಣದಲ್ಲಿ, ಕಿನ್ನರ (ಸೆಂಟಾರಸ್) ಮತ್ತು ತ್ರಿಶಂಕು (ಸದರ್ನ್ ಕ್ರಾಸ್) ಇವುಗಳನ್ನು ಗುರುತಿಸಬಹುದು.

ದಕ್ಷಿಣದ ದಿಗಂತದ ಅಂಚಿನ ಉದ್ದಕ್ಕೂ ಆಕಾಶ ಗಂಗೆಯ ಹರಿವನ್ನೂ ಕಾಣ ಬಹುದು. ೯ರಂದು ಅರ್ಧ ಚಂದ್ರ ಚಿತ್ರಾ ಮತ್ತು ಸ್ವಾತಿ ನಕ್ಷತ್ರಗಳ ಮಧ್ಯೆ ಕಾಣುತ್ತದೆ. ೧೩ರಂದು ಗುರುಗ್ರಹದ ಪಕ್ಕ ಚಂದ್ರ ಕಾಣುವುದು.

ಪಶ್ಚಿಮದ ದಿಗಂತದ ಅಂಚಿನಲ್ಲಿ ಮಂಗಳ ಗ್ರಹ ಕಾಣುತ್ತದೆಯಾದರೂ ಸಂಜೆಗೆಂಪಿನಲ್ಲಿ ಅದನ್ನು ಪತ್ತೆ ಮಾಡುವುದು ಕಷ್ಟ. ತಿಂಗಳ ಮೊದಲ ವಾರದಲ್ಲಿ ಅದರ ಪಕ್ಕದಲ್ಲೇ ಬುಧ ಗ್ರಹವೂ ಇರುತ್ತದೆ. ತಿಂಗಳ ಮಧ್ಯಭಾಗದಲ್ಲಿ ಶನಿಗ್ರಹ ಸಂಜೆಯಲ್ಲೇ ಉದಯಿಸ ತೊಡಗುವುದು. ತಿಂಗಳ ಕೊನೆಗೆ ಅದು ಪೂರ್ವದ ಅಂಚಿನಲ್ಲಿ ಕಾಣ ಬಹುದು. ೧೬ರ ಚಂದ್ರ ಉದಯಿಸುವಾಗ ಶನಿ ಮಂಕಾಗಿ ಕಾಣದಂತಿರುತ್ತದೆ. ಆದರೆ ಮಧ್ಯರಾತ್ರಿ ಗ್ರಹಣ ನಡೆಯುವಾಗ ಸ್ಫುಟವಾಗಿ ಕಾಣುತ್ತದೆ.

ಜುಲೈ ೪ರಂದು ಭೂಮಿ–ಸೂರ್ಯನ ನಡುವಿನ ಅಂತರ ಗರಿಷ್ಠವಾಗುತ್ತದೆ. ಡೆಲ್ಟಾ ಅಕ್ವಾರಿಡ್ಸ್ ಎಂಬ ವೃಷ್ಟಿಯು ಜುಲೈ ೧೫ರಿಂದ ಐದಾರು ದಿನ ಕಾಣುವುದು. ೨೯ರಂದು ಗರಿಷ್ಠ – ಗಂಟೆಗೆ ೨೦ ಉಲ್ಕೆಗಳು ಕಾಣುವುವು.



**ಪಾರ್ಶ್ವಗ್ರಹಣದ ಚಿತ್ರ ಹಾಗೂ ಯಾವುದೇ ಶುಕ್ಲ ಅಷ್ಟಮಿಯ ಚಿತ್ರಗಳನ್ನು ಹೋಲಿಸಿ ಬೆಳಕು ಎಲ್ಲಿಂದ ಬೀಳುತ್ತಿದೆ ಎಂದು ಗಮನಿಸಿ.**

### ಜುಲೈ ಖಗೋಳ ದಿನಚರಿ

೨ ಅಮಾವಾಸ್ಯೆ ೦೦:೪೬ಕ್ಕೆ; ಸೂರ್ಯಗ್ರಹಣ (ಭಾರತದಿಂದ ಕಾಣುವುದಿಲ್ಲ)
೪ ಚಂದ್ರ–ಬುಧ ಜೋಡಿ; ಭೂಮಿ–ಸೂರ್ಯರ ನಡುವೆ ಗರಿಷ್ಠ ಅಂತರ
೫ ಮಂಗಳ–ಬುಧ ನಡುವೆ ಕನಿಷ್ಠ ಕೋನಾಂತರ; ಚಂದ್ರ–ಭೂಮಿ ನಡುವೆ ಕನಿಷ್ಠ ಅಂತರ
೯ ಶನಿಗ್ರಹದ ವಿಯುತಿ; ಚಾಂದ್ರಮಾಸದ ಮೊದಲ ಪಾದ
೧೩ ಗುರು–ಚಂದ್ರ ಜೋಡಿ
೧೬ ಶನಿ–ಚಂದ್ರ ಜೋಡಿ
೧೭ ಮುಂಜಾವು – ಪಾರ್ಶ್ವ ಚಂದ್ರಗ್ರಹಣ
೨೧ ಚಂದ್ರ–ಭೂಮಿ ನಡುವೆ ಗರಿಷ್ಠ ಅಂತರ
೨೫ ಚಾಂದ್ರಮಾಸದ ಕೊನೆಯ ಪಾದ
೨೮ ಚಂದ್ರ – ರೋಹಿಣಿ ಜೋಡಿ
೩೦–೩೧ ಡೆಲ್ಟಾ ಅಕ್ವಾರಿಡ್ಸ್ ಉಲ್ಕಾವೃಷ್ಟಿ



# ಮತ್ತೊಂದು ಭಾರತದತ್ತ ದಾಪುಗಾಲು

ಹದಿನೇಳನೆಯ ಲೋಕಸಭಾ ಚುನಾವಣೆಯ ಫಲಿತಾಂಶಗಳ ಘೋಷಣೆಯಾದ ಮೇಲೆ ಪ್ರಜ್ಞಾವಂತ ಜನ ಆತಂಕದಲ್ಲಿದ್ದಾರೆ. ಮೋದಿ ನೇತೃತ್ವದ ಬಿಜೆಪಿ ೩೦೦ಕ್ಕೂ ಹೆಚ್ಚಿನ ಸ್ಥಾನಗಳನ್ನು ಪಡೆದುಕೊಂಡು, ಮಿತ್ರ ಪಕ್ಷಗಳೊಂದಿಗೆ ೩೫೦ರ ಗಡಿಯನ್ನು ದಾಟಿದೆ. ಹೊಸ ಸರ್ಕಾರದ ರಚನೆಯಾಗಿದೆ. ಚುನಾವಣೆಯ ಸಂದರ್ಭದಲ್ಲಿ ಎದ್ದ ಧೂಳು ನೆಲಕಚ್ಚಿಲ್ಲ ಮಾತ್ರವಲ್ಲ, ಧೂಳು ಭಯಂಕರ ಮರಳು ಬಿರುಗಾಳಿಯಾಗುವ ಲಕ್ಷಣಗಳೂ ದಟ್ಟವಾಗಿವೆ. ನಮ್ಮ ನೆಚ್ಚಿನ ಭಾರತ ಗುರುತು ಸಿಗದಂತೆ ಬದಲಾಗುತ್ತದೇನೋ, ನಾವು ಇಷ್ಟಪಡದ ಜನತಂತ್ರವಿಲ್ಲದ 'ಭಾರತದತ್ತ ದಾಪುಗಾಲು' ಹಾಕುತ್ತಿದ್ದೇವೇನೋ ಎನಿಸುತ್ತಿದೆ. ಅದೇ ಆತಂಕಕ್ಕೆ ಕಾರಣ.

ಸಂಸತ್ತಾತ್ಮಕ ರಾಜಕಾರಣದಲ್ಲಿ ಪಾಶವೀ ಬಹುಮತಗಳು ಆಳುವವರ್ಗಕ್ಕೆ ಪರವಾದ ಹಾಗೂ ವಿಶಾಲ ಜನಸ್ತೋಮದ ಹಿತಾಸಕ್ತಿಗೆ ವಿರುದ್ಧವಾದ ನೀತಿಗಳನ್ನು ಅನುಷ್ಠಾನಗೊಳಿಸಲು ಹೊಸ ಸರ್ಕಾರಕ್ಕೆ ಕೆಟ್ಟ ಧೈರ್ಯವನ್ನು ತುಂಬುತ್ತವೆ. ಮೊದಲನೆಯ ಮೋದಿ ಸರ್ಕಾರವು ೨೦೧೪ರಿಂದ ೨೦೧೯ರವರೆಗಿನ ಅವಧಿಯಲ್ಲಿ ಅತ್ಯಂತ ಜನವಿರೋಧಿ ನೀತಿಗಳನ್ನು ತೆಗೆದುಕೊಂಡದ್ದನ್ನು ಯಾರು ತಾನೆ ಮರೆಯಲು ಸಾಧ್ಯ! ಸರ್ಕಾರವು ಅದಾನಿ – ಅಂಬಾನಿ ಕಂಪೆನಿಗಳ ಮಾರಾಟ ಪ್ರತಿನಿಧಿಯಂತೆ, ಎಸ್ಟೇಟ್ ಏಜೆಂಟಿನಂತೆ ಕೆಲಸ ಮಾಡಿತ್ತು. ೧೯೭೧ರ ನಂತರ ಯಾವ ಪ್ರಧಾನಿ ಅಥವಾ ಪಕ್ಷವು ಎರಡನೆಯ ಬಾರಿ ಸತತವಾಗಿ ಪೂರ್ಣ ಬಹುಮತದೊಂದಿಗೆ ಅಧಿಕಾರಕ್ಕೆ ಬಂದಿರಲಿಲ್ಲ. ಇಂಥ ದಾಖಲೆಯೊಂದಿಗೆ ಅಧಿಕಾರಕ್ಕೆ ಬಂದ ಸರ್ಕಾರ ಏನು ಮಾಡಲೂ ಹೇಸದಿರಬಹುದು.

**ಶುರುವಾಯಿತು ಭಂಡಾಟ**

ಹೋಗಲಿ, ಇಂಥ ಗೆಲುವಿನೊಂದಿಗೆ ಸರ್ಕಾರಕ್ಕೆ ವಿನಯವೇನಾದರೂ ಪ್ರಾಪ್ತವಾಗಿದೆಯೇ. ಖಂಡಿತಾ ಇಲ್ಲ! ವಿಜಯವು ವಿವೇಕವನ್ನು ಕಲಿಸಿಲ್ಲ. ವಿಶಾಲ ಹೃದಯವನ್ನು ಸೃಷ್ಟಿಸಿಲ್ಲ, ಆಕ್ರಮಣಶೀಲತೆಯನ್ನು, ಭಂಡತನವನ್ನು ಹುಟ್ಟುಹಾಕಿದೆ.

ಮೋದಿಯವರು ಗೆದ್ದಕೂಡಲೇ, ಚುನಾವಣೆಯ ಸಂದರ್ಭದಲ್ಲಿ ಯಾವ ಪಕ್ಷವೂ ಧರ್ಮನಿರಪೇಕ್ಷತೆಯ ಬಗ್ಗೆ ಮಾತಾಡಲೇ ಇಲ್ಲ ಎನ್ನುತ್ತಾ ಅದು ತಮ್ಮ ಸಾಧನೆ ಎಂಬಂತೆ ಕೊಚ್ಚಿಕೊಂಡರು. ಅದೇ ರೀತಿ ಎಲ್ಲ ಜಾತಿ ಆಧಾರಿತ ಪಕ್ಷಗಳು, ಒಕ್ಕೂಟಗಳು ಮಣ್ಣುಮುಕ್ಕಿವೆ ಎಂದೂ ವಿಶ್ಲೇಷಿಸಿದರು. ಅವರ ಮಾತಿನಲ್ಲಿ ಸತ್ಯವಿದೆ; ಆದರೆ ರಾಜಕೀಯ ವಿವೇಕ, ಎಚ್ಚರ ಇಲ್ಲ.

ಬಿಜೆಪಿಯ ಉಗ್ರ ಹಿಂದುತ್ವದ ಎದುರು ಬೆದರಿದ್ದ ಕಾಂಗ್ರೆಸ್ ಮೃದು

**ಡಾ|| ಬಿ. ಆರ್. ಮಂಜುನಾಥ್**

ಇವಿಎಂ ವಿರುದ್ಧ ಹೋರಾಟ ಮಾಡಲು ವೇದಿಕೆಯೊಂದು ರೂಪುಗೊಂಡಿದೆ. ನಿವೃತ್ತ ನ್ಯಾಯಾಧೀಶ ಕೋಲ್ಸೆ ಪಾಟೀಲ್, ಸುರೇಶ್ ಖೈರ್‌ನಾರ್, ಶಬನಮ್ ಹಶ್ಮಿ ಮೊದಲಾದವರ ನೇತೃತ್ವದಲ್ಲಿ ಇರುವ ಇವಿಎಂ ವಿರೋಧಿರಾಷ್ಟ್ರೀಯ ಜನಾಂದೋಲನ ವೇದಿಕೆಯ ಕರೆಯ ಮೇರೆಗೆ, ಮತ್ತೆ ಮತಪತ್ರ (ಬ್ಯಾಲಟ್ ಪೇಪರ್)ದೊಂದಿಗೇ ಇನ್ನು ಮುಂದೆ ಭಾರತದಲ್ಲಿ ಚುನಾವಣೆಯಾಗಲಿ ಎಂದು ಮೂರು ವಾರಗಳ ಹಿಂದೆ ಭಾರತದ ಅನೇಕ ದೊಡ್ಡ ನಗರಗಳಲ್ಲಿ ಪ್ರತಿಭಟನೆ ನಡೆಯಿತು. ಭಾರತದಲ್ಲಿ ಉತ್ಪಾದನೆಯಾದ ಇವಿಎಂ ಯಂತ್ರಗಳಲ್ಲಿ ೨೦ ಲಕ್ಷ ಕಾಣದಂತೆ ಮಾಯವಾಗಿವೆ ಎಂಬ ಸುದ್ದಿ ಬೆಳಕಿಗೆ ಬಂದಿದೆ. ಇದನ್ನು ಚುನಾವಣಾ ಆಯೋಗವೇ ಬಾಂಬೆ ಹೈಕೋರ್ಟ್‌ನಲ್ಲಿ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಯಲ್ಲಿ ಒಪ್ಪಿಕೊಂಡಿದೆ. ಎಂದರೆ ಮತದಾನ ನಡೆದ ಯಂತ್ರಗಳ ಬದಲು ಇಂಥ ಯಂತ್ರಗಳನ್ನು ಆಯ್ದ ಸ್ಟ್ರಾಂಗ್ ರೂಮ್‌ಗಳಲ್ಲಿ ಬದಲಾವಣೆ ಮಾಡಿರಬಹುದು ಎಂಬ ಅನುಮಾನ ದಟ್ಟವಾಗಿದೆ. ಇದಕ್ಕೆ ಪೂರಕವಾಗಿ ದೇಶದ ಅನೇಕ ಭಾಗಗಳಲ್ಲಿ ಇವಿಎಂಗಳನ್ನು ಸಂದೇಹಾಸ್ಪದವಾಗಿ ಸಾಗಿಸುತ್ತಿದ್ದ ಸುದ್ದಿ ಬಂದಿದೆ. ಹೋಟೆಲ್ ರೂಮುಗಳಲ್ಲಿಯೂ ಅನಧಿಕೃತ ಮೆಷೀನ್‌ಗಳು ಸಿಕ್ಕಿವೆ. ಒಂದು ಕೂರಿಯರ್ ಕಾಗದವನ್ನು ಸತತವಾಗಿ ಟ್ರಾಕ್ ಮಾಡಲು ಸಾಧ್ಯವಿರುವ ಕಾಲದಲ್ಲಿ ಇವಿಎಂ ಅನ್ನು ಏಕೆ ಟ್ರಾಕ್ ಮಾಡಲಾಗುತ್ತಿಲ್ಲ ಎಂದು ತೀಸ್ತಾ ಸೆಟಲ್‌ವಾಡ್ ಪ್ರಶ್ನಿಸಿದ್ದಾರೆ.

ಹಿಂದುತ್ವವನ್ನು ಅನುಸರಿಸಿತು. ಯಾವ ಪಕ್ಷವೂ ರಾಜಕೀಯದಿಂದ ಧರ್ಮವನ್ನು ದೂರ ಇಡಬೇಕಾದ ಅಗತ್ಯತೆಯ ಬಗ್ಗೆ ಮಾತನಾಡಲಿಲ್ಲ. ಅಷ್ಟೇ ಅಲ್ಲ ಅಲ್ಪಸಂಖ್ಯಾತರ ಮೇಲಾಗುತ್ತಿರುವ ದೌರ್ಜನ್ಯಗಳ ಬಗ್ಗೆಯೂ ಪ್ರಸ್ತಾಪಿಸಲಿಲ್ಲ. ಹೇಗಿದ್ದರೂ ನಮಗೇ ಮುಸ್ಲಿಮರು ಮತ ಹಾಕಬೇಕು, ಇನ್ನೆಲ್ಲಿ ಹೋಗುತ್ತಾರೆ, ಅವರ ಬಗ್ಗೆ ಮಾತನಾಡಿ ಹಿಂದೂ ಮತಗಳನ್ನೇಕೆ ಕಳೆದುಕೊಳ್ಳಬೇಕು ಎಂಬ ದುಷ್ಟ ಅವಕಾಶವಾದಿ ಲೆಕ್ಕಾಚಾರ ಅದರ ಹಿಂದೆ ಕೆಲಸ ಮಾಡುತ್ತಿತ್ತು. ಆದರೆ ಇದು ದೇಶದ ಐಕ್ಯತೆಗೆ, ವಿವಿಧ ಜನಾಂಗಗಳ ನಡುವಿನ ಸಾಮರಸ್ಯಕ್ಕೆ ಒಳ್ಳೆಯದೇ? ನಮಗೆ ಅನ್ಯಾಯವಾಗಿದೆ ಎಂದು ಇಪ್ಪತ್ತು ಕೋಟಿ ಜನಕ್ಕೆ ಅನ್ನಿಸುತ್ತಲೇ ಇದ್ದರೆ ಅದು ದೇಶದ ಆರೋಗ್ಯಕ್ಕೆ ಒಳ್ಳೆಯದೇ? ಇದು ದೇಶವನ್ನಾಳುವ ಅತ್ಯುನ್ನತ ನಾಯಕನಿಗೆ ಅರ್ಥವಾಗದಿದ್ದರೆ ಅದು ಘೋರ ದುರಂತ.

ಹಾಗೆಯೇ ಉತ್ತರ ಭಾರತದಲ್ಲಿ ಮಂಡಲ್ ಚಳುವಳಿಯ ನಂತರ ಜಾತಿಯ ಆಧಾರದ ಮೇಲೆ ಅಧಿಕಾರಕ್ಕೆ ಬರುತ್ತಿದ್ದ ಅನೇಕ ರಾಜಕೀಯ ಪಕ್ಷಗಳು ಈ ಬಾರಿಯ ಲೋಕಸಭಾ ಚುನಾವಣೆಯಲ್ಲೂ ಮಣ್ಣು ಮುಕ್ಕಿವೆ ನಿಜ. ಆದರೆ ಅವರನ್ನು ಸೋಲಿಸಿದ ಬಿಜೆಪಿ ಜಾತಿ ಆಧಾರಿತ ಸಣ್ಣ ಪಕ್ಷಗಳನ್ನು ಓಲೈಸಿದೆ. ಸ್ವತಃ ಮೋದಿಯವರೇ 'ನಾನು ಹಿಂದುಳಿದ ಜಾತಿಯವನು' ಎಂಬ ಫಲಕವನ್ನು ಹಣೆಗೆ ಅಂಟಿಸಿಕೊಂಡು ಓಡಾಡಿದ್ದಾರೆ. ಇದಲ್ಲದೆ ಜಾತಿ ಆಧಾರಿತ ಪಕ್ಷಗಳನ್ನು ಹಿಂದಕ್ಕೆ ಸರಿಸಿರುವುದು ವರ್ಗ ಆಧಾರಿತ ಧ್ರುವೀಕರಣವಲ್ಲ. ಹಾಗಾಗಿದ್ದರೆ ಅದು ದೀರ್ಘಕಾಲ ಉಳಿಯುತ್ತಿತ್ತು. ಸ್ವಾಗತಾರ್ಹವಾಗುತ್ತಿತ್ತು. ಜಾತಿ, ಅಸಮಾನತೆ, ಅಪಮಾನಗಳು ಜೀವಂತವಾಗಿರುವ ಇಂದಿನ ಭಾರತದಲ್ಲಿ ಹಿಂದುತ್ವವು ತಾತ್ಕಾಲಿಕವಾಗಿ ಜಾತಿ ಬಿರುಕುಗಳನ್ನು ಮುಚ್ಚಬಹುದು; ಆದರೆ ಹಿಂದುತ್ವದ ಹಿಂದೆಯೇ ಬರುವ ಮೇಲ್‌ಜಾತಿ ಪ್ರಾಬಲ್ಯ, ದಮನಗಳೂ ಬಲು ದೊಡ್ಡ ಪ್ರತಿ ಏಟಿಗೆ ಕಾರಣವಾಗಬಹುದು. ನಾಯಕನೆನ್ನಿಸಿಕೊಂಡವನಿಗೆ ಇದರ ಬಗ್ಗೆ ಎಚ್ಚರವಿರಬೇಕು.

ಈ ಸರ್ಕಾರದ ದುರಹಂಕಾರ ಅಲ್ಲಿಗೆ ನಿಲ್ಲುತ್ತಿಲ್ಲ. ಗೃಹಮಂತ್ರಿ ಅಮಿತ್ ಶಾ ಅವರು ನ್ಯಾಷನಲ್ ರಿಜಿಸ್ಟ್ರಿ ಆಫ್ ಸಿಟಿಜನ್ಸ್ (ಎನ್‌ಆರ್‌ಸಿ– ರಾಷ್ಟ್ರೀಯ ನಾಗರಿಕರ ದಾಖಲೆ)ಅನ್ನು ಕೇವಲ ಈಶಾನ್ಯ ಭಾರತಕ್ಕೆ ಮಾತ್ರವಲ್ಲ ಇಡಿಯ ದೇಶಕ್ಕೆ ಅನ್ವಯಿಸುತ್ತೇವೆ ಎಂದು ಬೆದರಿಸಿದ್ದಾರೆ. ಅಷ್ಟಲ್ಲದೆ ಭಾರತ ಉಪಖಂಡದ ಯಾವುದೇ ಭಾಗದಲ್ಲಿರುವ ಹಿಂದೂಗಳು, ಸಿಖ್ಖರು ಹಾಗೂ ಬೌದ್ಧರಿಗೆ ದೇಶದ ನಾಗರಿಕನಾಗುವ ಸಹಜ ಹಕ್ಕನ್ನು ನೀಡುತ್ತೇವೆ ಎನ್ನುತ್ತಾರೆ. ಎಂದರೆ ಪರೋಕ್ಷವಾಗಿ ಇದು ಹಿಂದೂಗಳದ್ದೇ ರಾಷ್ಟ್ರ ಎಂದ ಹಾಗಾಯಿತು. ಇದು ದೇಶವನ್ನು ಕಟ್ಟುವವರ ಭಾಷೆಯಲ್ಲ, ಒಡೆಯುವ ಮದೋನ್ಮತ್ತ ಹೂಂಕಾರ. ಇಷ್ಟಾಗಿ ಅನೇಕ ಅಪರಾಧ ಪ್ರಕರಣಗಳ ಆರೋಪವಿರುವವರನ್ನು ದೇಶದ ಗೃಹಮಂತ್ರಿಯಾಗಿ ನೇಮಿಸುವ ನಡೆಯ ಹಿಂದೆಯೂ ಇರುವುದು ಅಧಿಕಾರದತ್ತ ಉದ್ಧಟತನ.

ಇದನ್ನು ಮುಂದುವರೆಸಿ ಇನ್ನೂ ಒಂದೆರಡು ಅಂಶಗಳನ್ನು ನೆನಪಿಸಬಹುದು. ಗೋಡ್ಸೆಯನ್ನು ಆರಾಧಿಸುವ ಪ್ರಗ್ನ್ಯಾಸಿಂಗ್ ಠಾಕೂರ್ ಈಗ ಸಂಸದ್ ಸದಸ್ಯೆ, ಮೋದಿಯವರು "ನಾನು ನಿನ್ನನ್ನು ಕ್ಷಮಿಸುವುದಿಲ್ಲ" ಎಂದು ಚುನಾವಣೆ ಸಮಯದಲ್ಲಿ ಜಾಣತನದಿಂದ ಅಬ್ಬರಿಸಿದ್ದರು. ಅಂದರೆ ಶಿಕ್ಷೆ ಆಗುತ್ತಿದೆಯೇ ಎಂದರೆ ಅಂಥದ್ದೇನೂ ಇಲ್ಲ. ಹಾಗೆಯೇ ಅನೇಕ ಕ್ರಿಮಿನಲ್ ಪ್ರಕರಣಗಳ ಆರೋಪವಿರುವ, ಸ್ಟೇನ್ಸ್ ಹತ್ಯೆಯ ಕಳಂಕವನ್ನೇ ಹೊತ್ತಿರುವ ಸಾರಂಗಿ ಎಂಬಾತನನ್ನು ಮೋದಿ ಮಂತ್ರಿ ಮಾಡಿದ್ದಾರೆ. ಮುಂದೆ ಆತ ಒರಿಸ್ಸಾದ ಮುಖ್ಯಮಂತ್ರಿ ಅಭ್ಯರ್ಥಿ ಎಂದು ಯೋಗಿ ಆದಿತ್ಯನಾಥರ ಮಾದರಿಯಲ್ಲೇ ಬಿಂಬಿಸಬಹುದು. ಅದಕ್ಕೆ ಆತನನ್ನು ಸರಳ ವ್ಯಕ್ತಿ ಎಂದು ಬಿಂಬಿಸಲಾಗುತ್ತಿದೆ. ಆತನೂ ಮೋದಿ, ಯೋಗಿಯರಂತೆಯೇ ದೇಶಕ್ಕಾಗಿ 'ಎಲ್ಲ'ವನ್ನೂ ಬಿಟ್ಟವರು! ಇದರಲ್ಲಿ ಒಂದು ಈಗ ನಮಗೆ ಪರಿಚಿತವಾಗಿರುವ ಮಾದರಿ, ವಿನ್ಯಾಸ ಅಡಗಿದೆ. ಹಾಗೆಯೇ ಅತ್ಯಂತ ವಿಜ್ಞಾನ ವಿರೋಧಿ ಮಾತುಗಳನ್ನಾಡುವವರು, ಜ್ಯೋತಿಷ್ಯವು ವಿಜ್ಞಾನವನ್ನು ಮೀರಿದ್ದು ಎನ್ನುವವರು ಶಿಕ್ಷಣ ಸಚಿವರು!

**ನಂಬಲರ್ಹವಾದ ಜಯವಲ್ಲ!**

ಈ ಬಾರಿ ಗೆದ್ದ ಮೇಲಿನ ಬಿಜೆಪಿಯ ನಡೆವಳಿಕೆಯು ಹೇಗೆ ಭಂಡತನದಿಂದ ಕೂಡಿದೆಯೋ ಅದರ ಮೊದಲ ಅವಧಿಯ ಆಡಳಿತವೂ, ಚುನಾವಣಾ ಪ್ರಚಾರವೂ ಅಷ್ಟೇ ಪ್ರಮಾಣದಲ್ಲಿ ಜನರನ್ನು ದೂರಕ್ಕೆ ತಳ್ಳುವಂತೆಯೇ ಇತ್ತು. ಯಾವ ಆಶ್ವಾಸನೆಗಳನ್ನು ನೀಡಿ, ಕನಸುಗಳನ್ನು ಮಾರಾಟ ಮಾಡಿ ಅದು ಅಧಿಕಾರಕ್ಕೆ ಬಂದಿತ್ತೋ ಅವೆಲ್ಲಾ ವಿಫಲವಾಗಿದ್ದವು. ಅಚ್ಛೇ ದಿನ ಬರಲಿಲ್ಲ ಎನ್ನುವುದಕ್ಕೆ ಸಾಕ್ಷಿ ಪುರಾವೆ ಬೇಕೆ !

ದೇಶದ ಜನಸಂಖ್ಯೆಯ ಬಹುದೊಡ್ಡ ಭಾಗವಾದ ರೈತರ ಬದುಕು ಇನ್ನಷ್ಟು ದುರ್ಭರವಾಗಿದೆ. ಕೃಷಿಯ ಜಿಡಿಪಿಯು ಈ ಮೊದಲಿನ ಯುಪಿಎ ಸರ್ಕಾರದ ಅವಧಿಗೆ ಹೋಲಿಸಿದರೆ ಅರ್ಧಕ್ಕರ್ಧ ಕುಸಿದಿದೆ ಎನ್ನಲಾಗಿದೆ. ಮಹಾರಾಷ್ಟ್ರದ ರೈತರು ಸಹಸ್ರಾರು ಸಂಖ್ಯೆಯಲ್ಲಿ ಎರಡು ಬಾರಿ ಮುಂಬೈಗೆ ಲಗ್ಗೆ ಇಟ್ಟರು. ಒಮ್ಮೆ ದೆಹಲಿಗೇ ನುಗ್ಗಿದ್ದರು. ಕಾರ್ಮಿಕರ ಬೇಡಿಕೆಗಳ ಮೇಲಿನ ಹೋರಾಟಗಳು, ರಾಷ್ಟ್ರವ್ಯಾಪಿ ಹರತಾಳಗಳು ಒಂದು ಮಟ್ಟಿಗೆ ದುಡಿಯುವ ವರ್ಗದ ಸಮಸ್ಯೆಗಳನ್ನು ಮುನ್ನೆಲೆಗೆ ತಂದಿದ್ದವು. ಮಹಿಳೆಯರ ಮೇಲಿನ ದೌರ್ಜನ್ಯಗಳು ಹೆಚ್ಚಿವೆ ಎಂಬುದು ಸರ್ವವಿದಿತ. ಅಲ್ಪಸಂಖ್ಯಾತರು, ದಲಿತರು ಭಯದ ನೆರಳಿನಲ್ಲೇ ಬದುಕುತ್ತಿದ್ದಾರೆ.

ಮೋದಿಯವರ ಆಡಳಿತದ ಅವಧಿಯಲ್ಲಿ ಅವರನ್ನು ದೊಡ್ಡ ಸಂಖ್ಯೆಯಲ್ಲಿ ಬೆಂಬಲಿಸುತ್ತಾರೆ ಎನ್ನಲಾದ ಯುವಜನರೇ ತೀವ್ರವಾದ ನಿರುದ್ಯೋಗ ಸಮಸ್ಯೆಯಿಂದ ಬಳಲುತ್ತಿದ್ದಾರೆ. ಶಿಕ್ಷಣ ಮತ್ತು ಆರೋಗ್ಯದ ವೆಚ್ಚಕ್ಕಾಗಿ ಜನರು ತಮ್ಮ ಹೊಲ–ಮನೆಗಳನ್ನು ಮಾರಿಕೊಂಡು ದರಿದ್ರರಾಗುತ್ತಿರುವುದು ವಾಸ್ತವ. ದೇಶದಾದ್ಯಂತ ವಿಶ್ವವಿದ್ಯಾಲಯಗಳು ವಿವಾದಕ್ಕೊಳಗಾಗಿವೆ, ಅಲ್ಲಿರಬೇಕಾದ ಮುಕ್ತ ವಾತಾವರಣಕ್ಕೆ ಧಕ್ಕೆ ತಗುಲಿದೆ. ಚೆನ್ನೈ ಐಐಟಿ, ಪೂನಾದ ಎಫ್‌ಟಿಐ, ದೆಹಲಿಯ ಜೆಎನ್‌ಯು, ಅಲಿಘರ, ಅಲಹಾಬಾದ್, ಹೈದರಾಬಾದ್ ವಿಶ್ವವಿದ್ಯಾಲಯಗಳು ಎಲ್ಲವೂ ಜನತಂತ್ರವಿರೋಧಿ ದಮನಕಾಂಡಕ್ಕೆ ತುತ್ತಾಗಿದ್ದ ನೆನಪು ಹಸಿರಾಗಿದೆ.

ಎಲ್ಲಕ್ಕಿಂತ ಮುಖ್ಯವಾಗಿ ಮೋದಿಯವರ ಎರಡು ವಿಪರೀತ ಪ್ರಚಾರಗಿಟ್ಟಿಸಿಕೊಂಡ ಕ್ರಮಗಳು ಜನರನ್ನು, ವ್ಯಾಪಾರಸ್ಥರನ್ನು, ಸಣ್ಣ ಉದ್ಯಮಿಗಳನ್ನು ಘೋರ ಸಂಕಟಕ್ಕೆ ಗುರಿಮಾಡಿದ್ದವು. ಅದೆಂದರೆ 'ನೋಟ್‌ಬ್ಯಾನ್' ಎಂದೇ ಜನ ಕರೆಯುವ ದೊಡ್ಡ ನೋಟ್‌ಗಳ ಅಮಾನ್ಯೀಕರಣ ಮತ್ತು ಜಿಎಸ್‌ಟಿ ಎಂಬ ತೆರಿಗೆಯ ಹೇರಿಕೆ, ಈ ಎರಡು ತುಘಲಕ್ ಶೈಲಿಯ ಪ್ರಹಾರಗಳಿಂದ ದೇಶದ ಆರ್ಥಿಕತೆ ಇವತ್ತಿಗೂ ಚೇತರಿಸಿಕೊಂಡಿಲ್ಲ ಎಂದು ಆಳುವ ವರ್ಗದ ಅರ್ಥಶಾಸ್ತ್ರಜ್ಞರೇ ಸ್ವತಃ ಒಪ್ಪಿಕೊಳ್ಳುತ್ತಾರೆ. ಈ ಎಲ್ಲ ಹಿನ್ನೆಲೆಯಲ್ಲಿ ನೋಡಿದಾಗ ಮೋದಿಯವರ ಗೆಲುವು ವಿಶ್ವಾಸಾರ್ಹ ಗೆಲುವೇ ಎಂಬ ಪ್ರಶ್ನೆ ಮೂಡುತ್ತದೆ.

**ಇವಿಎಂ ಕೈಚಳಕ**

ಚುನಾವಣಾ ಪ್ರಚಾರದ ಅವಧಿಯಲ್ಲಿ ಒಂದು ದೊಡ್ಡ ಮೋದಿ ಅಲೆ ಇದೆ ಎಂದು ಯಾರೂ ಹೇಳಿರಲಿಲ್ಲ. ಅಷ್ಟೇಕೆ ಗುಜರಾತ್ ಸೇರಿದಂತೆ ಉತ್ತರ ಪ್ರದೇಶ, ಆಂಧ್ರ ಅನೇಕ ಕಡೆ ಮೋದಿ, ಅಮಿತ್ ಶಾ, ಯೋಗಿ ಆದಿತ್ಯನಾಥರ ರ್‍ಯಾಲಿಗಳಲ್ಲಿ ಕುರ್ಚಿಗಳು ಖಾಲಿ ಇದ್ದ ವರದಿಗಳಾಗಿದ್ದವು. ಸ್ವತಃ ಮೋದಿಯವರೇ ಹತಾಶರಾದವರಂತೆ ಏನೇನೋ ಮಾತನಾಡಿ ನಗೆಪಾಟಲಿಗೀಡಾಗಿದ್ದರು. ಮುನ್ನೂರಕ್ಕೂ ಹೆಚ್ಚು ಸೀಟುಗಳನ್ನು ಗೆಲ್ಲಲಿರುವ ಶಕ್ತಿಶಾಲಿ ಪಕ್ಷದ, ಆತ್ಮವಿಶ್ವಾಸ ತುಂಬಿದ ನಾಯಕನಂತೆ ಅವರು ಕಂಡಿರಲೇ ಇಲ್ಲ. ಅವರ ಎಡವಟ್ಟುಗಳಿಗೆ



ಇವಿಎಂ

ಹೋಲಿಸಿದರೆ 'ಪಪ್ಪು' ಎಂಬ ವಿಡಂಬನೆಗೊಳಗಾದ ರಾಹುಲ್ ಗಾಂಧಿಯವರೇ ಹೆಚ್ಚು ಪ್ರಬುದ್ಧರಂತೆ ಕಂಡಿದ್ದು ಈ ಚುನಾವಣೆಯ ಸೋಜಿಗಗಳಲ್ಲೊಂದು.

ಹೀಗಿದ್ದರೂ ಬಿಜೆಪಿ ಗೆದ್ದಿರುವುದರಿಂದ ಎಲೆಕ್ಟ್ರಾನಿಕ್ ವೋಟಿಂಗ್ ಮೆಶೀನ್‌ಗಳನ್ನು ಆಳುವ ಪಕ್ಷ ತನ್ನ ಅನುಕೂಲಕ್ಕೆ ತಕ್ಕಂತೆ ಬಳಸಿಕೊಂಡಿದೆಯೇ ಎಂಬ ಅನುಮಾನಗಳು ಕಾಡುತ್ತಿವೆ. ಅನೇಕ ಬಾರಿ ಯಾವುದೋ ಸೋತ ಪಕ್ಷವೋ, ಅಭ್ಯರ್ಥಿಯೋ ತನ್ನ ವೈಫಲ್ಯವನ್ನು ಮುಚ್ಚಿಟ್ಟುಕೊಳ್ಳಲು ಮಾಡುತ್ತಿದ್ದ ಬಾಲಿಶ ಭಂಡವಾದವಲ್ಲ ಇದು. ಇಂದಿನ ಆಳುವ ಕೂಟದ ಹುನ್ನಾರಗಳು ಹೇಗಿವೆ ಎಂದರೆ ಯಾವ ದುಸ್ಸಾಹಸವೂ ಅವರಿಗೆ ಅಸಾಧ್ಯವಲ್ಲ ಎನ್ನುವ ಅಭಿಪ್ರಾಯ ಜನಜನಿತವಾಗಿದೆ. ಇವಿಎಂ ಯಾವತ್ತೂ ವಿಶ್ವದಾದ್ಯಂತ ಜನತೆಯ ವಿಶ್ವಾಸವನ್ನು ಗಳಿಸಿಕೊಂಡಿಲ್ಲ. ೨೦೦೯ರಲ್ಲಿ ಸೋತ ಮೇಲೆ ಇವಿಎಂ ಮೇಲೆ ಗಂಭೀರ ಆಪಾದನೆಯನ್ನು ಮಾಡಿದ್ದು ಬಿಜೆಪಿಯೇ. ಆ ಪಕ್ಷದ ಸೆಫಾಲಜಿಸ್ಟ್, ಈಗ ವಕ್ತಾರರಾಗಿರುವ ಸಿ.ವಿ.ಎಲ್. ನರಸಿಂಹರಾವ್ ಎಂಬುವರು ಈ ಬಗ್ಗೆ ಬರೆದ ಪುಸ್ತಕಕ್ಕೆ ಮುನ್ನುಡಿ ಬರೆದ ಎಲ್. ಕೆ. ಅದ್ವಾನಿಯವರೇ, ಜರ್ಮನಿ, ಅಮೆರಿಕಾ ತಿರಸ್ಕರಿಸಿದ ಇವಿಎಂ ಅನ್ನು ನಾವು ಒಪ್ಪಬಾರದು ಎಂದು ವಾದಿಸಿದ್ದರು. ಈಗ ಹಾಕಿದ ಓಟಿಗೆ ಕಾಗದದ ಸಾಕ್ಷಿ ನೀಡುವ ವಿವಿ ಪ್ಯಾಟ್ ಯಂತ್ರಗಳು ಬಳಕೆಯಾಗಲು ಸಹ ಹಿಂದೆ ಸುಪ್ರೀಂಕೋರ್ಟ್ ನೀಡಿದ ಆದೇಶವೇ ಕಾರಣ.

ಆ ಆದೇಶ ಬರುವಂತಾದದ್ದು ಬಿಜೆಪಿ ನಾಯಕ ಸುಬ್ರಹ್ಮಣ್ಯ ಸ್ವಾಮಿಯವರು ಹಾಕಿದ ಕೇಸ್‌ನಿಂದಾಗಿ ಎಂಬುದು ಆಸಕ್ತಿದಾಯಕ ಸಂಗತಿ. ಈ ಬಾರಿ ನೂರಾರು ಕ್ಷೇತ್ರಗಳಲ್ಲಿ ಒಟ್ಟಾರೆ ಚಲಾವಣೆಯಾದ ಮತಕ್ಕೂ, ಎಣಿಕೆಯಾದ ಮತಕ್ಕೂ ತಾಳೆಯಾಗಿಲ್ಲ. ಮಹಾರಾಷ್ಟ್ರ ಒಂದರಲ್ಲೇ ೨೬ ಲೋಕಸಭಾ ಕ್ಷೇತ್ರಗಳಲ್ಲಿ ಮತಗಳೂ ಹೆಚ್ಚಿದ್ದರೆ, ೨೨ ಕ್ಷೇತ್ರಗಳಲ್ಲಿ ಕಡಿಮೆ ಇದೆ!

ಇದೀಗ ಇವಿಎಂ ವಿರುದ್ಧ ಹೋರಾಟ ಮಾಡಲು ವೇದಿಕೆಯೊಂದು ರೂಪುಗೊಂಡಿದೆ. ನಿವೃತ್ತ ನ್ಯಾಯಾಧೀಶ ಕೋಲ್ಸೆ ಪಾಟೀಲ್, ಸುರೇಶ್ ಖೈರ್‌ನಾರ್, ಶಬನಮ್ ಹಶ್ಮಿ ಮೊದಲಾದವರ ನೇತೃತ್ವದಲ್ಲಿ ಇರುವ ಇವಿಎಂ ವಿರೋಧಿರಾಷ್ಟ್ರೀಯ ಜನಾಂದೋಲನ ವೇದಿಕೆಯ ಕರೆಯ ಮೇರೆಗೆ, ಮತ್ತೆ ಮತಪತ್ರ (ಬ್ಯಾಲಟ್ ಪೇಪರ್)ದೊಂದಿಗೇ ಇನ್ನು ಮುಂದೆ ಭಾರತದಲ್ಲಿ ಚುನಾವಣೆಯಾಗಲಿ ಎಂದು ಮೂರು ವಾರಗಳ ಹಿಂದೆ ಭಾರತದ ಅನೇಕ ದೊಡ್ಡ ನಗರಗಳಲ್ಲಿ ಪ್ರತಿಭಟನೆ ನಡೆಯಿತು. ಭಾರತದಲ್ಲಿ ಉತ್ಪಾದನೆಯಾದ ಇವಿಎಂ ಯಂತ್ರಗಳಲ್ಲಿ ೨೦ ಲಕ್ಷ ಕಾಣದಂತೆ ಮಾಯವಾಗಿವೆ ಎಂಬ ಸುದ್ದಿ ಬೆಳಕಿಗೆ ಬಂದಿದೆ. ಇದನ್ನು ಚುನಾವಣಾ ಆಯೋಗವೇ ಬಾಂಬೆ ಹೈಕೋರ್ಟ್‌ನಲ್ಲಿ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಯಲ್ಲಿ ಒಪ್ಪಿಕೊಂಡಿದೆ. ಎಂದರೆ ಮತದಾನ ನಡೆದ ಯಂತ್ರಗಳ ಬದಲು ಇಂಥ ಯಂತ್ರಗಳನ್ನು ಆಯ್ದ ಸ್ಟ್ರಾಂಗ್ ರೂಮ್‌ಗಳಲ್ಲಿ ಬದಲಾವಣೆ ಮಾಡಿರಬಹುದು ಎಂಬ ಅನುಮಾನ ದಟ್ಟವಾಗಿದೆ. ಇದಕ್ಕೆ ಪೂರಕವಾಗಿ ದೇಶದ ಅನೇಕ ಭಾಗಗಳಲ್ಲಿ ಇವಿಎಂಗಳನ್ನು ಸಂದೇಹಾಸ್ಪದವಾಗಿ ಸಾಗಿಸುತ್ತಿದ್ದ ಸುದ್ದಿ ಬಂದಿದೆ. ಹೋಟೆಲ್ ರೂಮುಗಳಲ್ಲಿಯೂ ಅನಧಿಕೃತ ಮೆಶೀನ್‌ಗಳು ಸಿಕ್ಕಿವೆ. ಒಂದು ಕೊರಿಯರ್ ಕಾಗದವನ್ನು ಸತತವಾಗಿ ಟ್ರಾಕ್ ಮಾಡಲು ಸಾಧ್ಯವಿರುವ ಕಾಲದಲ್ಲಿ ಇವಿಎಂ ಅನ್ನು ಏಕೆ ಟ್ರಾಕ್ ಮಾಡಲಾಗುತ್ತಿಲ್ಲ ಎಂದು ತೀಸ್ತಾ ಸೆಟಲ್‌ವಾಡ್ ಪ್ರಶ್ನಿಸಿದ್ದಾರೆ.

ಇದಲ್ಲದೆ ಇವಿಎಂ ಯಂತ್ರವನ್ನೇ 'ಹ್ಯಾಕ್' ಮಾಡಲಾಗುತ್ತದೆ ಎಂಬ ಗುಮಾನಿಯಿದೆ. ಚುನಾವಣಾ ಆಯೋಗವು ನಮ್ಮ ಯಂತ್ರಗಳು ಅಂತರ್ಜಾಲಕ್ಕೆ ಲಿಂಕ್ ಆಗಿಲ್ಲ. ಅದರಲ್ಲಿ ಒಮ್ಮೆ ಮತದಾನವಾದ ನಂತರ ಏನೂ ಬದಲಾವಣೆ ಮಾಡಲು ಸಾಧ್ಯವಿಲ್ಲ ಎಂದು ವಾದಿಸುತ್ತಿದೆ. ಆದರೆ ಅಮೆರಿಕಾದ ಅನೇಕ ಪತ್ರಿಕೆಗಳು ಈ ವಾದಗಳನ್ನೇ ವಿವರವಾಗಿ ಪ್ರಶ್ನಿಸಿವೆ ಹಾಗೂ ಸಾಧ್ಯ ಎಂದು ವಾದಿಸಿವೆ. ಆದ್ದರಿಂದಲೇ ತಾಂತ್ರಿಕವಾಗಿ ಅತ್ಯಂತ ಮುಂದುವರೆದ ರಾಷ್ಟ್ರಗಳಾದ ಜರ್ಮನಿ, ಅಮೆರಿಕಾ ಇನ್ನೂ ಅನೇಕ ಮುಂದುವರೆದ ರಾಷ್ಟ್ರಗಳು ಈ ಯಂತ್ರಗಳನ್ನು ಉಪಯೋಗಿಸುತ್ತಿಲ್ಲ. ಬ್ಯಾಲಟ್ ಪೇಪರ್ ಉಪಯೋಗಿಸಿ ಚುನಾವಣೆ ನಡೆಸಲು ಸಮಯಾವಕಾಶ ಸಾಲದು ಎಂದು ಜನವರಿ ತಿಂಗಳಲ್ಲಿ ಚುನಾವಣೆ ೩-೪ ತಿಂಗಳು ದೂರವಿದ್ದಾಗ ಆಯೋಗವು ಸುಪ್ರೀಂ ಕೋರ್ಟ್‌ನಲ್ಲಿ ವಾದಿಸಿದ್ದು ಹಾಸ್ಯಾಸ್ಪದವಾಗಿತ್ತು. ಏಕೆಂದರೆ ಹಿಂದೆಲ್ಲಾ ಮತಪತ್ರಗಳಲ್ಲಿ ಚುನಾವಣೆ ನಡೆಯುತ್ತಿದ್ದಾಗ ಎರಡೇ ತಿಂಗಳಲ್ಲಿ ಮತಪತ್ರ ಮುದ್ರಣವೂ ಸೇರಿದಂತೆ ಎಲ್ಲಾ



ಸಿದ್ಧತೆ ಮುಗಿದಿರುತ್ತಿತ್ತು! ಅದೇನೇ ಇರಲಿ ಇಷ್ಟೊಂದು ಗುಮಾನಿ ಇರುವಾಗ ಇವಿಎಂ ಅನ್ನು ಉಪಯೋಗಿಸಲೇ ಬೇಕೆಂಬ ಹಟ ಏಕೆ? ಎಡಪಕ್ಷಗಳೂ ಸೇರಿದಂತೆ ಎಲ್ಲ ರಾಜಕೀಯ ಪಕ್ಷಗಳು ಇದರ ಬಗ್ಗೆ ಆಂದೋಲನ ನಡೆಸುವ ದಿಕ್ಕಿನಲ್ಲಿ ಯೋಚಿಸಬೇಕಾಗಿದೆ.

**ಹಣ ಮತ್ತು ಮಾಧ್ಯಮ**

ಇವಿಎಂನ ಚರ್ಚೆಯನ್ನು ಪಕ್ಕಕ್ಕಿಟ್ಟರೂ ಸಹ ಬಿಜೆಪಿಯ ಅಸಹಜ ಗೆಲುವಿಗೆ ಇನ್ನಷ್ಟು ಕಾರಣಗಳನ್ನು ಗುರುತಿಸಬಹುದು. ಸಿಎಂಎಸ್ ಸಂಸ್ಥೆಯು ವರದಿ ಮಾಡಿರುವ ಪ್ರಕಾರ ೨೦೧೪ರಲ್ಲಿ ಭಾರತದ ಲೋಕಸಭಾ ಚುನಾವಣೆಗೆ ೩೦ ಸಾವಿರ ಕೋಟಿ ರೂಪಾಯಿಗಳನ್ನು ಖರ್ಚು ಮಾಡಲಾಗಿತ್ತು. ಇದೇ ವಿಶ್ವದ ಅತ್ಯಂತ ದುಬಾರಿ ಚುನಾವಣೆ ಎನ್ನುವವರಿಗೆ ಈ ಬಾರಿಯ ಚುನಾವಣೆ ಇನ್ನೂ ದೊಡ್ಡ ಆಘಾತವನ್ನು ನೀಡಲಿದೆ. ಏಕೆಂದರೆ ಈ ಬಾರಿ ೬೦,೦೦೦ ಕೋಟಿಗಳು ಖರ್ಚಾಗಿವೆ. ಇದರಲ್ಲಿ ಭಾರತದ ಎಲ್ಲ ಪಕ್ಷಗಳು ಸೇರಿ ಶೇಕಡಾ ೫೫ರಷ್ಟು ಖರ್ಚುಮಾಡಿದರೆ, ಬಿಜೆಪಿ ಒಂದೇ ೨೭ ಸಾವಿರ ಕೋಟಿಯನ್ನು ಎಂದರೆ ಶೇಕಡಾ ೪೫ರಷ್ಟು ಹಣವನ್ನು ಖರ್ಚುಮಾಡಿದೆ. ಸರಳ ಜೀವನದ ಬಗ್ಗೆ ಉಪದೇಶ ಮಾಡುತ್ತಿದ್ದ ಪರಿವಾರದ ಜನ ಇದರ ಬಗ್ಗೆ ಏನು ಹೇಳಿಯಾರು? ಬಿಜೆಪಿಯ ಹಣದ ಮೂಲಗಳು ಯಾವವು? ಅದೇನೇ ಇರಲಿ ಬಿಜೆಪಿಗೆ ಎಲ್ಲ ಪಕ್ಷಗಳಿಗಿಂತ ಮುಂದೆ ನುಗ್ಗಲು ಹಣದ ಬೆಂಬಲವೇ ಅತಿದೊಡ್ಡ ಶಕ್ತಿ ಎಂಬುದು ನಿಸ್ಸಂದೇಹ.

ಅಮೆರಿಕನ್ ಸಾಮ್ರಾಜ್ಯಶಾಹಿಗಳು ಹಿಂದೆ "ಮಾಹಿತಿಯೇ ಅಧಿಕಾರದ ಶಕ್ತಿ" ಎಂದು ಘೋಷಿಸಿದ್ದರು. ಬಿಜೆಪಿ ಇದನ್ನು ಅತ್ಯಂತ ವ್ಯವಸ್ಥಿತವಾಗಿ ಭಾರತದಲ್ಲಿ ಮಾಡುತ್ತಿದೆ. ಇಪ್ಪತ್ತನಾಲ್ಕು ಗಂಟೆ ಪ್ರತಿ ಮನೆಯೊಳಗೂ ನುಗ್ಗಿ ಅರಚುವ 'ಕೂಗುಮಾರಿ' ಟಿವಿಗಳು ಭಾರತದಾದ್ಯಂತ ಬಿಜೆಪಿಯ ಬಗ್ಗೆ ಪ್ರಚಾರ ಮಾಡಿವೆ. ಆದ್ದರಿಂದಲೇ ರಫೇಲ್ ಹಗರಣ, ನೋಟಿನ ಅಮಾನ್ಯೀಕರಣ, ಚುನಾವಣಾ ನೀತಿಸಂಹಿತೆಯನ್ನು ಪ್ರಧಾನಿಗಳೇ ಉಲ್ಲಂಘಿಸಿದ್ದು, ಸರ್ಕಾರದ ವೈಫಲ್ಯಗಳು, ಅಲ್ಪಸಂಖ್ಯಾತರ ಮೇಲಿನ ದಾಳಿಗಳು ಯಾವುದೂ ಸುದ್ದಿಯಾಗಲಿಲ್ಲ. ಕಡೆಗೆ ಬಿಜೆಪಿಗೆ ಬಹುಮತ ಬರಲಾರದು ಎನ್ನುತ್ತಿದ್ದ ಟಿವಿಗಳು ಸಹ ತಮ್ಮದೇ ವರದಿಗಳನ್ನು ಪಕ್ಕಕ್ಕೆ ತಳ್ಳಿ, ತಪ್ಪುಗಳಿಂದ ಪ್ರಮಾದಗಳಿಂದ ಕೂಡಿದ್ದ ಎಕ್ಸಿಟ್‌ಪೋಲ್ ನಡೆಸಿ ಬಿಜೆಪಿಯ ಗೆಲುವು ಸಹಜ ಎಂದು ಬಿಂಬಿಸಲು ಯತ್ನಿಸಿದವು.

ಮಾಧ್ಯಮಗಳಲ್ಲಿ ಒಂದು ಭಾಗ ಸಂಪೂರ್ಣವಾಗಿ ಬಿಜೆಪಿ ಪರವಾಗಿದೆ. ಕೆಲವರಂತೂ ಆ ಪಕ್ಷಕ್ಕೆ ಸೇರಿದವರು. ಇನ್ನು ಅನೇಕರು ಸರ್ಕಾರದ ಜಾಹಿರಾತಿನ ಎಂಜಲಿಗೆ ಬಾಯಿಬಿಡುವವರು. ಆ ಎಂಜಲು ಬೃಹತ್ ಗಾತ್ರದ್ದು. ಅದಿಲ್ಲದೆ ಬಡಕಲಾಗುವ ಭಯ ಅವರನ್ನು ಕಾಡುತ್ತದೆ. ಇದು ಪ್ರಲೋಭನೆಯ 'ಕ್ಯಾರಟ್' ಆದರೆ, ಸರ್ಕಾರ ಇನ್ನೊಂದು ಕೈನಲ್ಲಿ ಬೆದರಿಕೆಯ 'ಸ್ಟಿಕ್'– ದೊಣ್ಣೆಯನ್ನೂ ಹಿಡಿದಿದೆ. ಇ.ಡಿ. (ಎನ್‌ಫೋರ್ಸ್‌ಮೆಂಟ್ ಡೈರೆಕ್ಟರೇಟ್), ಇನ್‌ಕಂಟಾಕ್ಸ್, ಮೊಕದ್ದಮೆಗಳು ಇವುಗಳನ್ನೆಲ್ಲಾ ಉಪಯೋಗಿಸಿ ಬಿಜೆಪಿ ಸರ್ಕಾರವು ಹೇಳಿದ ಮಾತು ಕೇಳಿದಿದ್ದ ಚಾನೆಲ್‌ಗಳನ್ನು, ವೃತ್ತಪತ್ರಿಕೆಗಳನ್ನು ಬಡಿದು ಬೆಂಡೆತ್ತಿದೆ. ಇದಲ್ಲದೆ ಅನೇಕ

ಮಾಧ್ಯಮಗಳು ಈ ದೇಶದ ದೊಡ್ಡ ಬಂಡವಾಳಗಾರರ ಮಾಲಿಕತ್ವದಲ್ಲಿರುವಂಥವು. ಮಾಲಿಕರು ಬಿಜೆಪಿಗೆ ಜೈ ಎಂದ ಮೇಲೆ ಸೇವಕರು ಎಲ್ಲ ವೃತ್ತಿ ನೈತಿಕತೆ, ಆತ್ಮಗೌರವಗಳನ್ನೂ ತೊರೆದು ಆಳುವ ಪಕ್ಷದ ಗೆಲುವಿಗೆ ಶ್ರಮಿಸುತ್ತಾರೆ.

**ಆಯೋಗದ ಅಯೋಗ್ಯತನ**

ಸಾಮಾನ್ಯವಾಗಿ ಹಣದ ದುರುಪಯೋಗ, ಮಾದರಿನೀತಿಸಂಹಿತೆಯ ಉಲ್ಲಂಘನೆ ಇವುಗಳ ಬಗ್ಗೆ ಮೂಕವಾಗಿರುವ ಭಾರತದ ಚುನಾವಣಾ ಆಯೋಗವು ಈ ಬಾರಿಯಂತೂ ಸಂಪೂರ್ಣವಾಗಿ ಬಿಜೆಪಿಯ ತಾಳಕ್ಕೆ ಅನುಗುಣವಾಗಿ ಕುಣಿದಿದೆ. ಇವಿಎಂ ದುರುಪಯೋಗಕ್ಕೆ ಸಂಬಂಧಿಸಿದಂತೆ ಅದು ಸುಪ್ರೀಂಕೋರ್ಟ್‌ನಲ್ಲಾಗಲೀ, ಹೊರಗಡೆಯಾಗಲೀ ನೀಡಿರುವ ಹೇಳಿಕೆಗಳು ಬಿಜೆಪಿಯ ಮುಖವಾಣಿಯಂತೆಯೇ ಇವೆ. ಪುಲ್ವಾಮಾ ದಾಳಿಯನ್ನು ಪ್ರಧಾನಿಗಳು ಸಂಪೂರ್ಣವಾಗಿ ದುರುಪಯೋಗ ಪಡಿಸಿಕೊಂಡರು. ಪುಲ್ವಾಮಾ, ಬಾಲಾಕೋಟ ಪ್ರಕರಣಗಳನ್ನು ಉಲ್ಲೇಖಿಸಿ ಚುನಾವಣೆಯಲ್ಲಿ ಮಾತನಾಡಬಾರದು ಎಂದು ಆಯೋಗ ತಾಕೀತು ಮಾಡಿದರೂ ಪ್ರಧಾನಿಗಳು ಅದಕ್ಕೆ 'ಕ್ಯಾರೆ' ಎನ್ನಲಿಲ್ಲ. ಬಿಜೆಪಿಯ ನಾಯಕ ಶಿಖಾಮಣಿಗಳು ಅತ್ಯಂತ ನಗ್ನವಾಗಿ ಕೋಮುವಾದಿ ಪ್ರಚಾರವನ್ನೇ ಮಾಡಿದರೂ ಆಯೋಗ ಕಮಕ್ ಕಿಮಕ್ ಎನ್ನಲಿಲ್ಲ. ಆಯೋಗಕ್ಕಿರುವ ಕೆಟ್ಟ ಇತಿಹಾಸದಲ್ಲಿಯೂ ಇದು ಅತ್ಯಂತ ಹೀನಾಯವಾದ ಅಧ್ಯಾಯ.

**ವಿರೋಧ ಪಕ್ಷಗಳ ವೈಫಲ್ಯ**

ಕಾಂಗ್ರೆಸ್ ಸೇರಿದಂತೆ ಎಲ್ಲಾ ವಿರೋಧ ಪಕ್ಷಗಳೂ ಇಂದು ಏಟು ತಿಂದು ಸಂಪೂರ್ಣವಾಗಿ ಮುಖಾಡೆಯಾಗಿ ಬಿದ್ದಿವೆ. ಅವರಿಗೆ ತಮ್ಮ ಏಟು ಎಲ್ಲಿಂದ ಬಿತ್ತು ಎಂಬ ಅರಿವೂ ಆದಂತಿಲ್ಲ. ಅವರ ಲೆಕ್ಕಾಚಾರಗಳು ಎಡವಿದ್ದೆಲ್ಲಿ ಎಂಬ ಗಂಭೀರ ಆತ್ಮವಿಮರ್ಶೆಯೂ ಕಾಣುತ್ತಿಲ್ಲ. ಯೋಗೇಂದ್ರ ಯಾದವ್ ಅಂಥ ಬುದ್ಧಿಜೀವಿಗಳು ಕಾಂಗ್ರೆಸ್ ಸತ್ತಿದೆ. ಅದನ್ನು ವಿಸರ್ಜಿಸಬೇಕು ಎನ್ನುತ್ತಿದ್ದಾರೆ. ಕಾಂಗ್ರೆಸ್ ಈ ಬಾರಿ ಬಿಜೆಪಿಯನ್ನು ಸೋಲಿಸಬಹುದು ಎಂದು ಭರವಸೆ ಇಟ್ಟುಕೊಂಡು ಈಗ ಹತಾಶರಾದ ಅನೇಕ ಬುದ್ಧಿಜೀವಿಗಳೂ ಹೀಗೆಯೇ ಮಾತನಾಡುತ್ತಿದ್ದಾರೆ.

ವಾಸ್ತವದಲ್ಲಿ ಕಾಂಗ್ರೆಸ್ ಬಿಜೆಪಿಯನ್ನೆದುರಿಸಲು ಬೇಕಾದ ಸೈದ್ಧಾಂತಿಕ ಹಾಗೂ ಸಂಘಟನಾತ್ಮಕ ತಯಾರಿಯನ್ನು ಮಾಡಿಕೊಂಡೇ ಇಲ್ಲ. ಕಳೆದ ಹತ್ತಿಪ್ಪತ್ತು ವರ್ಷಗಳಲ್ಲಿ ಸಂಪೂರ್ಣವಾಗಿ ಜಾಗತೀಕರಣಕ್ಕೆ ಕೆಂಪು ಹಾಸು ಹಾಸಿ ಬರಮಾಡಿಕೊಂಡ, ಏಕಸ್ವಾಮ್ಯ ಬಂಡವಾಳಶಾಹಿ ಪರವಾದ ರೈತ – ಕಾರ್ಮಿಕ ವಿರೋಧಿ ನೀತಿಗಳನ್ನೇ ಅನುಸರಿಸಿರುವ ಕಾಂಗ್ರೆಸ್‌ಗೆ ಬಿಜೆಪಿಯ ಆರ್ಥಿಕ ನೀತಿಗಳನ್ನು ವಿರೋಧಿಸಲು ನೈತಿಕ ಶಕ್ತಿ ಇಲ್ಲ. ಮೃದು ಹಿಂದುತ್ವವನ್ನು ಅಪ್ಪಿಕೊಳ್ಳುತ್ತಾ, ಸ್ವತಃ ಆಗಾಗ 'ಹಿಂದೂ ಕಾರ್ಡ್'ಅನ್ನೇ ಉಪಯೋಗಿಸುವ ಕಾಂಗ್ರೆಸ್ ಪಕ್ಷವು, ಬಿಜೆಪಿಯ ಅಪ್ಪಟ ಕೋಮುವಾದವನ್ನು ಸೋಲಿಸಬಲ್ಲ ಗಟ್ಟಿಯಾದ ರಾಜಕೀಯ ಶಕ್ತಿ ಅಲ್ಲ. ಎಸ್‌ಪಿ, ಬಿಎಸ್‌ಪಿ, ಆರ್‌ಜೆಡಿ ಮುಂತಾದ ಪಕ್ಷಗಳು ಜಾತಿ ಸಮೀಕರಣದಿಂದ ಕೋಮುವಾದವನ್ನು ಗೆಲ್ಲಬಹುದು ಎಂದು ಕೊಂಡಿದ್ದವು. ನಮ್ಮಲ್ಲಿ ಕೆಲವು ಬುದ್ಧಿಜೀವಿಗಳಿಗೂ, ಲೇಖಕರಿಗೂ ಸಹ ಇಂಥ ಭ್ರಮೆಗಳಿವೆ. ಹಿಂದೆ ಒಂದೆರಡುಬಾರಿ ಅದು ಯಶಸ್ವಿಯಾಗಿರಬಹುದು. ಆದರೆ ತತ್ವನಿಷ್ಠ ಜನಪರ ಹೋರಾಟಗಳ ಮೂಲಕ ಕೋಮುವಾದವನ್ನು ಸೋಲಿಸಬೇಕೇ ಹೊರತು ತಾತ್ಕಾಲಿಕ ಲಾಭ ತರಬಹುದಾದ ಜಾತಿ ಸಮೀಕರಣದಿಂದಲ್ಲ. ಈ ಬಾರಿ ಅದೂ ಕೆಲಸಮಾಡಿಲ್ಲ. ಎಸ್‌ಪಿ ಮತ್ತು ಬಿಎಸ್‌ಪಿಗಳ ಮತಗಳನ್ನು ಸೇರಿಸಿ ಗೆಲ್ಲಬಹುದೆಂಬ ಅಂಕಗಣಿತಕ್ಕೆ ಸೋಲಾಗಿದೆ. ಕಳೆದ ಬಾರಿ ಗೆದ್ದ ಬಿಜೆಪಿ ಈ ಬಾರಿ ಮತದಾರರ 'ಸತ್ತಾ ವಿರೋಧಿ ಮನೋಭಾವ' (ಆ್ಯಂಟಿ ಇನ್‌ಕಂಬೈನ್ಸ್)ದ ಅಂಶದಿಂದಾಗಿ ೨೦೦೪ರಲ್ಲಿ ವಾಜಪೇಯಿ ಸೋತಂತೆ ತಾನಾಗಿಯೇ ಸೋಲುತ್ತದೆ. ಅಧಿಕಾರ ನಿರಾಯಾಸವಾಗಿ ನಮಗೆ ಬರುತ್ತದೆ ಎಂದೂ ಕೆಲವು ವಿರೋಧ ಪಕ್ಷದ ನಾಯಕರು ಭಾವಿಸಿದ್ದಂತೆ ಕಾಣುತ್ತದೆ. ಆದರೆ ಅವರು ಈ ಬಾರಿ ಎದುರಿಸಿದ್ದು ಕನಸುಗಾರ ಕವಿಯೂ, ಅನಾರೋಗ್ಯದಿಂದ ಸುಸ್ತಾಗಿದ್ದವರೂ ಆದ ವಾಜಪೇಯಿಯನ್ನಲ್ಲ. ಅತ್ಯಂತ ಲೆಕ್ಕಾಚಾರದ, ಸಮರೋತ್ಸಾಹದ ಮೋದಿ – ಶಾ ಜೋಡಿಯನ್ನು. ವಾಜಪೇಯಿ – ಅದ್ವಾನಿಗೆ ನಾವು ಕೆಟ್ಟವರಾಗಿ ಕಾಣಬಾರದು ಎಂಬ ಭಯ. ಮೇಲ್ಪದರದ ಸಭ್ಯತೆಯಾದರೂ ಇತ್ತು. ಆದರೆ ರಾಜಕೀಯ ಸಂಪೂರ್ಣ ಭಂಡತನಕ್ಕಿಳಿದಾಗ ಇದಾವುದೂ ಉಳಿಯುವುದಿಲ್ಲ. ಇವರನ್ನು ಎದುರಿಸಲು ವಿರೋಧ ಪಕ್ಷಗಳು ವರ್ಷ – ಎರಡು ವರ್ಷಗಳ ಹಿಂದೆಯೇ ಸಂಪೂರ್ಣ ಭಿನ್ನವಾದ ಹೋರಾಟವನ್ನು, ಒಗ್ಗಟ್ಟನ್ನು ಆಕರ್ಷಕ ಸಂಕಥನವನ್ನು ಕಟ್ಟಬೇಕಿತ್ತು. ಆದರೆ ರಾಜಕೀಯ ಮೇಲಾಟ, ಒಳಜಗಳ, ಪ್ರಧಾನಿ ಪಟ್ಟದ ಮೇಲೆ ಕಣ್ಣು, ತಮ್ಮ ತಮ್ಮ ರಾಜಕೀಯ ತಳಹದಿಗಳ ವಿಸ್ತರಣೆಯ ಲೆಕ್ಕಾಚಾರದಲ್ಲಿ ಮುಳುಗಿದವರಿಗೆ ದೇಶದ ಭವಿಷ್ಯದ ಬಗ್ಗೆ ಗಮನವಿರುವುದು ಸಾಧ್ಯವೇ!

ಮತ್ತು ಇವರೆಲ್ಲರೂ ಹಿಂದುತ್ವದ ಬೆಳವಣಿಗೆಯ ಅಪಾಯವನ್ನು ಗುರುತಿಸಿಯೇ ಇಲ್ಲ. ಹಿಂದುತ್ವವಾದಿಗಳು ಇಂದು ದೇಶದ ನ್ಯಾಯಾಂಗ, ಸೈನ್ಯ, ಪೊಲೀಸ್, ಮಾಧ್ಯಮಗಳು, ವಿಶ್ವವಿದ್ಯಾಲಯಗಳು, ಸಾಂವಿಧಾನಿಕ ಸಂಸ್ಥೆಗಳು ಎಲ್ಲೆಡೆ ತಮ್ಮ ಜಾಲವನ್ನು ಹರಡಿದ್ದಾರೆ. ಸಾಮಾಜಿಕ ಜಾಲತಾಣಗಳ ಮೂಲಕ ಸುಳ್ಳು, ಸಂಶಯ, ಸನಾತನವಾದ – ಕೋಮುವಾದಗಳ ಮೃದು ವಿಷ, ಕಾರ್ಕೋಟಕ ವಿಷ ಎಲ್ಲವನ್ನೂ ದೇಶದ ಶರೀರದ ತುಂಬ ತುಂಬಿದ್ದಾರೆ. ಇಂದು ಇದು ಜನತಾಂತ್ರಿಕ ಮನಸ್ಸುಳ್ಳ ಕುಟುಂಬ ಗಳನ್ನೂ, ಸದಸ್ಯರನ್ನೂ ಸಹ ಆವರಿಸಿದೆ. ಇದು ಫ್ಯಾಸಿಸಂ ಸದ್ದಿಲ್ಲದೆ ಹರಡಿಕೊಳ್ಳುವ ರೀತಿ, ಚುನಾವಣೆಯಲ್ಲಿ ಬಿಜೆಪಿ ಸೋತರೂ ಸಹ ಈ ವಿಷವನ್ನು ದೇಹದಿಂದ ಹೊರಹಾಕಲು ಹತ್ತು ವರ್ಷ ಪ್ರಜ್ಞಾಪೂರ್ವಕವಾಗಿ ಚಿಕಿತ್ಸೆ ನೀಡಬೇಕಾಗುತ್ತದೆ.

**ಬರಲಿವೆ ಕರಾಳ ದಿನಗಳು**

ಇನ್ನೂ ಚುನಾವಣೆ ಮುಗಿದಿಲ್ಲ ಎನ್ನುವಾಗಲೇ ಬಿಜೆಪಿಯ ನಾಯಕರು ಸಂವಿಧಾನವನ್ನು ಬದಲಿಸುತ್ತೇವೆ ಎನ್ನುತ್ತಿದ್ದರು. ಅಲ್ಪಸಂಖ್ಯಾತರನ್ನು ಬೆದರಿಸುತ್ತಿದ್ದರು. ಚುನಾವಣೆ ಮುಗಿದು ಬಿಜೆಪಿ ಗೆದ್ದಾದ ಮೇಲಂತೂ ಅಲ್ಪಸಂಖ್ಯಾತರ ಮೇಲೆ ದಲಿತರ ಮೇಲೆ ದೌರ್ಜನ್ಯಗಳು ದೊಡ್ಡ ಪ್ರಮಾಣದಲ್ಲಿ ಸ್ಫೋಟವಾಗುತ್ತಿವೆ. ಸುಮಾರು ಆರು ಲಕ್ಷ ಕೇಡರ್‌ಗಳಿರುವ ಸಂಘಪರಿವಾರ ಇನ್ನು ಎಗ್ಗುಸಿಗ್ಗಿಲ್ಲದೆ ಮುನ್ನುಗ್ಗುತ್ತದೆ ಎಂದು ಅನೇಕ ಲೇಖಕರು ಆತಂಕವನ್ನು ವ್ಯಕ್ತಪಡಿಸಿದ್ದಾರೆ.

ಚುನಾವಣಾ ಪ್ರಚಾರದ ಸಮಯದಲ್ಲೇ ಮುಸ್ಲಿಮರನ್ನು ಬಿಜೆಪಿಯ ಉನ್ನತ ನಾಯಕರೇ 'ಗೆದ್ದಲು ಹುಳಗಳು' ಎಂದರು. 'ಹಸಿರು ವೈರಸ್' ಎಂದರು. ಈಗಂತೂ ಎಲ್ಲೆಡೆ ಗೋರಕ್ಷಕರು ಮುಸ್ಲಿಮರನ್ನು ಹಿಡಿದು ಅವರು ಗೋಮಾಂಸ ತಿನ್ನುತ್ತಾರೆ ಎಂದು ಚಚ್ಚುತ್ತಿದ್ದಾರೆ. ಮೇ ೨೨ರಂದು ಮಧ್ಯಪ್ರದೇಶದಲ್ಲಿ ಒಬ್ಬ ಹೆಣ್ಣುಮಗಳೂ ಸೇರಿದಂತೆ ಮೂವರು ಮುಸ್ಲಿಮರನ್ನು ಸಾಯುವಂತೆ ಹೊಡೆಯಲಾಯಿತು. ಗುಜರಾತಿನ ವಡೋದರದಲ್ಲಿ ದಲಿತ ದಂಪತಿಗಳ ಮೇಲೆ ಹಲ್ಲೆ

## ವಚನಗಳು



ಮನೆಗೆ ಕಿಟಕಿ ಬಾಗಿಲುಗಳಾಗಿ
ರೈತನಿಗೆ ಉಳಲು ನೇಗಿಲಾಗಿ
ಪ್ರಾಣಿ ಪಕ್ಷಿಗಳ ಹಸಿವು ನೀಗಿ
ಬಿಸಿಲಲ್ಲಿ ಬಳಲಿ ಬಂದವರಿಗೆ ನೆರಳಾಗಿ
ಉದುರುವ ಎಲೆಗರಿಗಳು ಗೊಬ್ಬರವಾಗಿ
ಉದುರುವ ಎಲೆಗರಿಗಳು ಗೊಬ್ಬರವಾಗಿ
ಅನ್ನದಾತನ ಬಿತ್ತನೆಗೆ ಪುಷ್ಟಿಯಾಗಿ
ಎದುರು ನಿಂತಿರುವೆಯೆಲ್ಲ ಮರವಾಗಿ
ನಿನ್ನ ಮುಂದೆ ಮಾನವ ಜನ್ಮ ತೃಣವಾಯಿತು

– ರತ್ನದೀಪ

ಎ. ಜಿ. ರತ್ನಕಾಳೇಗೌಡ
ಬೆಂಗಳೂರು – ೯೭

ನಡೆದಿದೆ. ಉತ್ತರ ಪ್ರದೇಶದ ಬಿಜನೂರಿನಲ್ಲಿ ಅಂಬೇಡ್ಕರ್ ಪ್ರತಿಮೆಯನ್ನು ವಿರೂಪಗೊಳಿಸಲಾಗಿದೆ. ಮೇ ೨೫ರಂದು ಗುರುಗ್ರಾಮದಲ್ಲಿ ಮುಸಲ್ಮಾನನನ್ನು ಹೊಡೆಯಲಾಗಿದೆ. ಝಾರ್‌ಖಂಡದಲ್ಲಿ ಗೋಮಾಂಸ ಭಕ್ಷಣೆ ಆದಿವಾಸಿಗಳ ಹಕ್ಕು ಎಂದದ್ದಕ್ಕಾಗಿ ಆ ಸಮುದಾಯದ ಪ್ರೊಫೆಸರ್ ಒಬ್ಬರನ್ನು ದಸ್ತಗಿರಿ ಮಾಡಿ ಕೇಸು ಹಾಕಲಾಗಿದೆ. ಜಾತಿ ಅಪಮಾನವನ್ನು ತಡೆಯಲಾಗದೆ ಹಿಂದುಳಿದ ಸಮುದಾಯದ ವೈದ್ಯಕೀಯ ವಿದ್ಯಾರ್ಥಿನಿ ಪಾಯಲ್ ತಡವಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಅಸ್ಸಾಂನಲ್ಲಿ ೯೩ ವರ್ಷದ ಮುಸ್ಲಿಂ ವೃದ್ಧರೊಬ್ಬರು ತಮ್ಮನ್ನು ಭಾರತೀಯ ಅಲ್ಲ ಎಂದು ನಿರಾಕರಿಸಿದ್ದರಿಂದ ಆತ್ಮಹತ್ಯೆ ಮಾಡಿ ಕೊಂಡಿದ್ದಾರೆ. ಬನಾರಸ್ ಹಿಂದೂ ವಿಶ್ವವಿದ್ಯಾನಿಲಯದಲ್ಲಿ ಇಬ್ಬರು ದಲಿತ ವಿದ್ಯಾರ್ಥಿಗಳಿಂದ ಬಲವಂತವಾಗಿ ಶೌಚಾಲಯವನ್ನು ಸ್ವಚ್ಛಗೊಳಿಸಲಾಗಿದೆ. ಚುನಾವಣೆ ಮುಗಿದ ಮೇಲೆ ಬೇಗು ಸರಾಯ್‌ನಲ್ಲಿ ಮುಸ್ಲಿಂ ಯುವಕನನ್ನು ಆತನ ಮತ ಯಾವುದು ಎಂದು ಕೇಳಿ ಕೊಲ್ಲಲಾಗಿದೆ. ಬಿಜೆ ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿದ್ದ ಅಸ್ಪೃಶ್ಯ ವಿದ್ಯಾರ್ಥಿ ಮಹಿರಾಜ್ ಆತ್ಮಹತ್ಯೆಗೆ ಯತ್ನಿಸಿದರು. ಮೊನ್ನೆ ಗುಂಡ್ಲುಪೇಟೆಯಲ್ಲಿ ಬೆತ್ತಲೆ ಮೆರವಣಿಗೆ ನಡೆದಿದೆ. ದೆಹಲಿಯಲ್ಲೇ ಇನ್ನೆರಡು ಘಟನೆಗಳು ನಡೆದಿವೆ. ಯೋಗಿ ಆದಿತ್ಯನಾಥ್ ಕುರಿತು 'ಟ್ವೀಟ್' ಮಾಡಿದ ಅಪರಾಧಕ್ಕಾಗಿ ಅತ್ಯಂತ ಜನತಂತ್ರವಿರೋಧಿ ರೀತಿಯಲ್ಲಿ ಪತ್ರಕರ್ತರನ್ನು ಬಂಧಿಸಿ ಕಿರುಕುಳ ಕೊಡಲಾಗಿದ್ದು, ಸುಪ್ರೀಂ ಕೋರ್ಟ್‌ನ ಮಧ್ಯಪ್ರವೇಶದಿಂದ ಅವರು ಬಚಾವಾಗಿದ್ದಾರೆ. ಇದು ಮುಗಿಯದ ದುರಂತಗಳ ಪಟ್ಟಿ.




**ಕಾದಿವೆ ಆರ್ಥಿಕ ಪ್ರಹಾರಗಳು**

ಅದಾನಿ, ಅಂಬಾನಿ ಮತ್ತು ಇನ್ನೂ ಅನೇಕ ಏಕಸ್ವಾಮ್ಯ ಬಂಡವಾಳಗಾರರ ಹಾಗೂ ಅಂತರರಾಷ್ಟ್ರೀಯ ಹಣಕಾಸು ಬಂಡವಾಳದ ನೆರವಿನೊಂದಿಗೆ ಅಧಿಕಾರ ಗಿಟ್ಟಿಸಿಕೊಂಡಿರುವ ಬಿಜೆಪಿಯು ಬರಲಿರುವ ದಿನಗಳಲ್ಲಿ ದುಡಿಯುವ ವರ್ಗ ಹಾಗೂ ಮಧ್ಯಮವರ್ಗಗಳಿಗೆ ಅನೇಕ ಆರ್ಥಿಕ ಪೆಟ್ಟುಗಳನ್ನು ನೀಡಲಿದೆ. ನಲವತ್ತೆರಡು ಸಾರ್ವಜನಿಕ ಉದ್ದಿಮೆಗಳನ್ನು ಮುಚ್ಚಲು, ಖಾಸಗೀಕರಿಸಲು ನೀಲನಕ್ಷೆ ಸಿದ್ಧವಾಗಿದೆ. ಭವಿಷ್ಯ ನಿಧಿ, ಪಿಂಚಣಿಹಣ ಇವುಗಳನ್ನು ಮಾರುಕಟ್ಟೆ ಶಕ್ತಿಗಳಿಗೆ ಒಪ್ಪಿಸುವುದು, ವೈದ್ಯಕೀಯ ನೆರವನ್ನು ದುರ್ಬಲಗೊಳಿಸುವುದು ಸಹ ಯೋಜನೆಯಲ್ಲಿದೆ. ಇದೇನೇ ಆದರೂ ಆರ್ಥಿಕ ಮುಗ್ಗಟ್ಟು ಮುಗಿಯುವಂತಿಲ್ಲ. ಆಟೋಮೊಬೈಲ್ ಕ್ಷೇತ್ರ ಸ್ಥಗಿತಗೊಂಡಿದೆ. ಆರ್ಥಿಕ ಹಿಂಜರಿತ ವಿಶ್ವದಾದ್ಯಂತ ಸ್ಪಷ್ಟವಾಗಿದೆ. ಆದ್ದರಿಂದ ಮೋದಿ ಸರ್ಕಾರ ವಿತ್ತೀಯ ಕೊರತೆಯ ಸಮಸ್ಯೆಯಿಂದ ತಪ್ಪಿಸಿಕೊಳ್ಳಲು ರಿಸರ್ವ್ ಬ್ಯಾಂಕ್‌ನಲ್ಲಿರುವ ಒಂಭತ್ತು ಲಕ್ಷದ ಅರವತ್ತುಸಾವಿರ ಕೋಟಿ ಹಣದ ಮೇಲೆ ಕಣ್ಣು ಹಾಕಿದೆ.

**ಬರಲಿವೆ ಇನ್ನಷ್ಟು ಆಕ್ರಮಣಗಳು**

ಈ ಚುನಾವಣೆಯಲ್ಲೇ ಬಂಗಾಳವನ್ನು ಅರ್ಧಭಾಗ ನುಂಗಿರುವ ಬಿಜೆಪಿ ಮುಂದಿನ ವಿಧಾನಸಭಾ ಚುನಾವಣೆಯ ವೇಳೆಗೆ ಅದನ್ನು ಪೂರ್ತಿ ನುಂಗಿ ಅರಗಿಸಿಕೊಳ್ಳಬೇಕೆಂದಿದೆ. ಸಮಯಸಾಧಕತನದಿಂದ ಹಿಂದೆಲ್ಲಾ ಬಿಜೆಪಿಯ ಸಖ್ಯ ಮಾಡಿದ ತೃಣಮೂಲ ಕಾಂಗ್ರೆಸ್‌ಗೆ ಈಗ ಬಿಜೆಪಿ ಧೃತರಾಷ್ಟ್ರಾಲಿಂಗನದ ಅಪಾಯ ಅರ್ಥವಾಗಿದೆ.

ಸಿಪಿಎಂನ ಮುಖಂಡ ಸೀತಾರಾಮ್ ಯಚೂರಿಯವರೇ ಒಪ್ಪಿಕೊಂಡಿರುವಂತೆ ಅನೇಕ ಎಡಪಕ್ಷಗಳ, ಸಿಪಿಎಮ್‌ನ ಮುಖಂಡರು ಬಿಜೆಪಿಯ ಗೆಲುವಿಗೆ ತಮ್ಮ 'ಕಾಣಿಕೆ' ನೀಡಿದ್ದಾರಂತೆ. ತೃಣಮೂಲ ಕಾಂಗ್ರೆಸ್‌ನ ಗೂಂಡಾಗಿರಿಗೆ ಇದು ಉತ್ತರ ಎಂದು ಅವರುಗಳು ಭಾವಿಸಿದ್ದರೆ ಅದಕ್ಕಿಂತ ಆತ್ಮಘಾತಕ ನಿಲುವು ಇನ್ನೊಂದಿಲ್ಲ. ಬಿಜೆಪಿ ಒಮ್ಮೆ ಒಂದು ರಾಜ್ಯವನ್ನು ಪ್ರವೇಶಿಸಿದರೆ ಅದು ಉಳಿದ ಎಲ್ಲರನ್ನೂ ನುಂಗಿ ನೀರುಕುಡಿಯುತ್ತದೆ. ಸಾಲದೆಂಬಂತೆ ಇಡೀ ರಾಜ್ಯದಲ್ಲಿ ಕೋಮು ದಳ್ಳುರಿಯನ್ನು ಹಬ್ಬಿಸುತ್ತದೆ. ಆ ಗಾಯಗಳು ಮಾಯುವುದಕ್ಕೆ ದಶಕಗಳೇ ಬೇಕು. ಬಿಜೆಪಿ ನಂತರ ಒರಿಸ್ಸಾ ಮತ್ತು ಕೇರಳದ ಮೇಲೆ ದಾಳಿ ನಡೆಸಲಿದೆ. ರಾಮಮಂದಿರದ ನಿರ್ಮಾಣ, ಸಂವಿಧಾನದ ೩೭೦ನೇ ವಿಧಿಯನ್ನು ಕಿತ್ತುಹಾಕುವುದು ಇಂಥ ಅನೇಕ ಕಾರ್ಯಸೂಚಿಗಳು ಇನ್ನು ಮುಂದೆ ಹೆಡೆ ಎತ್ತುತ್ತವೆ.

**ಆಗಬೇಕಾದ ಕೆಲಸ**

ಅದೇನೇ ಇರಲಿ ದೇಶದ ಭವಿಷ್ಯದ ಬಗ್ಗೆ ಜನಸಾಮಾನ್ಯರ ಬದುಕಿನ ಬಗ್ಗೆ ನಿಜವಾದ ಕಾಳಜಿಯನ್ನು ಹೊಂದಿದ್ದು ಹೋರಾಡಬಲ್ಲ ಶಕ್ತಿ ಇರುವುದು ಎಡಪಕ್ಷಗಳಿಗೆ ಮಾತ್ರ. ಎಡಪಂಥೀಯರಿಗೆ ಅತ್ಯಂತ ಬಿಕ್ಕಟ್ಟಿನ ಸವಾಲಿನ ಪರಿಸ್ಥಿತಿ ಇದು. ಆದರೆ ಇದು ಕೇವಲ ಭಾರತಕ್ಕೆ ಮಾತ್ರ ಸೀಮಿತವಾದದ್ದಲ್ಲ. ಅಮೆರಿಕಾದಲ್ಲಿ ಟ್ರಂಪ್‌ನಂಥ ಪ್ರತಿಗಾಮಿ ಮತ್ತೆ ಗೆಲ್ಲಬಹುದು. ಬ್ರಜಿಲ್‌ನಲ್ಲಿ ಬೊಲ್ಸನಾರೊನಂಥ ದ್ವೇಷಾರ್ಹ ನಾಯಕ ಗೆಲ್ಲುತ್ತಾನೆ. ಟರ್ಕಿಯಲ್ಲಿ ಎರ್ಡೊಗಾನ್, ರಷ್ಯಾದಲ್ಲಿ ಪುಟಿನ್ ಅಲ್ಲದೆ ಇದೀಗ ಫ್ರಾನ್ಸ್, ಇಟಲಿಗಳಲ್ಲಿ ಸಹ ತೀವ್ರ ಬಲಪಂಥೀಯ ಪ್ರತಿಗಾಮಿಗಳು ಅಧಿಕಾರಕ್ಕೆ ಬರುತ್ತಿದ್ದಾರೆ. ಇದಕ್ಕೆ ಸ್ಪಷ್ಟವಾದ ಕಾರಣವಿದೆ. ೨೦೦೮ರಲ್ಲಿ ಆರಂಭವಾದ ಜಾಗತಿಕ ಆರ್ಥಿಕ ಹಿಂಜರಿತ ಶಮನವಾಗುತ್ತಿಲ್ಲ. ಇಲ್ಲಿಯವರೆಗೂ ಆಳುವವರ್ಗವು ಬೆಂಬಲಿಸಿಕೊಂಡು ಬಂದಿದ್ದ ಸೌಮ್ಯವಾದಿ ಬೂರ್ಷ್ವಾ ನಾಯಕತ್ವದಿಂದ ಬಿಕ್ಕಟ್ಟು ಬಗೆಹರಿದಿಲ್ಲ. ಆದ್ದರಿಂದಲೇ ಎಲ್ಲೆಡೆ ಅತ್ಯಂತ ಭಂಡತನದಿಂದ ರಾಜ್ಯಭಾರ ಮಾಡಿ ಬಂಡವಾಳಗಾರರಿಗೆ ಚೇತರಿಕೆಯ ಪರಿಹಾರ ನೀಡಬಲ್ಲ ಸರ್ವಾಧಿಕಾರಿ ಮನೋಭಾವದ ಪ್ರತಿಗಾಮಿಗಳನ್ನು ಜಾಗತಿಕ ಹಣಕಾಸು ಬಂಡವಾಳ ಇದೀಗ ಮುನ್ನೆಲೆಗೆ ತಂದಿದೆ. ಆದರೆ ಇವರು ಸಹ ಜನತೆಯ ಬಡತನದ ನಿರ್ಮೂಲನದ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವುದಿಲ್ಲ. ಹೀಗಾಗಿ ನಿಜವಾದ ಜನತಾ ಪರ್ಯಾಯಕ್ಕೆ ಅವಕಾಶಗಳಿವೆ.

ಎಡಪಕ್ಷಗಳು ಈ ಬಿಕ್ಕಟ್ಟಿನ ದಿನಗಳಲ್ಲಿ ಒಬ್ಬರೊಂದಿಗೆ ಇನ್ನೊಬ್ಬರು ಸಂಪೂರ್ಣವಾಗಿ ಸಹಕರಿಸಬೇಕು. ಭಿನ್ನಾಭಿಪ್ರಾಯಗಳನ್ನು ಜಾಣತನದಿಂದ, ವಿವೇಕದಿಂದ ಬಗೆಹರಿಸಿಕೊಳ್ಳಬೇಕು. ಈಗ ಒಬ್ಬರಿಂದ ಇನ್ನೊಬ್ಬರು ಕಸಿದುಕೊಳ್ಳುವುದಕ್ಕೆ ಏನೂ ಉಳಿದಿಲ್ಲ! ಉಳಿದಿರುವುದು ಅಸ್ತಿತ್ವದ ಪ್ರಶ್ನೆ ಅಷ್ಟೇ. ಆದ್ದರಿಂದ ದಾಯಾದಿ ಮತ್ಸರ, ಮೇಲಾಟಗಳನ್ನು ಬಿಟ್ಟು ನಿಜವಾದ ಒಕ್ಕೂಟ ಹೋರಾಟಕ್ಕಿಳಿಯಬೇಕು. ಈಗಲೂ ಈ ವಿವೇಕ ಬರದಿದ್ದರೆ ಮುಂದೆ ಜೈಲಿನಲ್ಲಿ ಕುಳಿತು ಒಗ್ಗಟ್ಟಿನ ಕನಸು ಕಾಣಬೇಕಾಗಬಹುದು.

ಆದರೆ ಒಕ್ಕೂಟ ಹೋರಾಟ ಎಂದರೆ ಅದು ಪೇಪರ್‌ನಲ್ಲಿ ಫೋಟೋ ಬರುವ ಕಾರ್ಯಕ್ರಮ ಅಲ್ಲ. ಮತ್ತೊಮ್ಮೆ ಎಡಪಕ್ಷಗಳು ಜೈಲುಗಳನ್ನು ತುಂಬಲು ಸಿದ್ಧರಾಗಬೇಕು. ವಾರಗಟ್ಟಲೆ ಕಂಬಿ ಎಣಿಸಬಲ್ಲೆವು ಎನ್ನುವ ಆತ್ಮಸ್ಥೈರ್ಯವನ್ನು ಕಾರ್ಯಕರ್ತರಲ್ಲಿ ತುಂಬದಿದ್ದರೆ, ಬುದ್ಧಿಜೀವಿಗಳಲ್ಲಿ ಭರವಸೆಯನ್ನು ಮತ್ತೆ ಹುಟ್ಟಿಸದಿದ್ದರೆ ಸಮರಶೀಲ ಮನೋಭಾವದಿಂದ ಪೆಟ್ಟುಗಳನ್ನು ಸ್ವೀಕರಿಸಲು ಸಿದ್ಧವಾಗದಿದ್ದರೆ ಚಳುವಳಿ ನಿಜವಾದ ಜನಪರ ಸಂಗ್ರಾಮವಾಗುವುದಿಲ್ಲ. ಈಗಲೂ ಕಾಲ ಮಿಂಚಿಲ್ಲ. ಕೊನೆಯಬಾರಿ ನಾವೆಲ್ಲರೂ ಈ ದಿಶೆಯಲ್ಲಿ ಕೆಲಸ ಮಾಡಲು ತೀರ್ಮಾನಿಸಬೇಕು ದೇಶದ ಅಜೆಂಡಾವನ್ನು ಬಲಪಂಥೀಯರು ನಿರ್ಧರಿಸುವುದು, ನಾವು ಪ್ರತಿಕ್ರಿಯಿಸುವುದು ಎನ್ನುವಂತೆ ಆಗಬಾರದು. ಈ ಬಾರಿ ನಾವು ಇಡಿಯ ದೇಶಕ್ಕೆ ಹೊಸ ಅಜೆಂಡಾವನ್ನು ತಾಕೀತು ಮಾಡಬೇಕು. ಆಗ ಫ್ಯಾಸಿಸಂಅನ್ನು ಪರಿಣಾಮಕಾರಿಯಾಗಿ ಹಿಮ್ಮೆಟ್ಟಿಸಲು ಸಾಧ್ಯ.

**ಡಾ॥ ಬಿ. ಆರ್. ಮಂಜುನಾಥ್**
ನಂ. ೧೩೦, ಔಟ್ ಹೌಸ್, ೧ನೇ ಮಹಡಿ, ಗೋವಿಂದಪ್ಪ ರಸ್ತೆ
ಗಾಂಧಿಬಜಾರ್, ಬೆಂಗಳೂರು – ೫೬೦ ೦೦೪

# ಅಸ್ತಿತ್ವವಾದಿ ಬಿಕ್ಕಟ್ಟುಗಳಲ್ಲಿ ಅರಳುವ ಮಾನವತೆ 'ದಿ ಎಡ್ಜ್ ಆಫ್ ಹೆವನ್'



**ಮಾ**ನವರ ಜೀವನದಲ್ಲಿ ಹುಡುಕಾಟಗಳ ವ್ಯಾಪ್ತಿ ದೊಡ್ಡದು. ಅವುಗಳಿಗೆ ಇರುವ ಆಯಾಮಗಳು ಹಲವು. ಈ ಹುಡುಕಾಟಗಳಿಂದ ಕುಟುಂಬಗಳೊಳಗೆ ಅಥವಾ ಅವುಗಳ ಆಚೆ ನಡೆಯುವ ಸಂಬಂಧಗಳು ಸಂಕೀರ್ಣ. ಅವುಗಳ ನಡುವಣ ಭಾವಗಳು ಒಂದೇ..ಎರಡೇ..! ಸಂತಸ, ದುಃಖ, ಆತಂಕ, ಚಿಂತೆ ಇತ್ಯಾದಿ ಭಾವಗಳು ಮಾನವನನ್ನು ಅಪ್ಪುತ್ತವೆ; ಕಾಡುತ್ತವೆ. ಇವುಗಳಿಗೆ ಬದುಕನ್ನು ರೂಪಿಸುವ ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಆಗುಹೋಗುಗಳ ಕೊಡುಗೆಗಳೆಷ್ಟು ಎಂಬುದು ಜಿಜ್ಞಾಸೆಯ ವಿಷಯ. ಅಂತೂ ಭಾವಲಹರಿಯಲ್ಲಿ ಮಾನವರು ತೇಲುತ್ತಾರೆ, ಮೀಯುತ್ತಾರೆ, ಮುಳುಗುತ್ತಾರೆ ಕೂಡ. ಇಂತಹ ಅನೇಕ ಆಲೋಚನೆಗಳು ಟರ್ಕಿ ಮೂಲದ, ಜರ್ಮನಿಯ ಚಲನಚಿತ್ರ ನಿರ್ದೇಶಕ ಫತಿ ಅಕಿನ್‌ನ 'ದಿ ಎಡ್ಜ್ ಆಫ್ ಹೆವನ್' ಚಲನಚಿತ್ರವನ್ನು ವೀಕ್ಷಿಸಿದಾಗ ನನ್ನಲ್ಲಿ ಮೂಡಿದವು. ಬನ್ನಿ..ಅದರ ಕಥನವನ್ನು ಸ್ಥೂಲವಾಗಿ ಅರಿಯೋಣ. ಹೀಗೆ ಮಾಡುವುದರಿಂದ spoilersಗಳಿಗೆ ಎಡೆಮಾಡಿಕೊಟ್ಟಂತಾಗುತ್ತದೆ. ಇರಲಿ..

ಈ ಚಲನಚಿತ್ರದಲ್ಲಿ 'ಯೇಟರ್‍ಸ್ ಡೆತ್', 'ಲೊಟ್ಟೇಸ್ ಡೆತ್' ಮತ್ತು 'ದಿ ಎಡ್ಜ್ ಆಫ್ ಹೆವನ್' ಎಂಬ ಮೂರು ಉಪಕಥೆ(ಭಾಗ)ಗಳಿವೆ. ಮೊದಲನೇ ಉಪಕಥೆಯಲ್ಲಿ ಜರ್ಮನಿಯ ಬ್ರೆಮೆನ್‌ನಲ್ಲಿ ವಾಸಿಸುತ್ತಿರುವ ವೃದ್ಧ, ವಿಧುರ ಆಲಿ ಅಕ್ಸು, ಟರ್ಕಿ ಮೂಲದ ಯೇಟರ್ ಎಂಬ ವೇಶ್ಯೆಯನ್ನು ಅಚಾನಕ್ಕಾಗಿ ಭೇಟಿ ಮಾಡುತ್ತಾನೆ. ತನ್ನ ಜೊತೆ ಬದ್ಧತೆಯಿಂದ ವಾಸಿಸುವುದಾದರೇ ಆಕೆಗೆ ಮಾಹೆಯಾನ ಒಂದು ನಿಗದಿತ ಮೊತ್ತವನ್ನು ನೀಡುವುದಾಗಿ ಆತ ತಿಳಿಸುತ್ತಾನೆ. ಇದರ ಮಧ್ಯೆ, ಇಬ್ಬರು ಟರ್ಕಿ ಮೂಲದ ಮೂಲಭೂತವಾದಿಗಳು ಯೇಟರ್ ಮಾಡುತ್ತಿರುವ ಕೆಲಸವು ಪಾಪಕಾರಿಯೆಂದು, ಆಕೆ ಅದನ್ನು ತ್ಯಜಿಸಬೇಕೆಂದು ಧಮಕಿ ಹಾಕುತ್ತಾರೆ. ಈ ಹಿನ್ನೆಲೆಯಲ್ಲಿ ಯೇಟರ್ ಆಲಿಯ ಜೊತೆ ವಾಸಮಾಡಲು ನಿರ್ಧರಿಸುತ್ತಾಳೆ. ಇದು ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕನಾಗಿರುವ ಆಲಿಯ ಮಗ ನೆಜತ್‌ಗೆ ಇಷ್ಟವಾಗುವುದಿಲ್ಲ. ಆಲಿಗೆ ಹೃದಯಾಘಾತವಾಗುತ್ತದೆ. ಆತ ಆಸ್ಪತ್ರೆಯಲ್ಲಿದ್ದಾಗ ಯೇಟರ್‌ಗೆ ಎಯ್ಟೆನ್ ಎಂಬ ಇಪ್ಪತ್ತೇಳು ವರ್ಷದ ಮಗಳಿದ್ದಾಳೆ ಎಂಬುದು ನೆಜತ್‌ಗೆ ತಿಳಿಯುತ್ತದೆ. ತಾನು ಒಂದು ಶೂ ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದೇನೆ ಎಂಬ ಸುಳ್ಳನ್ನು ದೃಢಪಡಿಸಲು ಆಗಾಗ್ಗೆ ತನ್ನ ಮಗಳಿಗೆ ಶೂ ಕಳುಹಿಸುತ್ತಿರುತ್ತೇನೆ ಎಂದು ಯೇಟರ್ ನೆಜತ್‌ಗೆ ಹೇಳುತ್ತಾಳೆ. ಇದಾದ ತರುವಾಯ ನೆಜತ್ ಯೇಟರ್‌ಳ ಬಗೆಗೆ ಮೃದುಗೊಳ್ಳುತ್ತಾನೆ. ಎಯ್ಟೆನ್‌ಗೂ ತನ್ನಂತೆ ಶಿಕ್ಷಣ ದೊರಕಬೇಕೆಂದು ಆತ ಆಶಿಸುತ್ತಾನೆ.

ಆಸ್ಪತ್ರೆಯಿಂದ ಹಿಂದಿರುಗುವ ಆಲಿಯಲ್ಲಿ ಯೇಟರ್ ತನ್ನ ಮಗನ ಜೊತೆ ದೈಹಿಕ ಸಂಬಂಧವನ್ನು ಬೆಳೆಸಿರಬಹುದೆಂಬ ಶಂಕೆ ಮೂಡುತ್ತದೆ. ಒಮ್ಮೆ ಕುಡಿದು ಮತ್ತನಾದ ಆಲಿಯ ದೈಹಿಕ ಬೇಡಿಕೆಗಳನ್ನು ತಿರಸ್ಕರಿಸುವ ಯೇಟರ್‌ಗೆ ಆತ ಥಳಿಸುತ್ತಾನೆ. ಆಕೆ ಮರಣ ಹೊಂದುತ್ತಾಳೆ! ಆಲಿ ಜೈಲಿಗೆ ಹೋಗುತ್ತಾನೆ. ನೆಜತ್ ಯೇಟರ್‌ಳ ಮಗಳು ಎಯ್ಟೆನ್‌ಳನ್ನು ಹುಡುಕಿ, ಆಕೆಯ ಶಿಕ್ಷಣದ ಜವಾಬ್ದಾರಿಯನ್ನು ಹೊರಲು ಇಸ್ತಾನ್‌ಬುಲ್‌ಗೆ ತೆರಳುತ್ತಾನೆ. ಅಲ್ಲಿರುವ ಆಕೆಯ ಸಂಬಂಧಿಗಳ ಬಳಿ ಎಯ್ಟೆನ್‌ಳ ಇತ್ತೀಚಿನ ಫೋಟೊ ಇರುವುದಿಲ್ಲ. ಆದುದರಿಂದ ಆತ ಯೇಟರ್‌ಳ ಫೋಟೊವನ್ನು ಒಂದು ಸಣ್ಣ ಜರ್ಮನಿ ಭಾಷೆಯ ಪುಸ್ತಕದ ಅಂಗಡಿಯಲ್ಲಿ ಅಂಟಿಸುತ್ತಾನೆ. ನಂತರ ಆ ಪುಸ್ತಕದಂಗಡಿಯನ್ನು ಖರೀದಿಸುತ್ತಾನೆ.

ಎರಡನೇ ಉಪಕಥೆಯಲ್ಲಿ ಲೊಟ್ಟೆಳ ಸಾವಿನ ವೃತ್ತಾಂತವಿದೆ. ಟರ್ಕಿಯ ಇಸ್ತಾನ್‌ಬುಲ್‌ನ ಒಂದು ಗಲಭೆಯಲ್ಲಿ ಸಾಮಾನ್ಯನೊಬ್ಬನ ಪೋಷಾಕಿನಲ್ಲಿರುವ ಪೊಲೀಸ್ ಅಧಿಕಾರಿ ತನ್ನ ಪಿಸ್ತೂಲನ್ನು ಕಳೆದುಕೊಳ್ಳುತ್ತಾನೆ. ಓರ್ವ ಮುಸುಕುಧಾರಿ ವ್ಯಕ್ತಿ ಅದನ್ನು ಲಪಟಾಯಿಸಿ ಓಡತೊಡಗಿದಾಗ, ಪೊಲೀಸಿನವರು ಹಿಂಬಾಲಿಸುತ್ತಾರೆ. ಒಂದು ಕಟ್ಟಡದ ಮೇಲ್ಛಾವಣಿಯಲ್ಲಿ ಪಿಸ್ತೂಲನ್ನು ಅಡಗಿಸಿಡಲಾಗುತ್ತದೆ. ಆ ವ್ಯಕ್ತಿಯೇ ಎಯ್ಟೆನ್! ಆಕೆ ಟರ್ಕಿ ಸರ್ಕಾರದ ರಾಜಕೀಯ ವಿರೋಧಿ ಗುಂಪಿನ ಸದಸ್ಯೆಯಾಗಿರುತ್ತಾಳೆ. ಆಕೆಯ ಅಡಗುತಾಣವನ್ನು ಪೊಲೀಸರು ಧಾಳಿ

**ಮ. ಶ್ರೀ. ಮುರಳಿ ಕೃಷ್ಣ**

ಮಾಡಿದಾಗ, ಆಕೆ ತಪ್ಪಿಸಿಕೊಂಡು ಜರ್ಮನಿಯ ಬ್ರೆಮೆನ್‌ನಲ್ಲಿರುವ ರಾಜಕೀಯ ಸಂಗಾತಿಗಳಲ್ಲಿ ಆಶ್ರಯವನ್ನು ಪಡೆಯುತ್ತಾಳೆ. ಆದರೆ ಆಕೆ ಅವರಿಗೆ ನೀಡಬೇಕಿದ್ದ ಹಣವನ್ನು ನೀಡದಿದ್ದಾಗ ಹೊರಗೆ ದಬ್ಬಲ್ಪಡುತ್ತಾಳೆ! ಆಗ ಆಕೆಯ ಬಳಿ ಒಂದೇ ಒಂದು ಯೂರೊ ಇರುತ್ತದೆ! ಆಕೆ ತಾಯಿಯ ಫೋನಿನ ಸಂಖ್ಯೆಯನ್ನು ಕಳೆದುಕೊಂಡಿರುತ್ತಾಳೆ. ತನ್ನ ತಾಯಿಗಾಗಿ ಕೆಲವು ಶೂ ಅಂಗಡಿಗಳಲ್ಲಿ ತಡಕಾಡುತ್ತಾಳೆ. ಎಲ್ಲ ಪ್ರಯತ್ನಗಳೂ ವಿಫಲವಾಗುತ್ತವೆ. ಹೀಗೆ ಆಕೆ ಕಾನೂನುಬಾಹಿರವಾಗಿ ವಾಸಮಾಡಬೇಕಾದ ಸ್ಥಿತಿ ಉದ್ಭವಿಸುತ್ತದೆ.

ನಂತರ, ಲೊಟ್ಟೆ ಎಂಬ ವಿಶ್ವವಿದ್ಯಾನಿಲಯದ ವಿದ್ಯಾರ್ಥಿನಿ ತನ್ನ ನಿವಾಸದಲ್ಲಿ ಎಯ್ಟೆನ್‌ಗೆ ಆಶ್ರಯವನ್ನು ನೀಡುತ್ತಾಳೆ. ಲೊಟ್ಟೆಯ ತಾಯಿ ಸೂಸನ್‌ಗೆ ಎಯ್ಟೆನ್‌ಳ ಪ್ರವೇಶ ಇಷ್ಟವಾಗುವುದಿಲ್ಲ. ಕ್ರಮೇಣ ಲೊಟ್ಟೆ ಮತ್ತು ಎಯ್ಟೆನ್ ಸಲಿಂಗ ಪ್ರೇಮಿಗಳಾಗುತ್ತಾರೆ. ಒಮ್ಮೆ ಎಯ್ಟೆನ್‌ಳ ತಾಯಿಯನ್ನು ಹುಡುಕುವ ಸಂದರ್ಭದಲ್ಲಿ ಟ್ರಾಫಿಕ್ ಪೊಲೀಸರು ತಪಾಸಣೆ ನಡೆಸುವಾಗ ಎಯ್ಟೆನ್ ಸಿಕ್ಕಿಬೀಳುತ್ತಾಳೆ. ಎಯ್ಟೆನ್ ರಾಜಕೀಯ ಆಶ್ರಯವನ್ನು ಕೋರುತ್ತಾಳೆ. ಸೂಸನ್ ಹಣದ ಸಹಾಯವನ್ನು ನೀಡುತ್ತಾಳೆ. ಜರ್ಮನಿಯ ಅಧಿಕಾರಿಗಳು ಎಯ್ಟೆನ್ ಟರ್ಕಿಯಲ್ಲಿ ಸರ್ಕಾರದಿಂದ ರಾಜಕೀಯ ಪ್ರತೀಕಾರಕ್ಕೆ ಒಳಗಾಗುವುದಿಲ್ಲವೆಂದು ತೀರ್ಮಾನಿಸಿ ಆಕೆಯನ್ನು ಗಡೀಪಾರು ಮಾಡುತ್ತಾರೆ. ಟರ್ಕಿಯಲ್ಲಿ ಆಕೆಯನ್ನು ಬಂಧಿಸಲಾಗುತ್ತದೆ. ಲೊಟ್ಟೆ ಒಡೆದುಹೋಗುತ್ತಾಳೆ. ಆಕೆ ಟರ್ಕಿಗೆ ತೆರಳಿ ಎಯ್ಟೆನ್‌ಳನ್ನು ಬಿಡುಗಡೆಗೊಳಿಸಲು ಪ್ರಯತ್ನಿಸುತ್ತಾಳೆ. ಸೂಸನ್‌ಳಿಂದ ಹಣದ ಸಹಾಯ ಮುಂದುವರೆಯುತ್ತದೆ. ಆಕೆ ಮಗಳಿಗೆ ತನ್ನ ಭವಿಷ್ಯದ ಬಗೆಗೆ ಯೋಚಿಸಬೇಕೆಂದು, ಜರ್ಮನಿಗೆ ಮರಳಬೇಕೆಂದು ಕೇಳಿಕೊಳ್ಳುತ್ತಾಳೆ. ಲೊಟ್ಟೆ ತಾನು ಹಿಡಿದ ಪಟ್ಟನ್ನು ಬಿಡುವುದಿಲ್ಲ. ಸೂಸನ್ ತಾನು ನೀಡುತ್ತಿದ್ದ ಆರ್ಥಿಕ ಸಹಾಯವನ್ನು ನಿಲ್ಲಿಸುತ್ತಾಳೆ. ಲೊಟ್ಟೆ ನೆಜತ್‌ನ ಪುಸ್ತಕದ ಅಂಗಡಿಗೆ ಭೇಟಿ ನೀಡುತ್ತಾಳೆ. ನಂತರ ಆತನ ಮನೆಯ ಕೋಣೆಯೊಂದನ್ನು ಬಾಡಿಗೆಗೆ ತೆಗೆದುಕೊಳ್ಳುತ್ತಾಳೆ.

ಲೊಟ್ಟೆ ಅನೇಕ ಪ್ರಯತ್ನಗಳ ತರುವಾಯ ಬಂದೀಖಾನೆಯಲ್ಲಿ ಎಯ್ಟೆನ್‌ಳನ್ನು ಭೇಟಿ ಮಾಡುವುದರಲ್ಲಿ ಸಫಲವಾಗುತ್ತಾಳೆ. ಎಯ್ಟೆನ್ ತಾನು ಅಡಗಿಸಿಟ್ಟಿದ್ದ ಪಿಸ್ತೂಲನ್ನು ತೆಗೆದುಕೊಳ್ಳಬೇಕೆಂದು ಲೊಟ್ಟೆಯಲ್ಲಿ ವಿನಂತಿಸುತ್ತಾಳೆ. ಲೊಟ್ಟೆ ಈ ಕಾರ್ಯದಲ್ಲಿ ಯಶಸ್ವಿಯಾಗುತ್ತಾಳೆ. ಆಕೆ ತನ್ನ ಹ್ಯಾಂಡ್‌ಬ್ಯಾಗ್‌ನಲ್ಲಿ ಪಿಸ್ತೂಲನ್ನಿರಿಸಿಕೊಂಡು ಸಾಗುತ್ತಿದ್ದಾಗ, ಅದನ್ನು ಒಂದು ಹುಡುಗರ ಗ್ಯಾಂಗ್‌ನ ಒಬ್ಬ ಕಸಿದುಕೊಂಡು ಓಡಿಹೋಗುತ್ತಾನೆ. ಆ ಗ್ಯಾಂಗನ್ನು ಹಿಂಬಾಲಿಸುವ ಲೊಟ್ಟೆ ಕೊನೆಗೆ ಖಾಲಿ ನಿವೇಶನವೊಂದರಲ್ಲಿ ಅವರನ್ನು ಕಾಣುತ್ತಾಳೆ. ಒಬ್ಬ ಹುಡುಗ ಪಿಸ್ತೂಲನ್ನು ಪರಿಶೀಲಿಸುತ್ತಿರುತ್ತಾನೆ. ಲೊಟ್ಟೆ ಅದನ್ನು ತನಗೆ ವಾಪಸ್ಸು ನೀಡಬೇಕೆಂದು ಕೂಗುತ್ತಾಳೆ. ಆದರೆ ಆ ಹುಡುಗ ಲೊಟ್ಟೆಗೆ ಪಿಸ್ತೂಲನ್ನು ಗುರಿಮಾಡಿ, ಟ್ರಿಗರನ್ನು ಒತ್ತುತ್ತಾನೆ. ಲೊಟ್ಟೆ ಹೆಣವಾಗುತ್ತಾಳೆ!

‘ದಿ ಎಡ್ಜ್ ಆಫ್ ಹೆವನ್’ ಎಂಬ ಮೂರನೇ ಉಪಕಥೆಯಲ್ಲಿ ಜೈಲಿನಿಂದ ಬಿಡುಗಡೆಯಾಗುವ ಆಲಿಯನ್ನು ಟರ್ಕಿಗೆ ಗಡೀಪಾರು ಮಾಡಲಾಗುತ್ತದೆ. ಆತ ಟ್ರಬ್‌ಝೂನ್‌ನ ಕಪ್ಪು ಸಮುದ್ರದ ಬಳಿಯಿರುವ ತನ್ನ ಮನೆಗೆ ಹಿಂದಿರುಗುತ್ತಾನೆ. ಮಗಳ ದುರ್ಮರಣದ ತರುವಾಯ ಸೂಸನ್ ಇಸ್ತಾನ್‌ಬುಲ್‌ಗೆ ತೆರಳುತ್ತಾಳೆ. ಅಲ್ಲಿ ನೆಜತ್‌ನನ್ನು ಭೇಟಿ ಮಾಡುವ ಸಂದರ್ಭ ಒದಗಿಬಂದಾಗ, ಲೊಟ್ಟೆ ವಾಸವಿದ್ದ ಕೋಣೆಯಲ್ಲಿ ಕೆಲಸಮಯ ಉಳಿಯುವ ಅವಕಾಶ ಲಭ್ಯವಾಗುತ್ತದೆ. ಆಗ ಆಕೆ ತನ್ನ ಮಗಳ ಡೈರಿಯನ್ನು ಓದುತ್ತಾಳೆ. ಎಯ್ಟೆನ್‌ಳನ್ನು ಬಿಡುಗಡೆಗೊಳಿಸುವ ನಿಟ್ಟಿನಲ್ಲಿ ಕಾರ್ಯೋನ್ಮುಖಳಾಗಲು ಮುಂದಾಗುತ್ತಾಳೆ; ಹೃದಯವೈಶಾಲ್ಯತೆಯನ್ನು ಪ್ರದರ್ಶಿಸುತ್ತಾಳೆ. ಎಯ್ಟೆನ್‌ಳನ್ನು ಜೈಲಿನಲ್ಲಿ ಫೋನಿನ ಮೂಲಕ ಸಂಪರ್ಕಿಸುತ್ತಾಳೆ. ನಂತರ ಎಯ್ಟೆನ್ ಸೂಸನ್‌ಳ ಪ್ರಭಾವದಿಂದ ಕ್ಷಮೆಯ ಹಕ್ಕನ್ನು ಚಲಾಯಿಸಿ ಬಂಧವಿಮುಕ್ತೆಯಾಗುತ್ತಾಳೆ.

ಕೊನೆಗೆ ನೆಜತ್ ತನ್ನ ಪುಸ್ತಕದ ಅಂಗಡಿಯ ನೋಟಿಸ್ ಬೋರ್ಡ್‌ನಿಂದ ಯೇಟರ್‌ಳ ಫೋಟೊವನ್ನು ತೆಗೆದುಹಾಕುತ್ತಾನೆ. ನೆಜತ್ ತನ್ನ ಪುಸ್ತಕದ ಅಂಗಡಿಯನ್ನು ಕೆಲವು ದಿನಗಳವರೆಗೆ ನೋಡಿಕೊಳ್ಳಬೇಕೆಂದು ಸೂಸನ್‌ಳಲ್ಲಿ ವಿನಂತಿಸುತ್ತಾನೆ. ಆತ ತನ್ನ ತಂದೆ ಆಲಿ ವಾಸವಾಗಿರುವ ಟ್ರಬ್‌ಝೂನ್‌ನತ್ತ ಪ್ರಯಾಣ ಬೆಳೆಸುತ್ತಾನೆ. ತಂದೆ–ಮಗನ ಭೇಟಿಯಾಗುತ್ತದೆಯೋ ಅಥವಾ ಇಲ್ಲವೋ ಎಂಬುದು ಚಲನಚಿತ್ರದ ಕೊನೆಯ ದೃಶ್ಯದಲ್ಲಿ ತಿಳಿದುಬರುತ್ತದೆ!

ಚಲನಚಿತ್ರದ ಪ್ರಾರಂಭದಲ್ಲೇ ಪೂರ್ಣವಾಗಿ ಚಲಿಸುತ್ತಿರುವ ವಾಹನವನ್ನು ತೋರಿಸದೇ, ಅದು ರಸ್ತೆಯಲ್ಲಿರುವ ಸುರಂಗ ಮಾರ್ಗಗಳ ಮೂಲಕ ಹಾದು ಹೋಗುವುದನ್ನು ವೀಕ್ಷಕರು ಕಾಣುತ್ತಾರೆ. ಅಂದರೆ ಈ ಚಲನಚಿತ್ರದಲ್ಲಿ ಜೀವನದ ಪಯಣದ ಘಟನೆಗಳಿವೆ ಎಂಬುದನ್ನು ಸಾಂಕೇತಿಕವಾಗಿ ಈ ಹಂತದಲ್ಲೇ ನಿರ್ದೇಶಕರು ಸೂಚಿಸುತ್ತಾರೆ. ನಂತರ ಆ ವಾಹನ ಒಂದು ಸ್ಥಳವನ್ನು ತಲುಪಿದಾಗ ಕ್ಯಾಮರಾ ನಿಧಾನವಾಗಿ ಬಲಗಡೆ ಪ್ಯಾನ್ ಮಾಡುತ್ತ ಪೆಟ್ರೋಲ್ ಬಂಕ್ ಎದುರಿಗೆ ಕಾರು ನಿಲ್ಲುವುದನ್ನು ತೋರಿಸುತ್ತದೆ. ನೆಜತ್ ಇಳಿದು ಕೆಲವು ಖಾದ್ಯವಸ್ತುಗಳನ್ನು ಖರೀದಿಸುತ್ತಾನೆ. ತನ್ನ ಗಾಡಿಗೆ ಪೆಟ್ರೋಲ್ ತುಂಬಿಸಿಕೊಳ್ಳುತ್ತಾನೆ. ಹಾಗೆ ನೋಡಿದರೇ, ಇದೊಂದು ಸಾಮಾನ್ಯ ದೃಶ್ಯ. ಆದರೆ ಕೊನೆಯಲ್ಲಿ ಇದೇ ದೃಶ್ಯವನ್ನು ಪುನಃ ಕಂಡಾಗ, ಅದರ ಅರ್ಥವ್ಯಾಪ್ತಿ ಹಿಗ್ಗುತ್ತದೆ!

ಈಗಾಗಲೇ ತಿಳಿಸಿದಂತೆ, ಈ ಚಲನಚಿತ್ರದಲ್ಲಿ ಮೂರು ಉಪಕಥೆಗಳಿವೆ. ಆದುದರಿಂದ ಒಂದರ್ಥದಲ್ಲಿ ಇದನ್ನು ‘ಹೈಪರ್ ಲಿಂಕ್’ ಚಲನಚಿತ್ರವೆಂದು ಕರೆಯಬಹುದು. ಪ್ರತಿಯೊಂದು ಕಥಾವಸ್ತುವು ಸಂಕೀರ್ಣವಾಗಿದೆ. ಆದರೆ ಈ ಮೂರು ಉಪಕಥೆಗಳ ನಡುವೆ ಬಿಗಿ ಬಂಧವಿದೆ. ಅಂದರೆ ಇಡೀ ಕಥನವನ್ನು ಕೊಂಡಿಗಳ ಮೂಲಕ ಹಿಡಿದಿಡಲಾಗಿದೆ. ಪ್ರತಿಯೊಂದು ಪಾತ್ರದ ಕಥೆ ಹಾಗೂ ಸ್ಥಿತಿ ಇತರ ಪಾತ್ರಗಳ ಜೊತೆ ತಳುಕು ಹಾಕಿಕೊಂಡಿದೆ. ಇಡೀ ಕಥನದಲ್ಲಿ ಪುನರಾವರ್ತನೆಗೊಳ್ಳುವ ವಸ್ತುವು ಉಪಕಥೆಗಳ ಒಳಗೆ ಪ್ರತ್ಯೇಕವಾಗಿ ಆದರೆ ಹೂರಣದ ರೂಪದಲ್ಲಿ ಹೊರಹೊಮ್ಮುತ್ತದೆ. ಅಲ್ಲದೆ ದೃಶ್ಯಗಳ ಪುನರಾವರ್ತನೆ ಮತ್ತು ಭೇಟಿಯಾಗದ ಪಾತ್ರಗಳ ಮೂಲಕ ಈ ಕೊಂಡಿಗಳನ್ನು ರಚಿಸಲಾಗಿದೆ. ದೃಶ್ಯಗಳ ಪುನರಾವರ್ತನೆ ಕಥನವನ್ನು ಸುಸಂಗತಗೊಳಿಸಿದೆ. ಉದಾಹರಣೆಗಾಗಿ, ವಿಮಾನ ನಿಲ್ದಾಣದ ಒಂದು ದೃಶ್ಯವನ್ನು ಗಮನಿಸೋಣ. ಮೊದಲನೇ ಉಪಕಥೆಯಲ್ಲಿ ಯೇಟರ್ ಇರುವ ಶವಪಟ್ಟಿಗೆಯನ್ನು ಟರ್ಕಿಗೆ ಸಾಗಿಸಲಾಗುತ್ತದೆ. ಎರಡನೇ ಉಪಕಥೆಯಲ್ಲಿ ಅದೇ ಸ್ಥಳದಲ್ಲಿ ಲೊಟ್ಟೆಯ ಶವಪೆಟ್ಟಿಗೆಯನ್ನು ಜರ್ಮನಿಗೆ ಕಳಹಿಸಲಾಗುತ್ತದೆ. ‘ಶವಪೆಟ್ಟಿಗೆಯ ರವಾನೆ’, ಎರಡು ಉಪಕಥೆಗಳ ಯೇಟರ್ ಸಾವು ಮತ್ತು ಲೊಟ್ಟೆಯ ಮರಣವನ್ನು ದೃಶ್ಯಾತ್ಮಕವಾಗಿ ಸಮಾನಾಂತರ ಸೂಚನೆಯ ಮೂಲಕ ಕಟ್ಟಿಕೊಡುತ್ತದೆ. ಮೇಲೆ ಪ್ರಸ್ತಾಪಿಸಿರುವ ಚಲನಚಿತ್ರದ ಪ್ರಥಮ



**ಹೆಸರು**

ಸತ್ತ ಮೇಲೆ
ಹೆಸರು
ಉಳಿಸುವುದು
ಹಾಗಿರಲಿ;
ಬದುಕಿರುವಾಗಲೆ
ಗಳಿಸಬೇಕು!

ಸಿ.ಪಿ.ಕೆ.
ಮೈಸೂರು

ದೃಶ್ಯವೂ ಕೊಂಡಿಯ ರೂಪದಲ್ಲೇ ಇದೆ. ಪ್ರತಿಯೊಂದು ಉಪಕಥೆಯಲ್ಲಿ ಒಂದು ದುಃಖದ ಸಂದರ್ಭವಿದ್ದು, ಎರಡು ಉಪಕಥೆಗಳಲ್ಲಿ ಮುಖ್ಯ ಪಾತ್ರಗಳ ಪೈಕಿ ಒಂದು ಪಾತ್ರ ಸಾವನ್ನಪ್ಪುತ್ತದೆ. ಈ ಸಾವುಗಳು ನಾಲ್ಕು ಮುಖ್ಯ ಪಾತ್ರಗಳನ್ನು ಒಂದು ಸ್ಥಳದಲ್ಲಿ ಸಂಧಿಸುವಂತೆ ಮಾಡುತ್ತವೆ! ಆ ಸ್ಥಳವೇ ಇಸ್ತಾನ್‌ಬುಲ್!

ಪಾತ್ರಗಳ ನಡುವೆ ಜರುಗುವ ಅಚಾನಕ್ ಭೇಟಿ ಈ ಮೂರು ಉಪಕಥೆಗಳು ಪರಸ್ಪರ ಬೆಸೆದುಕೊಂಡಿವೆ ಎಂಬುದನ್ನು ತೋರಿಸುತ್ತದೆ. ಆದರೆ ಈ ಪಾತ್ರಗಳು ಪರಸ್ಪರ ಗುರುತಿಸುವುದಿಲ್ಲ! ನೈಜಾರ್ಥದಲ್ಲಿ ನೆಜತ್ ಎಯ್ಟೆನ್‌ಳನ್ನು ಅನ್ವೇಷಿಸುವುದಿಲ್ಲ! ಹಾಗೆಯೇ ಎಯ್ಟೆನ್‌ಗೆ ತನ್ನ ತಾಯಿ ಎಲ್ಲಿದ್ದಾಳೆ ಹಾಗೂ ಆಕೆಗೇನಾಗಿದೆ ಎಂದು ತಿಳಿಯುವುದೇ ಇಲ್ಲ! ಚಲನಚಿತ್ರದಲ್ಲಿ ಒಂದು ಗಮನಾರ್ಹ ದೃಶ್ಯವಿದೆ. ಅದರಲ್ಲಿ ಒಂದು ಟ್ರೈನ್ ಕಾರನ್ನು ದಾಟಿ ಹೋಗುತ್ತದೆ. ಯೇಟರ್‌ಳನ್ನು ಹುಡುಕುವ ಪ್ರಯತ್ನದಲ್ಲಿ ಲೊಟ್ಟೆ ಮತ್ತು ಎಯ್ಟೆನ್ ಕಾರ್‌ನಲ್ಲಿ ಪ್ರಯಾಣವನ್ನು ಬೆಳೆಸಿರುತ್ತಾರೆ. ಹಾಗೆಯೇ ಟ್ರೈನ್‌ನಲ್ಲಿ ನೆಜತ್ ಮತ್ತು ಯೇಟರ್ ಇರುತ್ತಾರೆ. ಆದರೆ ಈ ಸಂಗತಿ ಗೆಳತಿಯರಿಗೆ/ಪ್ರೇಮಿಗಳಿಗೆ ತಿಳಿಯುವುದೇ ಇಲ್ಲ. ಅಲ್ಲದೆ ಇನ್ನೊಂದು ದೃಶ್ಯವೂ ವೀಕ್ಷಕರ ಗಮನವನ್ನು ಸೆಳೆಯುತ್ತದೆ. ನೆಜತ್ ಪಾಠ ಮಾಡುತ್ತಿರುವಾಗ ಅದೇ ಹಾಲ್‌ನಲ್ಲಿ ಎಯ್ಟೆನ್ ಡೆಸ್ಕಿನ ಮೇಲೆ ನಿದ್ರಿಸಿರುತ್ತಾಳೆ! ಆದರೆ ಈ ಪಾತ್ರಗಳಿಗೆ ಪರಸ್ಪರ ಇರುವಿಕೆಯ ಬಗೆಗೆ ತಿಳಿದಿರುವುದೇ ಇಲ್ಲ! ಇವುಗಳ ಮೂಲಕ ಯುರೇಷಿಯಾದಲ್ಲಿರುವ ಟರ್ಕಿ ಮತ್ತು ಜರ್ಮನಿಯ ಜನರ ನಡುವೆ ಇರುವ ಸಂಬಂಧಗಳ ಸಂಕೀರ್ಣತೆಯನ್ನು ರೂಪಾತ್ಮಕವಾಗಿ ಬಿಂಬಿಸಲಾಗಿದೆ ಎನ್ನಬಹುದು. ಲೊಟ್ಟೆಯ ತಾಯಿ ಸೂಸನ್ ಮೊದಲು ಎಯ್ಟೆನ್‌ಳ ಇರುವಿಕೆಯ ಬಗೆಗೆ ಕಸಿವಿಸಿಗೊಂಡಿರುತ್ತಾಳೆ. ಲೊಟ್ಟೆಯ ಸಾವಿಗೆ ಎಯ್ಟೆನ್ ಕಾರಣವಾದರೂ ಸೂಸನ್ ಎಯ್ಟೆನ್‌ಳನ್ನು ಕ್ಷಮಿಸಿ, ಆಕೆ ಬಂಧನದಿಂದ ಹೊರಬರುವಂತೆ ಮಾಡಿ ಇಸ್ತಾನ್‌ಬುಲ್‌ನಲ್ಲಿ ತನ್ನೊಡನೆ ಕೆಲವು ದಿನಗಳನ್ನು ಕಳೆಯುವಂತೆ ಹೇಳುತ್ತಾಳೆ. ಈ ಪ್ರಸಂಗ ಟರ್ಕಿ ಮತ್ತು ಜರ್ಮನಿಯ ಜನರ ನಡುವಿನ ಸೌಹಾರ್ದ ಸಂಬಂಧಸೂಚಕವಾಗಿದೆ.

ಜೈಲಿನಲ್ಲಿ ಸೂಸನ್ ಎಯ್ಟೆನ್‌ಳೊಡನೆ ಫೋನಿನ ಮೂಲಕ ಸಂಭಾಷಣೆಯನ್ನು ನಡೆಸುವಾಗ ಎಯ್ಟೆನ್ ವಿಹ್ವಲತೆಯಿಂದ ಭಗ್ನಳಾಗುತ್ತಾಳೆ. ಈ ದೃಶ್ಯ ಮನಸ್ಸನ್ನು ಕಾಡುತ್ತದೆ. ಕೊನೆಯ ದೃಶ್ಯದ ಅಂತ್ಯದಲ್ಲಿ ಒಂದು ಲಾಂಗ್ ಟೇಕ್‌ಯಿದೆ. ಕ್ಯಾಮರಾಗೆ ನೆಜತ್ ಬೆನ್ನನ್ನು ಹಾಕಿರುತ್ತಾನೆ. ಆತ ಕಡಲ ಕಿನಾರೆಯಲ್ಲಿರುತ್ತಾನೆ. ಪಕ್ಕದಲ್ಲಿ ಒಂದು ದೋಣಿ ಸಹ ಇರುತ್ತದೆ. ಈ ದೋಣಿ ಹಾಗೂ ಅದಿರುವ ಸ್ಥಳ ಭರವಸೆಯ ರೂಪಕವನ್ನು ದಾಟಿಸುತ್ತದೆ. ಈ ಹಂತದಲ್ಲಿ ಕ್ಯಾಮರಾ ಸ್ತಬ್ಧವಾಗಿರುತ್ತದೆ.

ಈ ಚಲನಚಿತ್ರದಲ್ಲಿ ವಲಸೆ, ಮೂಲಭೂತವಾದ, ಬಹುರಾಷ್ಟ್ರೀಯತೆ, ಪ್ರಭುತ್ವದ



ರಾಜಕೀಯ ಪ್ರತಿಕಾರ, ಏಕಾಂಗಿತನ, ವಲಸಿಗರ ಅಸ್ಥಿರತೆ, ಮಾನವತೆ ಮುಂತಾದವು ಸೂಕ್ಷ್ಮವಾಗಿ ಬಿಂಬಿತಗೊಂಡಿವೆ ನಿಜ. ಆದರೆ ಇವುಗಳಲ್ಲಿ ಕೆಲವು ಅಂಶಗಳನ್ನಾದರೂ ಇನ್ನಷ್ಟು ಸಾಂದ್ರಗೊಳಿಸಬಹುದಿತ್ತು ಎಂದೆನಿಸುತ್ತದೆ. ಒಬ್ಬ ಕಾರ್ಯಕರ್ತೆಯಾಗಿ ಎಯ್ಟೆನ್ ಗುರುತಿಸಿಕೊಂಡಿರುವ ರಾಜಕೀಯ ಚಳವಳಿಯ ಬಗೆಗೆ ಕೂಡ ಗಟ್ಟಿಯಾದ ಅಭಿವ್ಯಕ್ತಿ ಕಾಣುವುದಿಲ್ಲ; ಚಿತ್ರಿತಗೊಂಡಿಲ್ಲ. ಸಂಗೀತ, ಸಂಕಲನ, ಛಾಯಾಚಿತ್ರಗ್ರಹಣ, ನಟನೆ ಚಲನಚಿತ್ರದ ಸತ್ವಕ್ಕೆ ಮತ್ತು ಗಹನತೆಗೆ ಪೂರಕವಾಗಿವೆ. ತುರ್ಕಿ ವಾದ್ಯಗಳ ಹಿನ್ನೆಲೆ ಸಂಗೀತ ಹಾಗೂ ಕಝೀಂ ಕೊಯನ್ನು ಮತ್ತು ಸೆವ್ವಲ್ ಸ್ಯಾಮ್ ಹಾಡಿರುವ ಗೀತೆಗಳು ವೀಕ್ಷಕರನ್ನು ಸಿನಿಮಾದ ಭಾವಗಳಲ್ಲಿ ಮಿಂಗಿಸುತ್ತವೆ. ಇದರಲ್ಲಿ ತುರ್ಕಿ, ಜರ್ಮನ್ ಮತ್ತು ಆಂಗ್ಲ ಭಾಷೆಗಳು ಬಳಕೆಯಾಗಿವೆ.

೨೦೦೭ರಲ್ಲಿ ತೆರೆಕಂಡ ಈ ಚಲನಚಿತ್ರ ಅನೇಕ ಅಂತರರಾಷ್ಟ್ರೀಯ ಚಲನಚಿತ್ರೋತ್ಸವಗಳಲ್ಲಿ ಪ್ರಶಸ್ತಿಗಳನ್ನು ಗಳಿಸಿದೆ. ಇದು ಪ್ರತಿಷ್ಠಿತ ಕಾನ್ ಚಲನಚಿತ್ರೋತ್ಸವದಲ್ಲಿ(೨೦೦೭) ಅತ್ಯುತ್ತಮ ಚಿತ್ರಕಥೆ ಪ್ರಶಸ್ತಿಗೆ ಭಾಜನವಾಗಿದೆ.

**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೮, ೩ನೇ ಕ್ರಾಸ್, ರಾಜಾ ಗಾರ್ಡನಿಯಾ ಲೇಔಟ್
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧

## ಎಸ್. ರಾಮಚಂದ್ರ ರಾವ್ ಇನ್ನಿಲ್ಲ



ಮೂರು ದಶಕಗಳ ಕಾಲ (೧೯೮೭–೨೦೧೮) ನವಕರ್ನಾಟಕ ಪ್ರಕಾಶನ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿ, ಅನಾರೋಗ್ಯ ನಿಮಿತ್ತ ಕಳೆದ ವರ್ಷ ಸ್ವಯಂನಿವೃತ್ತಿ ಪಡೆದ ಎಸ್. ರಾಮಚಂದ್ರ ರಾವ್ (೫೨) ಅವರು ಜೂನ್ ೧೮, ೨೦೧೯ರಂದು ನಿಧನರಾದರು. ಸುಮಾರು ಒಂದೂವರೆ ವರ್ಷದಿಂದ ಅವರು ಪ್ಯಾಂಕ್ರಿಯಾಸ್‌ನ ಕ್ಯಾನ್ಸರ್ ರೋಗದಿಂದ ಬಳಲುತ್ತಿದ್ದರು. ಪತ್ನಿ ಉಷಾ ರಾವ್, ಪುತ್ರ ಪ್ರಜ್ವಲ್ ಮತ್ತು ಬಂಧು – ಮಿತ್ರರ ದೊಡ್ಡ ಬಳಗವನ್ನು ಅವರು ಅಗಲಿದ್ದಾರೆ.

ಪುಸ್ತಕಗಳ ಮಾರಾಟದಲ್ಲಿ ವಿಶೇಷ ಆಸಕ್ತಿ ಮತ್ತು ಅಪಾರ ಅನುಭವ ಹೊಂದಿದ್ದ ರಾಮಚಂದ್ರ ಅವರು ನವಕರ್ನಾಟಕದ ಹಲವು ಮಾರಾಟ ಮಳಿಗೆಗಳಲ್ಲಿ, ಪುಸ್ತಕ ಪ್ರದರ್ಶನಗಳಲ್ಲಿ ಕೆಲಸ ಮಾಡಿದ್ದು, ೨೦೧೭ರಿಂದ ಬೆಂಗಳೂರಿನ ಕೆಂಪೇಗೌಡ ರಸ್ತೆಯಲ್ಲಿರುವ ಹೊಸ ಮಳಿಗೆಯ ವ್ಯವಸ್ಥಾಪಕರಾಗಿಯೂ ದುಡಿದಿದ್ದರು. ಗ್ರಾಹಕರಿಗೆ ಉತ್ತಮ ಸೇವೆ ಸಲ್ಲಿಸುವಲ್ಲಿ ಹೆಚ್ಚಿನ ಮುತುವರ್ಜಿ ವಹಿಸುತ್ತಿದ್ದ ಅವರು ಸಂಸ್ಥೆ ನೀಡಿದ ಯಾವುದೇ ಜವಾಬ್ದಾರಿಯನ್ನು ಶ್ರದ್ಧೆಯಿಂದ ನಿರ್ವಹಿಸುತ್ತಿದ್ದರು.




# ಕಿನೋಸಾಕಿಯಲ್ಲಿ

ಜಪಾನೀ ಮೂಲ : **ಶಿಗಾ ನಾವೋಯಾ**

ಅನುವಾದ (ಇಂಗ್ಲಿಷಿನಿಂದ) : **ದಮಯಂತಿ ನರೇಗಲ್ಲ**

**ಆ** ವರ್ಷ ನಾನೊಂದು ಭಯಂಕರ ಅಪಘಾತದಿಂದ ಪಾರಾಗಿದ್ದೆ. ಟೋಕಿಯೋದ ಲೂಪ್ ಲೆನಿನ ಗಾಡಿಯ ಕೆಳಗೆ ಸಿಲುಕಿದರೂ ಅಕಸ್ಮಾತ್ ಬದುಕಿ ಉಳಿದಿದ್ದೆ. ಆ ಅಪಘಾತದಿಂದ ಚೇತರಿಸಿಕೊಳ್ಳಲು ನನಗೆ ಸಾಕಷ್ಟು ಸಮಯ ಬೇಕಾಯಿತು. ಆಗ ಚೇತರಿಸಿಕೊಳ್ಳಲು ಅನುಕೂಲವೆಂದು ಬಿಸಿ ನೀರಿನ ಬುಗ್ಗೆಯಿರುವ ಕಿನೋಸಾಕಿಗೆ ಹೋಗಿದ್ದೆ. ಆ ಅಪಘಾತದ ಪರಿಣಾಮವಾಗಿ ಬೆನ್ನೆಲುಬಿನ ಕ್ಷಯವೇನಾದರೂ ಆಗಿಬಿಟ್ಟರೆ ಬದುಕುವದು ಕಠಿಣ ಎಂದು ನನಗೆ ಗೊತ್ತಿತ್ತು. ಡಾಕ್ಟರರು ಹಾಗೇನೂ ಆಗಲಾರದು ಎಂದು ಅಭಯವಿತ್ತಿದ್ದರು. 'ಸರಿಯಾಗಿ ನೋಡಿಕೊಂಡಿದ್ದರೆ ಎರಡು–ಮೂರು ವರ್ಷಗಳಲ್ಲಿ ಎಲ್ಲ ಅಪಾಯದಿಂದ ಪಾರಾಗುತ್ತೀ' ಎಂದು ಅವರು ಹೇಳಿದ್ದರು. ಅದಕ್ಕೇ ನಾನು ಕಿನೋಸಾಕಿಗೆ ಹೋದದ್ದು. ಅಲ್ಲಿ ಸುಮಾರು ವಾರಗಳ ಹೆಚ್ಚು ಹೆಚ್ಚೆಂದರೆ ಐದು ವಾರಗಳವರೆಗೆ ಇರುವ ವಿಚಾರವಿತ್ತು.

ಅಪಘಾತದಲ್ಲಾದ ಸುಮಾರು ಗಾಯಗಳು ಮಾಯ್ದಿದ್ದವು, ಆದರೆ ನನ್ನ ತಲೆಯಿನ್ನೂ ಸರಿಯಾಗಿ ಕೆಲಸ ಮಾಡುತ್ತಿರಲಿಲ್ಲ. ನನಗೆ ತುಂಬ ಮರೆಗುಳಿತನ ಬಂದುಬಿಟ್ಟಿತ್ತು, ಏನೇನೂ ನೆನಪುಳಿಯುತ್ತಿರಲಿಲ್ಲ. ಆದರೆ ಒಂದು ತರಹದ ನಿರಾಳವಾದ ಮನಶ್ಶಾಂತಿಯಿತ್ತು. ಇತ್ತೀಚೆಗೆ ಎಷ್ಟೋ ವರ್ಷಗಳಿಂದ ಅನುಭವಿಸದಿದ್ದಂತಹ ಒಂದು ಬಗೆಯ ಆಹ್ಲಾದಕರ ಭಾವನೆಯಿತ್ತು. ಭತ್ತದ ಬೆಳೆಯ ಸುಗ್ಗಿಯ ಸಮಯ, ಹವಾಮಾನವೂ ಆಹ್ಲಾದದಾಯಕವಾಗಿತ್ತು.

ಅಲ್ಲಿ ಒಬ್ಬನೇ ಇದ್ದೆ, ಮಾತಾನಾಡಲೂ ಬೇರೆ ಯಾರೂ ಇರಲಿಲ್ಲ. ನಿಶ್ಚಿಂತನಾಗಿ ಓದು–ಬರವಣಿಗೆ ಮಾಡಬಹುದಿತ್ತು. ಇಲ್ಲವೇ ವೆರಾಂಡದಲ್ಲಿ ಕುರ್ಚಿಯ ಮೇಲೆ ಕುಳಿತು ಸುತ್ತಲಿನ ರಸ್ತೆಗಳ–ಬೆಟ್ಟಗಳ ಸುಂದರ ದೃಶ್ಯವನ್ನು ನೋಡುತ್ತಿರಬಹುದಿತ್ತು. ಅದೂ ಬೇಸರವಾದರೆ ವಾಕಿಂಗ್ ಹೋಗಬಹುದಿತ್ತು. ಬೆಟ್ಟದ ಮೇಲಿನಿಂದ ಹರಿಯುತ್ತಿದ್ದ ಪುಟ್ಟ ಝರಿಯ ದಂಡೆಗುಂಟ ಹೋಗುವ ರಸ್ತೆ ರಮ್ಯವಾಗಿತ್ತು. ಬೆಟ್ಟವನ್ನು ಸುತ್ತುವರಿದಿದ್ದ ಆ ನೀರಿನ ಝರಿ ಬೆಟ್ಟದ ತಳದಲ್ಲಿ ಒಂದು ಸಣ್ಣ ಕೆರೆಯನ್ನು ನಿರ್ಮಿಸಿತ್ತು. ಅದರಲ್ಲಿ ಸಾಕಷ್ಟು ಸಾಲ್ಮನ್ ಮೀನುಗಳಿದ್ದವು. ಕೆಲವೊಂದು ಸಲ ಸ್ವಲ್ಪ ಲಕ್ಷ್ಯಗೊಟ್ಟು ನೋಡಿದರೆ ಅಲ್ಲೊಂದು–ಇಲ್ಲೊಂದು ನದಿ ನೀರಿನ ದೊಡ್ಡ ಏಡಿಗಳು ಕಾಣುತ್ತಿದ್ದವು. ಅವುಗಳು ಹೆಚ್ಚಾಗಿ ದಂಡೆಯ ಮೇಲಿನ ಕಲ್ಲುಗಳ ಜೊತೆಗೆ ಕಲ್ಲಿನಂತೆ ಅಲ್ಲಾಡದೇ ಬಿದ್ದುಕೊಂಡಿರುತ್ತಿದ್ದವು. ನಾನು ಹೆಚ್ಚಾಗಿ ಸಂಜೆ ಊಟಕ್ಕೆ ಮೊದಲು ಆ ದಾರಿಯಲ್ಲಿ ಅಡ್ಡಾಡಲು ಹೋಗುತ್ತಿದ್ದೆ. ಆ ನಿರ್ಜನ ಕಣಿವೆಯಲ್ಲಿ ಹರಿಯುತ್ತಿದ್ದ ಆ ಪುಟ್ಟ ಝರಿಯಗುಂಟ ಮೇಲೆ ಹತ್ತುತ್ತಿದ್ದಾಗ ನಾನು ಯಾವಾಗಲೂ ನನ್ನದೇ ವಿಚಾರಗಳಲ್ಲಿ ಮುಳುಗಿರುತ್ತಿದ್ದೆ. ಆ ವಿಚಾರಗಳು ಹೆಚ್ಚಾಗಿ ಉತ್ಸಾಹದಾಯಕವಾಗಿರುತ್ತಿರಲಿಲ್ಲ. ಆದರೂ ಅಲ್ಲಿ ನಡೆಯುತ್ತಿರುವಾಗ ನನಗೆ ಅತ್ಯಂತ ಆಹ್ಲಾದಕರ ಮನಶ್ಶಾಂತಿಯ ಅನುಭವವಾಗುತ್ತಿತ್ತು. ಮೇಲಿಂದ ಮೇಲೆ ನನ್ನ ಅಪಘಾತದ ಬಗ್ಗೆ ವಿಚಾರಗಳು ಬರುತ್ತಿದ್ದವು. ಏನೋ ಸುದೈವದಿಂದ



ಕತ್ತಲೆಯಾಗತೊಡಗಿತ್ತು. ಎಷ್ಟು ನಡೆದರೂ ಮುಂದೆ ತಿರುವುಗಳಿದ್ದೇ ಇದ್ದವು. ಅಲ್ಲಿಂದಲೇ ತಿರುಗುವುದು ಎಂದು ನಿಶ್ಚಯಿಸಿದೆ. ಒಂದು ಕ್ಷಣ ನಿಂತು ನೀರಿನ ಪ್ರವಾಹದತ್ತ ನೋಡಿದೆ. ಎದುರಿನ ದಂಡೆಯ ಮೇಲೆ ನೀರಿಗೆ ಸುಮಾರು ಒಂದು ಮಾರು ದೂರದಲ್ಲಿ ಒಂದು ಇಳಿಜಾರಾದ ಬಂಡೆಯಿತ್ತು. ಅದರ ಮೇಲೆ ಏನೋ ಒಂದು ಕಪ್ಪು ವಸ್ತು ಕಾಣಿಸಿತು. ಸರಿಯಾಗಿ ನೋಡಿದಾಗ ಅದು ನೀರಿನಲ್ಲಿ ವಾಸಿಸುವ ಹಲ್ಲಿ ಎಂದು ಗೊತ್ತಾಯಿತು. ಚಂದದ ಬಣ್ಣದ ಆ ಹಲ್ಲಿ ಕೆಳಗೆ ಮುಖಮಾಡಿ, ನೀರನ್ನೇ ನೋಡುತ್ತ ಶಾಂತವಾಗಿ ಮಲಗಿತ್ತು, ಅದರ ದೇಹದಿಂದ ಇನ್ನೂ ನೀರಿಳಿಯುತ್ತಿತ್ತು. ಏನೋ ವಿಚಾರ ಮಾಡುತ್ತ ಅಲ್ಲಿಯೇ ಅದನ್ನು ನೋಡುತ್ತ ಒಂದು ಕ್ಷಣ ಕುಳಿತೆ.

ಪಾರಾಗಿದ್ದೆ. ಸ್ವಲ್ಪ ಹೆಚ್ಚು ಕಡಿಮೆಯಾಗಿದ್ದರೂ ಇಂದು ಆಯೋಮಾ ಸ್ಮಶಾನದ ಭೂಮಿಯ ಗರ್ಭದಲ್ಲಿ ಮುಖ ಮೇಲೆ ಮಾಡಿಕೊಂಡು ಮಲಗಿರುತ್ತಿದ್ದೆ. ನನ್ನ ಮುಖ ಒಣಗಿ, ತಣ್ಣಗಾಗಿ, ಹಸಿರುಗಟ್ಟಿರಬಹುದಿತ್ತು, ನನ್ನ ಮುಖದ ಹಾಗೂ ಬೆನ್ನಿನ ಗಾಯಗಳು ಮಾಯದೇ ಉಳಿದಿರಬಹುದಿತ್ತು. ನಾನು ನನ್ನ ತಾಯಿ ಮತ್ತು ಅಜ್ಜನ ದೇಹಗಳ ಬದಿಗೇ ಮಲಗಿರಬಹುದಿತ್ತು, ಆದರೂ ನಮ್ಮ ನಡುವೆ ಯಾವುದೇ ತರಹದ ಸಂಪರ್ಕವಿರದಿರಬಹುದಿತ್ತು. ಹೀಗೆಯೇ ಏನೇನೋ ವಿಚಾರಗಳು ತಲೆಯಲ್ಲಿ ತುಂಬಿಕೊಂಡಿರುತ್ತಿದ್ದವು. ಇವೆಲ್ಲ ವಿಚಾರಗಳಿಂದ ಎಷ್ಟೋ ಸಲ ಮನಸ್ಸು ಖಿನ್ನವಾಗುತ್ತಿತ್ತು, ಆದರೆ ಯಾವ ಬಗೆಯ ಹೆದರಿಕೆಯೆನಿಸುತ್ತಿರಲಿಲ್ಲ. ಇದೆಲ್ಲ ಒಂದು ದಿನ ಆಗಿಯೇ ಆಗುತ್ತದೆ, ಆದರೆ ಯಾವಾಗ? ಇಂತಹ ವಿಚಾರಗಳು ಈ ಮೊದಲೂ ಅನೇಕ ಸಲ ಬಂದಿದ್ದವು. ಆದರೆ ಆಗ ಈ 'ಯಾವಾಗ' ಎನ್ನುವ ಪ್ರಶ್ನೆ ಬಹಳ ದೂರದ ಪ್ರಶ್ನೆ. ಈಗಲೇ ತಿಳಿಯಲಾರದು ಎನಿಸುತ್ತಿತ್ತು. ಈಗ ಹಾಗೆನಿಸುತ್ತಿರಲಿಲ್ಲ. ಆ ಸಮಯ ಯಾವಾಗ ಬಂದೀತು ಎನ್ನುವದನ್ನು ನಿಜವಾಗಿಯೂ ಹೇಳಲಿಕ್ಕಾಗದು ಎನಿಸುತ್ತಿತ್ತು. ಈ ಸಲ ನಾನು ಉಳಿದುಕೊಂಡಿದ್ದೆ. ಯಾವದೋ ಕಾರಣದಿಂದ ಮರಣ ತಪ್ಪಿತ್ತು. ಈಗ ನಾನು ಮಾಡಬೇಕೆಂದಿದ್ದ ಕೆಲಸಗಳನ್ನು ಮಾಡಿ ಮುಗಿಸಬೇಕು – ನಾನು ಶಾಲೆಯಲ್ಲಿದ್ದಾಗ ಎಲ್ಲೋ ಓದಿದ ನೆನಪಾಯಿತು – ಲಾರ್ಡ್ ಕ್ಲೈವ್ ಇಂಥವೇ ವಿಚಾರಗಳಿಂದ ಪ್ರೇರಿತನಾಗಿ ತನ್ನ ಕೆಲಸಗಳನ್ನು ಮಾಡಿ ಮುಗಿಸುವದಕ್ಕಾಗಿ ಹೆಚ್ಚಿನ ಪ್ರಯತ್ನಗಳಲ್ಲಿ ತೊಡಗಿದ ಎಂದು. ನನ್ನ ಅಪಘಾತದ ನಂತರ ನನಗೂ ಹೀಗೆಯೇ ಮಾಡಬೇಕು ಎನಿಸತೊಡಗಿತ್ತು, ನಾನು ಮಾಡಲೂ ತೊಡಗಿದೆ. ನನ್ನ ಮನಸ್ಸು ಮಾತ್ರ ಈಗ ಶಾಂತವಾಗಿತ್ತು. ಅಲ್ಲಿ ಯಾವ ಬಗೆಯ ಹೆದರಿಕೆಯಿರಲಿಲ್ಲ, ಸಾವಿನ ಬಗ್ಗೆ ಏನೋ ಒಂದು ಸ್ನೇಹಭಾವ ಹುಟ್ಟಿಕೊಂಡಿತ್ತು.

ಹೋಟೆಲಿನಲ್ಲಿ ನನ್ನ ಕೋಣೆ ಎರಡನೆಯ ಮಹಡಿಯಲ್ಲಿತ್ತು. ನೆರೆಯ ಕೋಣೆಗಳಲ್ಲಿ ಯಾರೂ ಇರಲಿಲ್ಲ, ಅತ್ಯಂತ ಶಾಂತ ವಾತಾವರಣವಿತ್ತು. ನನಗೆ ಆಯಾಸವಾದಾಗಲೆಲ್ಲ ವೆರಾಂಡದಲ್ಲಿ ಕುಳಿತುಕೊಳ್ಳುತ್ತಿದ್ದೆ. ಕೆಳಗೆ ಅದರ ಒಂದು ಬದಿಗೆ ಹೋಟೆಲಿನ ಪ್ರವೇಶ ದ್ವಾರವಿತ್ತು, ಅದರ ಚಪ್ಪರದ ಮೇಲಿನ ಗೋಡೆಯನ್ನು ಕಟ್ಟಿಗೆಯ ಬೋರ್ಡ್‌ಗಳಿಂದ ಅಲಂಕರಿಸಲಾಗಿತ್ತು. ಅವುಗಳ ಹಿಂದೆ ಬಹುಶಃ ಜೇನುಗಳು ಗೂಡು ಕಟ್ಟಿರಬೇಕು, ಹವೆ ಚೆನ್ನಾಗಿದ್ದಾಗ ಹುಲಿಯ ಪಟ್ಟೆಯ ಜೇನುಹುಳುಗಳು ಬೆಳಗಿನಿಂದ ಸಂಜೆಯವರೆಗೆ ಒಂದೇ ಸಮನೆ ಕೆಲಸ ಮಾಡುತ್ತಿರುವದು ಕಾಣುತ್ತಿತ್ತು. ಅವು ಹಲಗೆಗಳ ನಡುವಿನ ಬಿರುಕಿನಿಂದ ಹೊರಬಂದು ಚಪ್ಪರದ ಮೇಲೆ ಕುಳಿತು ಒಂದು ಕ್ಷಣ ವಿರಮಿಸುತ್ತಿದ್ದವು. ಅವುಗಳಲ್ಲಿ ಕೆಲವು ತಮ್ಮ ಹಿಂದಿನ ಮತ್ತು ಮುಂದಿನ ಕಾಲುಗಳೊಂದಿಗೆ ರೆಕ್ಕೆ ಮತ್ತು ಮೀಸೆಗಳನ್ನು ಹೊಂದಿಸಿಕೊಳ್ಳಲು ಅಲ್ಲಿಯೇ ಸ್ವಲ್ಪ ಹೊತ್ತು ಸುತ್ತಾಡುತ್ತಿದ್ದವು, ನಂತರ ರೆಕ್ಕೆಗಳನ್ನು ಹರಡಿಕೊಂಡು ಗುಂಯ್ಯೆಂದು ಧ್ವನಿಮಾಡುತ್ತ ಎಲ್ಲ ದುಂಬಿಗಳೊಡನೆ ಮೇಲೆ ಹಾರುತ್ತಿದ್ದವು. ಒಂದು ಸಲ ರೆಕ್ಕೆ ಹರಡಿ ಮೇಲೆ ಹಾರಿದವೆಂದರೆ ಅವು ಬಹು ವೇಗವಾಗಿ ಸಂಚರಿಸುತ್ತಿದ್ದವು, ಆಗತಾನೆ ಹೂ – ಬಿಡತೊಡಗಿದ ಗಿಡ – ಗಂಟಿಗಳ ಮೇಲೆ ಗುಂಪು – ಗುಂಪಾಗಿ ಎರಗುತ್ತಿದ್ದವು. ನನಗೆ ಬೇಸರವಾದಾಗೆಲ್ಲ ನಾನು ಅವುಗಳನ್ನೇ ನೋಡುತ್ತ ಬಾಲ್ಕನಿಯ ಕಟಾಂಜನದ ಹತ್ತಿರ ನಿಲ್ಲುತ್ತಿದ್ದೆ.

ಒಂದು ದಿನ ಆ ಚಪ್ಪರದ ಮೇಲೆ ಒಂದು ದುಂಬಿ ಸತ್ತುಬಿದ್ದದ್ದನ್ನು ನೋಡಿದೆ. ಅದರ ಕಾಲುಗಳು ಮುದುಡಿ ಅದರ ದೇಹದ ಕೆಳಭಾಗಕ್ಕೆ ಅಂಟಿಕೊಂಡಿದ್ದವು. ಅದರ ಮೀಸೆಗಳು ನಿರ್ಜೀವವಾಗಿ ಅದರ ತಲೆಯ ಮೇಲೆ ಒರಗಿದ್ದವು. ಇತರ ದುಂಬಿಗಳಿಗೆ ಅದರ ತಡೆಗೆ ಲಕ್ಷ್ಯವೇ ಇರಲಿಲ್ಲ, ಅದರ ಸುತ್ತಲೂ ಹಾರಾಡುತ್ತ ಎಂದಿನಂತೆ ತಮ್ಮ ನಿತ್ಯದ ಕೆಲಸವನ್ನು ನಡೆಸಿದ್ದವು. ಒಂದೆಡೆಗೆ ನಿರಂತರವಾಗಿ ಕಾಯಕದಲ್ಲಿ ನಿರತವಾದ ಆ ದುಂಬಿಗಳ ಜೀವಂತಿಕೆಯ ಪೂರ್ಣ ಚಿತ್ರ, ಇನ್ನೊಂದೆಡೆಗೆ ಕಾಯಂಕಾಲುಗಳನ್ನು ಮುದುಡಿಕೊಂಡು ಹೊರಳಿ ಬಿದ್ದ ಆ ದುಂಬಿಯ ಸಾವಿನ ಸ್ಪಷ್ಟ ಚಿತ್ರ ! ಮೂರು ದಿನಗಳವರೆಗೆ ಅದು ಅಲ್ಲಿಯೇ ಹಾಗೆಯೇ ಬಿದ್ದಿತ್ತು. ಅದನ್ನು ನೋಡಿದಾಗೆಲ್ಲ ನನಗೆ ಅತೀವ ಏಕಾಕಿತನದ, ಅಂತಿಮ ಗಾಢ ಮೌನದ ಅನುಭವ ಬರುತ್ತಿತ್ತು. ಸಂಜೆಯಾದೊಡನೆ ತಣ್ಣಗಿನ ಹಂಚುಗಳ ಮೇಲೆ ಆ ಸತ್ತ ದುಂಬಿಯೊಂದನ್ನೇ ಬಿಟ್ಟು , ಉಳಿದ ದುಂಬಿಗಳೆಲ್ಲ ಗೂಡು ಸೇರಿದಾಗ ತುಂಬ ಏಕಾಕಿತನದ ಅನುಭವವಾಗುತ್ತಿತ್ತು, ಅದರೊಡನೆಯೇ ಮನಸ್ಸಿನಲ್ಲೊಂದು ಸಮಾಧಾನದ ನಿರಾಳವಾದ ಭಾವವೂ ಮೂಡುತ್ತಿತ್ತು.

ಅಂದು ರಾತ್ರಿ ತುಂಬ ಜೋರಾಗಿ ಮಳೆ ಬಿತ್ತು. ಬೆಳಗಿನಲ್ಲಿ ನೋಡಿದಾಗ ಗಿಡಮರಗಳ ಎಲೆಗಳು, ನೆಲ, ಚಪ್ಪರ – ಎಲ್ಲ ತೊಳೆದು ಸ್ವಚ್ಛವಾಗಿದ್ದವು. ಸತ್ತ ದುಂಬಿಯ ದೇಹವೂ ಮಳೆಯ ನೀರಿನಲ್ಲಿ ಹರಿದುಹೋಗಿತ್ತು. ಬಹುಶಃ ಅಲ್ಲಿಯೇ ಕೆಳಗೆ ಎಲ್ಲೋ ಕೆಸರಿನಲ್ಲಿ ಹಾಗೆಯೇ ಕಾಲು ಮುದುರಿಕೊಂಡು ಬಿದ್ದಿರಬೇಕು. ಹೊರಗಿನ ಜಗತ್ತಿನಲ್ಲಿ ಬೇರೇನೋ ಘಟಿಸಿ, ಅದರ ದೇಹವನ್ನು ಅಲ್ಲಿಂದ ದೂರ ಒಯ್ಯುವವರೆಗೆ ಅಲ್ಲಿಯೇ ಹಾಗೇ ಬಿದ್ದಿರಬಹುದೋ ಏನೋ... ಅಥವಾ ಇರುವೆಗಳು ಮುತ್ತಿಕೊಂಡು ಅದನ್ನು ಅಲ್ಲಿಂದ ಎಳೆದೊಯ್ಯುತ್ತಿರಬಹುದೇ? ಈ ಮೊದಲು ಒಂದೇ ಸಮನೆ ಕೆಲಸ ಮಾಡುತ್ತ ಸುತ್ತುತ್ತಿದ್ದ ಆ ದುಂಬಿ ಎಷ್ಟು ಶಾಂತವಾಗಿ ಮಲಗಿರಬಹುದು ಈಗ ! ಆ ಶಾಂತಿ ಯಾಕೋ ನನ್ನನ್ನು ಆಕರ್ಷಿಸುತ್ತಿತ್ತು, ಆತ್ಮೀಯವೆನಿಸುತ್ತಿತ್ತು. ನಾನು ಕೆಲದಿನ ಹಿಂದೆಯಷ್ಟೇ 'ಹಾನ್‌ನ ಅಪರಾಧ' ಎಂಬ ಕತೆಯನ್ನು ಬರೆದಿದ್ದೆ. ಹಾನ್ ಎಂಬ ಚೀನೀ ಮನುಷ್ಯ, ಅವನ ಹೆಂಡತಿ, ಹಾನ್‌ನ ಒಬ್ಬ ಗೆಳೆಯ – ಈ ಮೂರು ವ್ಯಕ್ತಿಗಳ ಕತೆ ಅದು. ಗೆಳೆಯ ಮತ್ತು ತನ್ನ ಹೆಂಡತಿಯ ನಡುವಿನ ಸಂಬಂಧದ ಬಗ್ಗೆ ಶಂಕಿಸಿ ಅಸೂಯೆಯಿಂದ ಹಾನ್ ಹೆಂಡತಿಯ ಕೊಲೆ ಮಾಡುತ್ತಾನೆ. ಹಾನ್‌ನ ಕೆಲವು ಮಾನಸಿಕ – ದೈಹಿಕ ಒತ್ತಡಗಳು ಆ ಕೊಲೆಗೆ ಕಾರಣವಾಗುತ್ತವೆ. ಈ ಕತೆಯನ್ನು ನಾನು ಹಾನ್‌ನ ದೃಷ್ಟಿಕೋನದಿಂದ ಬರೆದಿದ್ದೆ, ಆದರೆ ಈಗ ಅದೇ ಕತೆಯನ್ನು ಸಮಾಧಿಯಲ್ಲಿ ಶಾಂತಿಯಿಂದ ಮಲಗಿರುವ ಅವನ ಹೆಂಡತಿಯ ದೃಷ್ಟಿಕೋನದಿಂದ ಬರೆಯಬೇಕು ಎನಿಸುತ್ತಿತ್ತು.

ಹಾನ್‌ನ ಕೊಲೆಯಾದ ಪತ್ನಿಯ ಕತೆಯನ್ನು ಬರೆಯಬೇಕೆಂದಿದ್ದೆ, ಆದರೆ ಕೊನೆಗೂ ಬರೆಯಲಿಲ್ಲ, ಬರೆಯಬೇಕೆಂಬ ಬಯಕೆಯೇನೋ ಯಾವಾಗಲೂ ಇತ್ತು. ಆದರೆ ಆ ಸಮಯದಲ್ಲಿ ನನ್ನ ಮನಸ್ಸು ತುಂಬ ಅಲ್ಲೋಲ–ಕಲ್ಲೋಲವಾಗಿತ್ತು. 'ನನ್ನ ಸ್ವಂತದ ಅಂದಿನ ವಿಚಾರಸರಣಿ ಆಗ ನಾನು ಬರೆಯತೊಡಗಿದ್ದ ಒಂದು ಸುದೀರ್ಘ ಕಾದಂಬರಿಯ ನಾಯಕನ ವಿಚಾರಸರಣಿಯಿಂದ ಬಹಳ ದೂರವಾಗುತ್ತದೆ'ಯೆಂದೆನಿಸಿ ಮನಸ್ಸು ತುಂಬ ತಲ್ಲಣಗೊಂಡಿತ್ತು.

ಈ ಘಟನೆಯಾಗಿ ಕೆಲವೇ ದಿನಗಳಾಗಿದ್ದವಷ್ಟೇ. ನಾನು ಒಂದು ದಿನ ಹೋಟೆಲಿನಿಂದ ಹೊರಬಿದ್ದು ನಡೆಯುತ್ತ ಅಲ್ಲಿಯೇ ಹತ್ತಿರದಲ್ಲಿದ್ದ ಪಾರ್ಕಿಗೆ ಹೋದೆ. ಆ ಪಾರ್ಕಿನಲ್ಲಿ ಎತ್ತರದ ಮೇಲೆ ನಿಂತು, ಕೆಳಗೆ ಮಾರುಯಾಮಾ ನದಿ ಹರಿಯುತ್ತ ಜಪಾನ್ ಸಮುದ್ರಕ್ಕೆ ಕೂಡುವ ರಮ್ಯ ದೃಶ್ಯವನ್ನು ನೋಡಬಹುದಿತ್ತು. ಹತ್ತಿರದ ಒಂದು ಸ್ನಾನಗೃಹದ ಪಕ್ಕದಿಂದ ಸಣ್ಣ ನೀರಿನ ಝರಿಯೊಂದು ಹರಿದು ಹತ್ತಿರವೇ ನದಿಯನ್ನು ಕೂಡುತ್ತಿತ್ತು. ಅದರ ಮೇಲಿದ್ದ ಒಂದು ಪುಟ್ಟ ಸೇತುವೆಯ ಮೇಲೆ ಜನರ ಗುಂಪೊಂದು ಸೇರಿ ತುಂಬ ಗಲಾಟೆ ಮಾಡುತ್ತಿತ್ತು. ಹತ್ತಿರ ಹೋಗಿ ನೋಡಿದಾಗ ಅವರ ಗಲಾಟೆಯ ಕಾರಣ ತಿಳಿಯಿತು. ಅವರು ಒಂದು ದೊಡ್ಡ ಇಲಿಯ ಕತ್ತಿಗೆ ಎಂಟು–ಹತ್ತು ಇಂಚಿನ ಒಂದು ಮೊನಚಾದ ಆಯುಧವನ್ನು ಚುಚ್ಚಿ, ಅದನ್ನು ನೀರಿನಲ್ಲಿ ಚೆಲ್ಲಿ, ಅದು ಹೊರಗೆ ಬರಲು ಒದ್ದಾಡುತ್ತಿದ್ದುದನ್ನು ನೋಡಿ ಆನಂದಿಸುತ್ತಿದ್ದರು. ಆಯುಧದ ಮೂರು–ನಾಲ್ಕು ಇಂಚಿನಷ್ಟು ಭಾಗ ಅದರ ದೇಹದ ಹೊರಗೆ ಕಾಣುತ್ತಿತ್ತು. ಅದು ಈಜಿ ಹೊರಬರಲು ಪ್ರಯತ್ನಿಸುತ್ತಿತ್ತು, ದಂಡೆಯ ಕಲ್ಲು ಗೋಡೆಯ ಮೇಲೆ ಏರಿ ಬರಲು ಶಕ್ತಿಮೀರಿ ಧಡಪಡಿಸತೊಡಗಿತ್ತು. ಆದರೆ ದಂಡೆಯ ಮೇಲಿದ್ದ ಮಕ್ಕಳು, ಮಕ್ಕಳಷ್ಟೇ ಏಕೆ, ಅವರೊಡನಿದ್ದ ಒಬ್ಬ ಸುಮಾರು ನಾಲ್ವತ್ತು ವರ್ಷ ವಯಸ್ಸಿನ ರಿಕ್ಷಾ ಡ್ರೈವರ್ ಕೂಡ ಅದಕ್ಕೆ ಕಲ್ಲುಗಳನ್ನೊಗೆದು ಮತ್ತೆ ಅದನ್ನು ನೀರಿನಲ್ಲಿ ಬೀಳಿಸಲು ಪ್ರಯತ್ನಿಸುತ್ತಿದ್ದರು. ಆದರೆ ಕಲ್ಲುಗಳು ಅದಕ್ಕೆ ತಗಲುತ್ತಿರಲಿಲ್ಲ. ಅದರ ಒದ್ದಾಟವನ್ನು ನೋಡಿ ಉಳಿದ ಪ್ರೇಕ್ಷಕರು ಜೋರಾಗಿ ಕೇಕೆ ಹಾಕಿ ನಗುತ್ತಿದ್ದರು. ಕೊನೆಗೂ ಒಂದು ಸಲ. ಆ ಇಲಿ ಹೇಗೋ ಕಲ್ಲು ಗೋಡೆಯಲ್ಲಿದ್ದ ಒಂದು ಬಿಲದವರೆಗೆ ತಲುಪಿತು. ಆದರೆ ಅದರ ಕೊರಳಲ್ಲಿ ನೆಟ್ಟ ಆ ಆಯುಧದ ಕಾರಣ ಅದಕ್ಕೆ ಬಿಲದೊಳಕ್ಕೆ ಹೋಗಲಿಕ್ಕಾಗಲಿಲ್ಲ. ಪಾಪ, ಅದು ತಿರುಗಿ ನೀರಿನಲ್ಲಿ ಬಿದ್ದಿತು, ಆದರೂ ಅದು ತನ್ನ ಜೀವವನ್ನುಳಿಸಿಕೊಳ್ಳುವ ಸಾಹಸವನ್ನು ನಿಲ್ಲಿಸಲಿಲ್ಲ. ಅದರ ಮುಖದ ಮೇಲಿನ ಭಾವವನ್ನು ಓದಲಿಕ್ಕಾಗುತ್ತಿರಲಿಲ್ಲ, ಆದರೆ ಅದರ ಒದ್ದಾಟದಿಂದ ಅದು ತನ್ನ ಜೀವವನ್ನು ಹೇಗಾದರೂ ಮಾಡಿ ಉಳಿಸಿಕೊಳ್ಳಲು ಎಷ್ಟು ಸಂಕಟಪಡುತ್ತಿದೆಯೆನ್ನುವುದು ತಿಳಿಯುತ್ತಿತ್ತು. 'ನೀರಿನಿಂದ ಹೊರಗೆ ಎಲ್ಲಾದರೂ ಒಂದು ಬಿಲವನ್ನು ಸೇರಿಕೊಂಡರೆ ಸಾಕು, ತಾನು ಪಾರಾಗುತ್ತೇನೆ' ಎಂದು ಅದು ಅಂದುಕೊಂಡಂತಿತ್ತು. ಅದು ಕೊರಳಲ್ಲಿ ನೆಟ್ಟ

ಆಯುಧದೊಂದಿಗೆ ಹಾಗೇ ನೀರಿನಲ್ಲಿ ಮತ್ತೆ ಈಸಲಾರಂಭಿಸಿತ್ತು. ಮಕ್ಕಳು ಮತ್ತು ಆ ರಿಕ್ಷಾ ಡ್ರೈವರ್ ಇನ್ನೂ ಹೆಚ್ಚು-ಹೆಚ್ಚು ಉತ್ಸಾಹದಿಂದ ಕಲ್ಲುಗಳನ್ನೊಗೆಯುವ ಆಟದಲ್ಲಿ ತೊಡಗಿದ್ದರು. ಹತ್ತಿರದಲ್ಲೇ ಈಸುತ್ತಿದ್ದ ನಾಲ್ಕಾರು ಬಾತುಕೋಳಿಗಳು ಅಚ್ಚರಿಯಿಂದ ತಮ್ಮ ಉದ್ದನೆಯ ಕತ್ತುಗಳನ್ನು ಚಾಚಿ ನೋಡುತ್ತಿದ್ದವು. ನೀರಿನಲ್ಲಿ ಬೀಳುತ್ತಿದ್ದ ಕಲ್ಲುಗಳಿಂದ ಗಾಬರಿಗೊಂಡು ಅವುಗಳು ಬೇಗ-ಬೇಗ ಈಸುತ್ತ ಝರಿಯ ಮೇಲ್ಗಡೆಗೆ ಹೊರಟುಹೋದವು.

ನನಗೆ ಆ ಘಟನೆಯ ಕೊನೆಯನ್ನು ನೋಡುವ ಇಚ್ಛೆಯಿರಲಿಲ್ಲ. ಆ ಇಲಿಯ ಸಾವಂತೂ ನಿಶ್ಚಿತವಾಗಿತ್ತು. ಆದರೂ ಅದು ಸಾವಿನಿಂದ ಪಾರಾಗಲು ತನ್ನ ಶಕ್ತಿಮೀರಿ ಹವಣಿಸುತ್ತಿದ್ದ ದೃಶ್ಯ ನನ್ನ ಮನಸ್ಸಿನ ಮೇಲೆ ಅಚ್ಚಳಿಯದಂತೆ ಮೂಡಿತ್ತು. ನನಗೇಕೋ ಒಮ್ಮೆಲೇ ತುಂಬ ಏಕಾಕಿತನದ ಅನುಭವವಾಗಿ ಮನಸ್ಸು ಮುದುಡಿಕೊಂಡಂತಾಗಿತ್ತು. 'ನಾನು ಬಯಸುತ್ತಿರುವ ಶಾಂತಿಗೆ ಮೊದಲು ಇಂತಹ ನೋವನ್ನನುಭವಿಸಬೇಕಾದೀತು, ಇದೇ ಸತ್ಯ' ಎನಿಸಿತ್ತು. 'ಇನ್ನೇನು, ಮರಣದ ನಂತರದ ಆ ಅಂತಿಮ ಶಾಂತಿ ಹತ್ತಿರದಲ್ಲಿಯೇ ಇದೆ' ಎನಿಸುತ್ತಿದ್ದರೂ, ಅದರವರೆಗೆ ಮುಟ್ಟುವ ದಾರಿಯ ಪಯಣದ ಬಗ್ಗೆ ಹೆದರಿಕೆಯಾಗುತ್ತಿತ್ತು. ಆತ್ಮಹತ್ಯೆಯ ಕಲ್ಪನೆಯೇ ಗೊತ್ತಿಲ್ಲದ ಪಶುಗಳು ಆ ಪಯಣದ ಹೋರಾಟವನ್ನು ಕೊನೆ ಮುಟ್ಟುವವರೆಗೆ ಅನುಭವಿಸಲೇಬೇಕಾಗುತ್ತದೆ. ಆ ಇಲಿ ಅನುಭವಿಸುತ್ತಿದ್ದ ನೋವನ್ನು ಇಂದು ನಾನು ಅನುಭವಿಸಬೇಕಾಗಿ ಬಂದಿದ್ದರೆ? ನಾನೇನು ಮಾಡುತ್ತಿದ್ದೆ? ನಾನೂ ಆ ನೋವಿನಲ್ಲಿಯೂ ಬದುಕಿ ಉಳಿಯಲು ಹಾಗೇ ಹೆಣಗಾಡುತ್ತಿದ್ದೆನಲ್ಲವೇ? ನನ್ನ ಅಪಘಾತದ ನಂತರ ನಾನು ಮಾಡಿದ್ದು ಅದೇ ಎನ್ನುವದು ನನಗೆ ನೆನಪಾಗದೇ ಇರಲಿಲ್ಲ. ನನ್ನ ಜೀವವನ್ನುಳಿಸಿಕೊಳ್ಳಲು ನನಗೆ ಶಕ್ಯವಿದ್ದದ್ದನ್ನೆಲ್ಲ ಮಾಡಬಯಸಿದ್ದೆ. ನಾನು ಯಾವ ಆಸ್ಪತ್ರೆಗೆ ಹೋಗಬೇಕು ಎಂಬುದನ್ನು ನಾನೇ ನಿರ್ಧರಿಸಿ, ಸಹಾಯಕ್ಕೆ ಬಂದವರಿಗೆ ಆ ಆಸ್ಪತ್ರೆಗೆ ಹೇಗೆ ಹೋಗುವದು ಎಂಬುದನ್ನು ಹೇಳಿದೆ. "ಅಲ್ಲಿನ ಡಾಕ್ಟರರು ಹೊರಗೆಲ್ಲಾದರೂ ಹೋಗಿದ್ದರೆ ಕೂಡಲೇ ಆಪರೇಶನ್ ಮಾಡಲು ಶಕ್ಯವಾಗಲಿಕ್ಕಿಲ್ಲ, ಮೊದಲೇ ಅವರಿಗೆ ಫೋನ್ ಮಾಡಿರಿ" ಎಂದೂ ಹೇಳಿದ್ದೆ. ಅರ್ಧಪ್ರಜ್ಞಾವಸ್ಥೆಯಲ್ಲಿದ್ದಾಗ ಸಹ ನನ್ನ ಮನಸ್ಸು ಈ ಎಲ್ಲ ವಿಷಯಗಳ ಬಗ್ಗೆ ಇಷ್ಟು ಸರಿಯಾಗಿ ವಿಚಾರ ಮಾಡುತ್ತಿತ್ತು ಎಂಬುದನ್ನು ನೆನೆದು ನನಗೆ ಆಮೇಲೆ ಬಹಳ ಅಚ್ಚರಿಯಾಗಿತ್ತು. ನಾನು ಬದುಕಿ ಉಳಿಯುತ್ತೇನೋ ಇಲ್ಲವೋ ಅನ್ನುವುದು ನನಗೆ ಗೊತ್ತಿರಲಿಲ್ಲ. ಒಂದು ಕ್ಷಣ 'ನಾನು ಸಾಯಬಹುದು' ಎಂದೂ ಅನಿಸಿತ್ತು. ಆದರೆ ಆಮೇಲೆ ಆ ಬಗ್ಗೆ ವಿಚಾರ ಮಾಡಿದಾಗ 'ಆ ಕ್ಷಣದಲ್ಲಿ ಸಾವಿನ ಬಗ್ಗೆ ಹೆದರಿಕೆಯೆಂದೇನೂ ಭಾಸವಾಗಿರಲಿಲ್ಲ ಎಂಬುದು ನೆನಪಾಗಿ ನನ್ನದೇ ನನಗೆ ತುಂಬ ಆಶ್ಚರ್ಯವೆನಿಸಿತ್ತು. ನನ್ನ ಬದಿಯಲ್ಲಿದ್ದ ಮಿತ್ರರನ್ನು ಕೇಳಿದ್ದೆ – "ಡಾಕ್ಟರ್ ಏನೆಂದರು? ಜೀವಕ್ಕೆ ಅಪಾಯವಿದೆಯೇ?"

ಅವರು ಹೇಳಿದ್ದರು – ಇಲ್ಲ, ಹಾಗೇನಿಲ್ಲ. ಡಾಕ್ಟರ್ ಏನೂ ಅಪಾಯವಿಲ್ಲ ಎಂದಿದ್ದಾರೆ.

ಅದನ್ನು ಕೇಳಿದೊಡನೆ ನನಗೆ ಹುರುಪು ಬಂದಿತ್ತು. ಮೈಯಲ್ಲಿ ಉತ್ಸಾಹ ತುಂಬಿದಂತಾಗಿತ್ತು. 'ಅಪಾಯವಿದೆ' ಎಂದು ಹೇಳಿದ್ದರೆ ನಾನೇನು ಮಾಡಬಹುದಾಗಿತ್ತು ? ನನಗೆ ಊಹಿಸಲಾಗುತ್ತಿರಲಿಲ್ಲ. ನಾನು ಉದ್ವಿಗ್ನನಾಗಬಹುದಿತ್ತು, ಆದರೆ ನಾನು ಅಲ್ಲಿಯವರೆಗೆ ತಿಳಿದುಕೊಂಡಂತೆ ತೀವ್ರ ಭಯಭೀತನಾಗುತ್ತಿರಲಿಲ್ಲ ಎಂದು ಮಾತ್ರ ಅನಿಸುತ್ತಿತ್ತು. ಆಗಲೂ ನಾನು ಬದುಕಿ ಉಳಿಯುವ ಪ್ರಯತ್ನಗಳನ್ನೇನೂ ನಿಲ್ಲಿಸುತ್ತಿರಲಿಲ್ಲ ಎಂದು ಅನಿಸುತ್ತಿತ್ತು. ಬಹುಶಃ ನಾನೂ ಆ ಇಲಿಯ ಹಾಗೆಯೇ ವರ್ತಿಸುತ್ತಿದ್ದೆ – ಇನ್ನು ಮುಂದೆಯೂ ಸಹ ಹಾಗೇ ಆಗಬಹುದು – ಆಗಲಿ, ಹಾಗೇ ಆಗಲಿ, ನನ್ನ ಈ ಕ್ಷಣದ ಭಾವನೆಗಳಿಂದ ನನ್ನ ವರ್ತನೆಯಲ್ಲಿ ಹೆಚ್ಚೇನೂ ಬದಲಾಗಲಾರದು ಎಂಬ ಸ್ಪಷ್ಟವಾದ ಅರಿವೂ ಇತ್ತು ನನಗೆ. ಹಾಗೆ ಒಂದು ವೇಳೆ ಬದಲಾದರೂ ಒಳ್ಳೆಯದೇ, ಬದಲಾಗದಿದ್ದರೂ ಪರವಾಗಿಲ್ಲ, ಎರಡನ್ನೂ ಸ್ವೀಕರಿಸಲು ಸಿದ್ಧನಾಗಿದ್ದೆ.

ಮುಂದೆ ಕೆಲದಿನಗಳ ನಂತರ ಒಂದು ಸಂಜೆ ಒಬ್ಬನೇ ನದಿಯ ದಂಡೆಗುಂಟ ನಡೆಯುತ್ತ ಬೆಟ್ಟವನ್ನೇರುತ್ತಿದ್ದೆ. ಮೇಲೆ ಹತ್ತಿದಂತೆ ದಾರಿ ಇಕ್ಕಟ್ಟಾಗುತ್ತ ಬಂದಿತ್ತು. ರೇಲ್ವೆ ಲೈನಿನ ಮೇಲಿದ್ದ ಟನೆಲ್‌ಅನ್ನು ದಾಟಿದ ಮೇಲೆ ಕಡಿದಾದ ಏರಿತ್ತು. ಅತ್ತಿತ್ತ ಮನೆಗಳೂ ಕಾಣದಂತಾಗಿದ್ದವು. ಅಲ್ಲಿಂದಲೇ ತಿರುಗಿಬಿಡಬೇಕು ಎನಿಸುತ್ತಿತ್ತು. ಆದರೂ ಮುಂದಿನ ತಿರುವಿನವರೆಗೆ ನಡೆದು ಅಲ್ಲೇನಿದೆ ಎಂದು ನೋಡುವ

# ಹೃದಯದೊಲವೇ ಬಾಗಿಲು



ವಿಜಾತಿಗಳಲ್ಲಿ ಹುಟ್ಟುವುದೇ ಪ್ರೀತಿ
ಗಂಡು ಒಂದು ಜಾತಿ
ಹೆಣ್ಣು ಒಂದು ಜಾತಿ
ಇದು ಸರ್ವವ್ಯಾಪಿ ಪ್ರೀತಿ




ಸ್ವಜಾತಿಗಳಲ್ಲಿಯೂ ಹುಟ್ಟುತ್ತದೆ ಪ್ರೀತಿ
ಗಂಡು ಗಂಡಿನಲ್ಲಿ
ಹೆಣ್ಣು ಹೆಣ್ಣಿನಲ್ಲಿ
ಇದು ಸಲಿಂಗ ಪ್ರೀತಿ

ಜಾತಿ, ವಿಜಾತಿ ಎನ್ನದೆಯೂ ಹುಟ್ಟುತ್ತದೆ ಪ್ರೀತಿ
ಹುಡುಗ ಒಂದು ಜಾತಿ
ಹುಡುಗಿ ಇನ್ನೊಂದು ಜಾತಿ
ಇದು ಸೌಹಾರ್ಧ ಪ್ರೀತಿ

ಹೀಗೆ ಪ್ರೀತಿಗೆ ಹಲವು ಮುಖ
ಅದಕ್ಕಿಲ್ಲ ಜಾತಿ, ವಿಜಾತಿಯ ದು:ಖ

ಪ್ರೀತಿಗೆ ಪ್ರೀತಿಯೊಂದೇ ಕಾರಣ
ಹೃದಯದೊಲವೇ ಬಾಗಿಲು
ದ್ವೇಷಕ್ಕೆ ದ್ವೇಷವೊಂದೇ ಕಾರಣ
ಸ್ವಜಾತಿ ದುರಭಿಮಾನವೇ ಮೆಟ್ಟಿಲು

**ಡಾ॥ ಮೈನುದ್ದೀನ ರೇವಡಿಗಾರ**
ಸೆಕ್ಟರ್ ಸಂಖ್ಯೆ – ೨, ೧ನೇ ಮುಖ್ಯರಸ್ತೆ
ನವನಗರ, ಬಾಗಲಕೋಟೆ

ಕುತೂಹಲ, ಹಾಗೆಯೇ ನಡೆಯುತ್ತ ಮುಂದೆ, ಮುಂದೆ ಹೋದೆ. ಸುತ್ತಲೆಲ್ಲ ಬೆಟ್ಟಕ್ಕೆ ತಿಳಿಹಸಿರು ಬಣ್ಣದ ಹೊದಿಕೆ, ಹವೆಯೂ ತಂಪಾಗಿತ್ತು. ಸುತ್ತಲಿನ ಶಾಂತಿ ಏಕೋ ನನ್ನ ಮನಸ್ಸಿನಲ್ಲಿ ಅಶಾಂತಿಯ ಅಲೆಯನ್ನೆಬ್ಬಿಸಿತ್ತು. ದಾರಿಯ ಬದಿಗೆ ಒಂದು ದೊಡ್ಡ ಮಲ್ಬರಿ ಮರವಿತ್ತು. ರಸ್ತೆಯ ಮೇಲೆ ಚಾಚಿದ ಅದರ ಟೊಂಗೆಯೊಂದರ ಮೇಲೆ ಒಂದೇ ಎಲೆ ಒಂದೇ ಸಮನೆ ಲಯಬದ್ಧವಾಗಿ ಅಲ್ಲಾಡುತ್ತಿದ್ದುದು ಕಾಣಿಸಿತು. ಗಾಳಿಯು ಇರಲಿಲ್ಲ. ನೀರಿನ ಪ್ರವಾಹದ ಶಬ್ದವೊಂದನ್ನು ಬಿಟ್ಟರೆ ಬೇರೆಲ್ಲವೂ ನಿಶ್ಶಬ್ದವಾಗಿತ್ತು, ಆದರೆ ಅದೊಂದು ಎಲೆ ಅಲ್ಲಾಡುತ್ತಲೇ ಇತ್ತು. ಅದೇನೋ ವಿಚಿತ್ರವೆನಿಸಿತು, ಕಿಂಚಿತ್ ಭಯವೆನಿಸಿದರೂ ಕುತೂಹಲವೆನಿಸಿ ಅದರ ಹತ್ತಿರ ಹೋಗಿ ಸ್ವಲ್ಪ ಹೊತ್ತು ನೋಡುತ್ತ ನಿಂತೆ. ಅಷ್ಟರಲ್ಲಿಯೇ ಗಾಳಿಯ ಸುಳಿಯೊಂದು ಹರಿದು ಬಂದಿತ್ತು, ಆ ಎಲೆ ಅಲ್ಲಾಡುವುದು ನಿಂತಿತ್ತು. ಅಲ್ಲಿ ಏನು ನಡೆಯಿತು ಎನ್ನುವುದರ ಅರಿವಾಯಿತು ನನಗೆ. ನನಗಿದೆಲ್ಲ ಮೊದಲೇ ತಿಳಿದಿತ್ತು ಎಂದೂ ಅನಿಸಿತ್ತು.

ಕತ್ತಲೆಯಾಗತೊಡಗಿತ್ತು. ಎಷ್ಟು ನಡೆದರೂ ಮುಂದೆ ತಿರುವುಗಳಿದ್ದೇ ಇದ್ದವು. ಅಲ್ಲಿಂದಲೇ ತಿರುಗುವುದು ಎಂದು ನಿಶ್ಚಯಿಸಿದೆ. ಒಂದು ಕ್ಷಣ ನಿಂತು ನೀರಿನ ಪ್ರವಾಹದತ್ತ ನೋಡಿದೆ. ಎದುರಿನ ದಂಡೆಯ ಮೇಲೆ ನೀರಿಗೆ ಸುಮಾರು ಒಂದು ಮಾರು ದೂರದಲ್ಲಿ ಒಂದು ಇಳಿಜಾರಾದ ಬಂಡೆಯಿತ್ತು. ಅದರ ಮೇಲೆ ಏನೋ ಒಂದು ಕಪ್ಪು ವಸ್ತು ಕಾಣಿಸಿತು. ಸರಿಯಾಗಿ ನೋಡಿದಾಗ ಅದು ನೀರಿನಲ್ಲಿ ವಾಸಿಸುವ ಹಲ್ಲಿ ಎಂದು ಗೊತ್ತಾಯಿತು. ಚಂದದ ಬಣ್ಣದ ಆ ಹಲ್ಲಿ ಕೆಳಗೆ ಮುಖಮಾಡಿ, ನೀರನ್ನೇ ನೋಡುತ್ತ ಶಾಂತವಾಗಿ ಮಲಗಿತ್ತು, ಅದರ ದೇಹದಿಂದ ಇನ್ನೂ ನೀರಿಳಿಯುತ್ತಿತ್ತು. ಏನೋ ವಿಚಾರ ಮಾಡುತ್ತ ಅಲ್ಲಿಯೇ ಅದನ್ನು ನೋಡುತ್ತ ಒಂದು ಕ್ಷಣ ಕುಳಿತೆ. ನನಗೆ ಇತ್ತೀಚೆಗೆ ಈ ಹಲ್ಲಿಗಳನ್ನು ಕಂಡರೆ ಅಸಹ್ಯವೆನಿಸುತ್ತಿರಲಿಲ್ಲ. ನೆಲದ ಮೇಲೆ ಓಡಾಡುವ ಹಲ್ಲಿಗಳ ಬಗ್ಗೆ ಒಂದು ಬಗೆಯ ಆಕರ್ಷಣೆಯೂ ಬೆಳೆದಿತ್ತು. ಆದರೆ ಗೋಡೆಯ ಮೇಲಿನ ಹಲ್ಲಿಗಳ ಹತ್ತಿರ ಮಾತ್ರ ನಾನು ಹೋಗುತ್ತಿರಲಿಲ್ಲ. ಹತ್ತು ವರ್ಷಗಳ ಹಿಂದೆ ಟೋಕಿಯೋದ ಹತ್ತಿರದ ಪರ್ವತಪ್ರದೇಶದಲ್ಲಿ ವಾಸಿಸುತ್ತಿದ್ದಾಗ ಒಂದು ದಿನ ಹೋಟೆಲಿನ ಒಂದು ಮೋರಿಯ ಬದಿಗೆ ನೀರಹಲ್ಲಿಗಳು ಗುಂಪುಗೂಡಿ ಕುಳಿತದ್ದನ್ನು ನೋಡಿದೆ. ಅವುಗಳನ್ನು ನೋಡಿದಾಗ ನಾನೂ ಇವುಗಳಂತೆ ನೀರಹಲ್ಲಿಯಾಗಿದ್ದರೆ ಎಂಬ ವಿಚಾರ ಬಂದು ಅದು ತುಂಬ ಅಸಹ್ಯವೆನಿಸಿತ್ತು. ಮುಂದಿನ ಜನ್ಮದಲ್ಲೇನಾದರೂ ನೀರ ಹಲ್ಲಿಯಾಗಿ ಹುಟ್ಟಿದರೆ ಹೇಗನಿಸಬಹುದು ಎಂದು ಒಂದು ವಿಚಾರ ಬಂದಿತ್ತು. ಇದುವರೆಗೆ ನೀರಹಲ್ಲಿಗಳನ್ನು ನೋಡಿದಾಗಲೆಲ್ಲ ಅದೇ ವಿಚಾರ ಬರುತ್ತಿತ್ತು, ಆದ್ದರಿಂದ ಅವುಗಳನ್ನು ನೋಡುವುದೇ ಬೇಡ ಎನಿಸುತ್ತಿತ್ತು. ಆದರೆ ಈಗ ಆ ವಿಚಾರ ನನ್ನನ್ನು ಕಾಡಲಿಲ್ಲ. ಈಗ ಅಲ್ಲಿ ಮಲಗಿದ ಹಲ್ಲಿಯನ್ನು ಸ್ವಲ್ಪ ಹೆದರಿಸಿ ತಿರುಗಿ ನೀರಲ್ಲಿ ಹೋಗುವಂತೆ ಮಾಡಬೇಕು ಎನಿಸಿತ್ತು. ಅದು ತನ್ನ ದೇಹವನ್ನು ಹೊರಳಿಸುತ್ತ ಹೇಗೆ ನೀರಿನಲ್ಲಿ ಹೋಗಬಹುದು ಎನ್ನುವ ಚಿತ್ರವೂ ನನ್ನ ಕಣ್ಣಮುಂದೆ ಹಾಯ್ದು ಹೋಗಿತ್ತು. ಅಲ್ಲಿಯೇ ನೀರಿನ ಬದಿಗೆ ಕುಳಿತು ಒಂದು ಸಣ್ಣ ಕಲ್ಲನ್ನೆತ್ತಿ ಅದರೆಡೆಗೆ ಎಸೆದೆ. ಗುರಿಯಿಟ್ಟೇನೂ ಎಸೆಯಲಿಲ್ಲ, ಗುರಿಯಿಟ್ಟಿದ್ದರೂ ನನ್ನ ಗುರಿ ಅದನ್ನು ಮುಟ್ಟುತ್ತಿರಲಿಲ್ಲ ಎನ್ನುವದು ಖಂಡಿತ, ನನಗೆ ಹಾಗೆ ಗುರಿಯಿಟ್ಟು ಹೊಡೆಯಲು ಬರುವದೇ ಇಲ್ಲ. ನಾನೆಸೆದ ಕಲ್ಲು ಬಂಡೆಗೆ ಬಡಿದು ನೀರಲ್ಲಿ ಬಿದ್ದಿತ್ತು. ಅದು ಕಲ್ಲಿಗೆ ಬಡಿದ ಕ್ಷಣದಲ್ಲಿ ಹಲ್ಲಿ ಒಂದು ಬದಿಗೆ ಒಂದು ಗೇಣಂತರಕ್ಕೆ ಜಿಗಿದಂತೆನಿಸಿತು. ಅದರ ಬಾಲ ಪೂರ್ತಿ ಮೇಲೆದ್ದಿತ್ತು. ಏನಾಯಿತು ಎಂಬುದು ನನಗೆ ಮೊದಲು ತಿಳಿಯಲಿಲ್ಲ. ನಾನು ಎಸೆದ ಕಲ್ಲು ಅದಕ್ಕೆ ಬಡಿದಿರಬಹುದು ಎಂದೂ ಅನಿಸಲಿಲ್ಲ ನನಗೆ. ಮೇಲೆದ್ದು ಸುರುಳಿಗೊಂಡ ಅದರ ಬಾಲ ನಿಧಾನವಾಗಿ ಬಿಚ್ಚಿ ಕೆಳಗೆ ಬಿದ್ದಿತ್ತು. ಅದರ ಮುಂದಿನ ಕಾಲುಗಳು ಮಧ್ಯಕ್ಕೆ ಕತ್ತರಿಸಲ್ಪಟ್ಟಿದ್ದವು, ಕಾಲ್ಬೆರಳುಗಳು ಮುದುರಿಕೊಂಡಿದ್ದವು. ಹಲ್ಲಿ ಮತ್ತು ಅದರ ಬಾಲ ನಿಶ್ಚೇತನವಾಗಿ ಬಂಡೆಯ ಮೇಲೆ ಬಿದ್ದುಕೊಂಡಿದ್ದವು. ಅದು ಅಲ್ಲಾಡಲೂ ಇಲ್ಲ. ಹಲ್ಲಿ ಸತ್ತುಹೋಗಿತ್ತು.

## ಸಮತೆ

ಸೂರ್ಯನ ಕಾಂತಿ
ಹರಿಯುತ್ತದೆ ಸದಾ
ಕೆಳಗಿರುವ ನಮ್ಮ ಮೇಲೆ...
ಮೇಲಿದ್ದವರು ಕೆಳಗಿನವರಿಗೆ
ಕೊಡುತ್ತಲೇ ಇದ್ದರೆ ಒಸಗೆ
ಎಷ್ಟು ಚೆನ್ನ ಅಲ್ಲವೇ ?
ಎಲ್ಲರೂ ನಿತ್ಯ ಹರ್ಷಿತರಾಗಿ
ಸಮರಸ ಭಾವ
ಮೆರೆಯಬಹುದಲ್ಲವೇ ?

**ವಿ. ಸುಬ್ರಹ್ಮಣ್ಯ ಭಟ್**
ಉಪನ್ಯಾಸಕರು, ತುಂಬೆ ಪ. ಪೂ. ಕಾಲೇಜು
ತುಂಬೆ, ಬಂಟ್ವಾಳ
ದಕ್ಷಿಣ ಕನ್ನಡ – ೫೭೪ ೧೪೩



ಅಯ್ಯೋ, ಎಂಥ ಕೆಲಸ ಮಾಡಿದೆ! ಈ ಮೊದಲು ನಾನು ಎಂದೂ ಹಲ್ಲಿಯನ್ನು ಕೊಂದಿರಲಿಲ್ಲ ಎಂದಲ್ಲ, ಆದರೆ ಇಂದು ನನಗೆ ಅದನ್ನು ಕೊಲ್ಲುವ ಉದ್ದೇಶವಿರಲಿಲ್ಲ, ಆದರೂ ನನ್ನ ಕೈಯಿಂದ ಅಪರಾಧವಾಗಿ ಹೋಗಿತ್ತು ಎನ್ನುವ ಸಂಗತಿಯಿಂದ ನನಗೆ ಬಹಳ ಖೇದವಾಗಿತ್ತು. ಅಪರಾಧ ಮಾಡಿದ್ದು ನಾನೇ, ಆದರೆ ಅದು ಆಕಸ್ಮಿಕವಾಗಿತ್ತು. ಪಾಪ, ಹಲ್ಲಿಗೂ ಅದು ಅನಿರೀಕ್ಷಿತವಾಗಿತ್ತು, ಆಕಸ್ಮಿಕವಾಗಿಯೇ ಸಾವು ಬಂದಿತ್ತು. ನಾನು ಅಂದು ಅಲ್ಲಿಯೇ ಎಷ್ಟೋ ಹೊತ್ತು ಕುಳಿತೇ ಇದ್ದೆ. ಆಗ ಅಲ್ಲಿ ಇದ್ದವರು ನಾನು ಮತ್ತು ಆ ಹಲ್ಲಿ ಮಾತ್ರ, ಉಳಿದೆಲ್ಲ ಜಗತ್ತಿನ ಅರಿವು ಮರೆಯಾಗಿತ್ತು. ನಾನೇ ಆ ಹಲ್ಲಿಯಾಗಿ ಅದರ ವೇದನೆಯನ್ನನುಭವಿಸಿದ್ದೆ. ಅಂತಿಮಕ್ಷಣದ ಅದರ ಆ ಏಕಾಕಿತನದ ನೋವನ್ನನುಭವಿಸಿ ಆ ಹಲ್ಲಿಯ ಬಗ್ಗೆ ತುಂಬ ದುಃಖಿತನಾಗಿದ್ದೆ. ನನಗಾದ ಅಪಘಾತದಲ್ಲಿ ಆಕಸ್ಮಿಕವಾಗಿ ನಾನು ಉಳಿದುಕೊಂಡಿದ್ದೆ, ಅಷ್ಟೇ ಆಕಸ್ಮಿಕವಾಗಿ ಆ ಹಲ್ಲಿ ತನಗಾದ ಅಪಘಾತದಲ್ಲಿ ಸತ್ತುಹೋಗಿತ್ತು. ನಾನೂ ಏಕಾಕಿಯಾಗಿದ್ದೆ. ಅದೇ ಭಾವನೆಯಲ್ಲಿ ನಾನು ಅಲ್ಲಿಂದೆದ್ದು ಹೋಟೆಲ್ ಕಡೆಗೆ ನಡೆಯತೊಡಗಿದೆ. ಪಟ್ಟಣವನ್ನು ಸಮೀಪಿಸುತ್ತಿದ್ದಂತೆ ಅಲ್ಲಿಯ ವಿದ್ಯುದ್ದೀಪಗಳು ಕಾಣತೊಡಗಿದ್ದವು. ಆ ಸತ್ತ ದುಂಬಿಗೆ ಏನಾಯಿತು? ಬಹುಶಃ ಮಳೆಯ ನೀರಿನೊಂದಿಗೆ ನೆಲದಾಳದಲ್ಲಿಳಿದು ಹುಗಿದು ಹೋಗಿರ ಬೇಕು. ಮತ್ತೆ ಇಲಿ? ಪ್ರವಾಹದೊಂದಿಗೆ ಬಹುಶಃ ಸಮುದ್ರವನ್ನು ಸೇರಿರಬೇಕು, ಈಗಾಗಲೇ ಅದರ ಬಾತುಕೊಂಡ ದೇಹ ನೀರಿನಲ್ಲಿಯ ಕೊಳೆಯೊಂದಿಗೆ ದಂಡೆಗೆ ಹರಿದು ಬರುತ್ತಿರಬೇಕು. ಆದರೆ ಅಪಘಾತದಲ್ಲಿ ಸಾಯದೇ ಉಳಿದ ನಾನು ಇಂದು ಇಲ್ಲಿ ನಡೆದು ಹೋಗುತ್ತಿದ್ದೇನೆ... ನಾನು ಎಂಥ ಸುದೈವಿ ಎಂದೆನಿಸಿ ನನಗೆ ಸಂತೋಷವಾಗಬೇಕಿತ್ತು, ಆದರೆ ನನಗೆ ಹಾಗೆ ಸಂತೋಷದ ಅನುಭವವಾಗುತ್ತಿರಲಿಲ್ಲ. ಬದುಕು–ಸಾವು ಅಂತಹ ವಿರೋಧಾವಸ್ಥೆಗಳೆಂದು ಅನಿಸುತ್ತಲೂ ಇರಲಿಲ್ಲ. ಅವೆರಡರ ನಡುವೆ ಅಂತಹ ವಿಶೇಷ ಅಂತರವೂ ಕಾಣುತ್ತಿರಲಿಲ್ಲ.

ಆಗ ಸಾಕಷ್ಟು ಕತ್ತಲೆಯಾಗಿತ್ತು. ನನಗೆ ದೂರದ ದೀಪಗಳು ಮಾತ್ರ ಕಾಣುತ್ತಿದ್ದವು. ಕತ್ತಲೆಯಲ್ಲಿ ಕಾಲಕೆಳಗಿನ ನೆಲ ಕಾಣದಾಗಿತ್ತು. ಹೀಗಾಗಿ ನೆಲದ ಸ್ಪರ್ಶದ ಸ್ಪಷ್ಟ ಸಂವೇದನೆಯಿಲ್ಲದೆ ನನ್ನ ಹೆಜ್ಜೆಗಳು ದೃಢವಾಗಿರಲಿಲ್ಲ. ಆದರೆ ತಲೆ ಮಾತ್ರ ಸರಿಯಾಗಿ ಕೆಲಸ ಮಾಡುತ್ತಿತ್ತು. ಅದು ನನ್ನನ್ನು ಇವೇ ಕಲ್ಪನೆಗಳಲ್ಲಿ ದೂರ – ದೂರಕ್ಕೆ ಎಳೆದೊಯ್ದಿತ್ತು.

ಮೂರು ವಾರಗಳ ನಂತರ ನಾನು ಅಲ್ಲಿಂದ ಹೊರಟೆ. ಈಗ ಆ ಮಾತಿಗೆ ಮೂರು ವರ್ಷ ಗಳಾಗಿವೆ. ನಾನು ಬೆನ್ನೆಲುಬಿನ ಕ್ಷಯಕ್ಕೆ ತುತ್ತಾಗಲಿಲ್ಲ, ಅದರಿಂದ ಪಾರಾದೆ.

ಜಪಾನೀ ಮೂಲ : **ಶಿಗಾ ನಾವೋಯಾ**
ಅನುವಾದ (ಇಂಗ್ಲಿಷಿನಿಂದ) : **ದಮಯಂತಿ ನರೇಗಲ್ಲ**
'ಇಂಪನ', ೪ನೇ ಅಡ್ಡರಸ್ತೆ, ಸಾಧನಕೇರಿ
ಧಾರವಾಡ – ೫೮೦ ೦೦೮

# ಎಚ್ಚೆನ್ ಹೋರಾಟದ ಇನ್ನೊಂದು ಮುಖ



**ಜಿ. ರಾಮಕೃಷ್ಣ**

**ಡಾ॥** ಎಚ್. ನರಸಿಂಹಯ್ಯನವರು ನಮ್ಮ ನಡುವೆ ಇದ್ದಿದ್ದರೆ ಇದೇ ಜೂನ್ ಮೊದಲ ವಾರದಲ್ಲಿ ಅವರು ನೂರಕ್ಕೆ ಕಾಲಿಟ್ಟಿರುತ್ತಿದ್ದರು. (೬.೬.೧೯೨೦ – ೩೦.೧.೨೦೦೫) ಒಂದು ವರ್ಷದಿಂದ ಅವರ ಜನ್ಮಶತಮಾನೋತ್ಸವ ಜಾರಿಯಲ್ಲಿದೆ. ಅವರು ವೈಜ್ಞಾನಿಕ ಮನೋಭಾವದ ಪ್ರತಿಪಾದಕರಾಗಿ ಮತ್ತು ಸಹಸ್ರಾರು ವಿದ್ಯಾರ್ಥಿಗಳ ನೆಚ್ಚಿನ ಗುರುವಾಗಿ ಬಹಳ ಪ್ರಸಿದ್ಧರಾಗಿದ್ದಾರೆ. ಏನಿಲ್ಲವೆಂದರೂ ಸುಮಾರು ಎಪ್ಪತ್ತು ವರ್ಷಗಳ ಕಾಲ ನ್ಯಾಷನಲ್ ವಿದ್ಯಾಸಂಸ್ಥೆಯೊಡನೆ ನಿಕಟ ಸಂಬಂಧ ಹೊಂದಿದ್ದ ಅವರ ಶತಮಾನೋತ್ಸವದ ಉದ್ಘಾಟನೆಯನ್ನು 'ದಿ ನ್ಯಾಷನಲ್ ಎಜುಕೇಷನ್ ಸೊಸೈಟಿ ಆಫ್ ಕರ್ನಾಟಕ'ವು ಈಗ್ಗೆ ಒಂದು ವರ್ಷದ ಹಿಂದೆ ಬೇರೊಂದು ಸಂಸ್ಥೆಯ ಆಶ್ರಯದಲ್ಲಿ ನೆರವೇರಿಸಿದ್ದು ಇತಿಹಾಸದ ಒಂದು ವ್ಯಂಗ್ಯ. ಸ್ವತಂತ್ರವಾಗಿ ಅವರ ಶತಮಾನೋತ್ಸವವನ್ನು ಉದ್ಘಾಟಿಸಿಕೊಳ್ಳುವ ಒಲವು ಸಹ ಸಂಸ್ಥೆಯು ತೋರ್ಪಡಿಸದೆ ಹೋದದ್ದು ಅಪಾರ ಸಂಖ್ಯೆಯ ವಿದ್ಯಾರ್ಥಿಗಳಿಗೆ ಮತ್ತು ಸಂಸ್ಥೆಯ ಬೆಂಬಲಿಗರಿಗೆ ನಿರಾಸೆಯುಂಟುಮಾಡಿತ್ತು. ಉತ್ಸವದ ಉದ್ಘಾಟನೆಗೆ ರಾಷ್ಟ್ರಪತಿ ಇರಬೇಕೆಂಬ ಆಶಯವನ್ನು ಪೂರೈಸಿಕೊಳ್ಳಲು "ಎನ್.ಇ.ಎಸ್." ಬೇರೊಂದು ಸಂಸ್ಥೆಯೊಡನೆ ತೆಕ್ಕೆ ಹಾಕಿಕೊಂಡದ್ದು ಡಾ॥ ಎಚ್ಚೆನ್ ಅವರ ವ್ಯಕ್ತಿತ್ವಕ್ಕೆ ಶೋಭೆ ತರುವಂಥದಾಗಿರಲಿಲ್ಲ. ಅದರಿಂದ ಅವರ ಘನತೆಗೇನೂ ಚ್ಯುತಿಯುಂಟಾಗಿಲ್ಲವಾದರೂ ಅವರು ಅಷ್ಟು ನಿಷ್ಠೆಯಿಂದ ಬೆಳೆಸಿದ್ದ ಸಂಸ್ಥೆಯ ಕ್ರಮವು ಮಾನ್ಯವಂತೂ ಆಗಲಾರದು.

'ಹೋರಾಟದ ಹಾದಿ'ಯಲ್ಲಿ ಹೆಮ್ಮೆಯಿಂದ ಮುನ್ನಡೆದ ಎಚ್ಚೆನ್ ಅವರ ಹೋರಾಟದ ಕ್ಷೇತ್ರಗಳು ಹಲವು. ಅವುಗಳಲ್ಲಿ ವಿಶಿಷ್ಟವಾದವೆಂದರೆ ಶಿಕ್ಷಣ ಮತ್ತು ವೈಚಾರಿಕತೆ. ಆಡಳಿತದ ವಿವಿಧ ಹಂತಗಳಲ್ಲಿ ಅವರೆದುರಿಸಿದ ಸವಾಲುಗಳಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಉಪಕುಲಪತಿಗಳಾಗಿ ಅವರು ಶ್ರೀ ಸತ್ಯಸಾಯಿಬಾಬಾಗೆ ಒಡ್ಡಿದ ಪಂಥಾಹ್ವಾನವು ಪ್ರಮುಖವಾದದ್ದೆಂದು ಪ್ರಸಿದ್ಧವಾಗಿದೆ. ಅವರು ಉಪಕುಲಪತಿಗಳಾಗಿದ್ದ ಎರಡನೆಯ ಅವಧಿಯ ಮಧ್ಯದಲ್ಲೇ ರಾಜೀನಾಮೆ ನೀಡಿ ಹೊರಬಂದಿದ್ದು ಬಾಬಾನ ಶಾಪದಿಂದಾಗಿಯೇ ಎಂದು ಕೆಲವರು ಆಡಿಕೊಳ್ಳುತ್ತಿದ್ದುದುಂಟು. ಸುಮಾರು ಅದೇ ಸಂದರ್ಭದಲ್ಲಿ ಅವರು ಇನ್ನೊಂದು ಹೋರಾಟದಲ್ಲಿ ಮಗ್ನರಾಗಿದ್ದರು, ಆದರೆ ಅದು ಅಷ್ಟಾಗಿ ಬಹಿರಂಗವಾಗಿ ನಡೆದುದಲ್ಲ. ಆ ಹೋರಾಟದ ವಿವರಗಳು ದಾಖಲಾಗಿರುವುದು ಕಡಿಮೆ. ಅದರ ಆರಂಭಿಕ ಹಂತದ ಘಟನೆಗಳನ್ನು 'ಪ್ರಜಾವಾಣಿ' ಪತ್ರಿಕೆಯ ಖ್ಯಾತ ವರದಿಗಾರರಾಗಿದ್ದ ಶ್ರೀ. ಸಿ. ವಿ. ರಾಜಗೋಪಾಲ ಅವರು "ಕೆಂಬಾವುಟ" ವಾರಪತ್ರಿಕೆಯ ಒಂದು ಸಂಚಿಕೆಯಲ್ಲಿ ಪ್ರಕಟಿಸಿದ್ದರು. ಕೆಲವು ವರ್ಷಗಳ ಕಾಲ ಎಚ್ಚೆನ್ ಅವರ ಸಹೋದ್ಯೋಗಿಗಳಾಗಿದ್ದ ಪ್ರೊ॥ ಜಿ. ನ. ಮಂಗಳ ಅವರು ತಮ್ಮ ಆತ್ಮಕತೆಯಲ್ಲಿ ಅದನ್ನು ನಾಲ್ಕೈದು ವಾಕ್ಯಗಳಲ್ಲಿ ಸಂಕ್ಷಿಪ್ತವಾಗಿ ಪ್ರಸ್ತಾಪಿಸಿದ್ದಾರೆ. ಅವೆರಡನ್ನುಳಿದು ಸಾರ್ವಜನಿಕವಾಗಿ ಆ ಹೋರಾಟದ

ಡಾ॥ ಎಚ್. ಎನ್. ಉಪಕುಲಪತಿಗಳಾದ್ದು ವಿಶಿಷ್ಟವಾದ ಸಂಗತಿ. ಒಂದು ಖಾಸಗಿ ಕಾಲೇಜಿನ ಪ್ರಾಚಾರ್ಯರಾರೂ ಆ ಸ್ಥಾನವನ್ನು ಆವರೆಗೆ ಪಡೆದಿದ್ದುದಿಲ್ಲ. "ನ್ಯಾಷನಲ್ ಎಜುಕೇಶನ್ ಸೊಸೈಟಿ" ಸಹಜವಾಗಿಯೇ ಸಂಭ್ರಮಿಸಿತ್ತು, ಅವರನ್ನು ದೊಡ್ಡ ಸಭೆಯೊಂದರಲ್ಲಿ ಅಭಿನಂದಿಸಿ ಸನ್ಮಾನ ಪತ್ರವನ್ನು ನೀಡಿ ಗೌರವಿಸಿತು. ಸನ್ಮಾನ ಪತ್ರವನ್ನು ಸಿದ್ಧಗೊಳಿಸಲು ಎನ್.ಇ.ಎಸ್. ಅಧ್ಯಕ್ಷರಾಗಿದ್ದ ಶ್ರೀ. ಯಾದಾಳಂ ಗಂಗಾಧರ ಶೆಟ್ಟಿಯವರು ನನಗೆ ಹೇಳಿದರು, ನಾನು ಬರೆದಿದ್ದನ್ನು ಒಂದಕ್ಷರದ ಬದಲಾವಣೆಯೂ ಇಲ್ಲದೆ ಮುದ್ರಿಸಿ ಎಚ್ಚೆನ್ ಅವರಿಗೆ ಸಮರ್ಪಿಸಿದರು. ಎಚ್ಚೆನ್ ಅವರ ಬಗ್ಗೆ ಲಘುವಾಗಿ ಮಾತನಾಡುತ್ತಿದ್ದ ನಮ್ಮ ಅಧ್ಯಾಪಕ ಮಿತ್ರರೂ ಸಭೆಯಲ್ಲಿ ಭಾಗವಹಿಸಿದ್ದು ಸಂತಸದ ವಿಷಯ. ಈ ಅಭಿನಂದನಾ ಸಭೆಯ ನಂತರ ಎಚ್ಚೆನ್ ಹೋರಾಟವೊಂದರ ನಾಯಕತ್ವ ವಹಿಸಬೇಕಾಯಿತು, ಅದನ್ನು ಉಪಕುಲಪತಿಗಳಾಗಿದ್ದುಕೊಂಡೇ ಸಮರ್ಥವಾಗಿ ಅವರು ನಿರ್ವಹಿಸಿದರು.




**ನ್ಯಾಷನಲ್ ಎಜುಕೇಷನ್ ಸೊಸೈಟಿ**

ಅಂಶಗಳೆಲ್ಲೂ ದಾಖಲಾಗಿಲ್ಲ ಎನಿಸುತ್ತದೆ. ಎಚ್ಚೆನ್ ಅವರ ಮೌಲಿಕ ಹೋರಾಟಗಳಲ್ಲಿ ಇದೂ ಸಹ ಮಹತ್ವದ್ದೆಂಬ ಕಾರಣಕ್ಕೆ ಅದನ್ನು ದಾಖಲಿಸುವುದು ಸೂಕ್ತವೆನಿಸುತ್ತದೆ.

ಅದಕ್ಕೆ ಪೂರ್ವಭಾವಿಯಾಗಿ ಸ್ವಲ್ಪ ಆತ್ಮಕಥನವೂ ಕ್ಷಮಾರ್ಹ : ೧೯೬೭ರ ಏಪ್ರಿಲ್‌ನಲ್ಲಿ ಬೆಂಗಳೂರಿನ ಬಸವನಗುಡಿ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕ ರೊಬ್ಬರನ್ನು ನೇಮಿಸಿಕೊಳ್ಳಲು ಜಾಹೀರಾತೊಂದನ್ನು ಪ್ರಕಟಿಸಲಾಗಿತ್ತು. ನಾನು ಅಭ್ಯರ್ಥಿಯಾಗಿ ಅರ್ಜಿ ಸಲ್ಲಿಸಿದ್ದೆ. ಅದಕ್ಕೆ ಎರಡು-ಮೂರು ವರ್ಷಗಳಿಗೆ ಮುಂಚೆ ಗೌರಿಬಿದನೂರಿನ ನ್ಯಾಷನಲ್ ಕಾಲೇಜಿನಲ್ಲಿ ಸಂಸ್ಕೃತ ಅಧ್ಯಾಪಕನಾಗಲು ಅರ್ಜಿ ಸಲ್ಲಿಸಿದ್ದೆ; ಸಂದರ್ಶನಕ್ಕೆ ಹಾಜರಾಗಿ ಆಯ್ಕೆ ಸಮಿತಿಯಿಂದ ತಿರಸ್ಕೃತನೂ ಆಗಿದ್ದೆ. ಸಂಸ್ಕೃತ ವ್ಯಾಕರಣಕ್ಕೆ ಸಂಬಂಧಿಸಿದ ಒಂದು ಪ್ರಶ್ನೆಗೆ ಸ್ವಲ್ಪ ಎಡವಟ್ಟು ಉತ್ತರ ಕೊಟ್ಟಿದ್ದುದೂ ಅದಕ್ಕೊಂದು ಕಾರಣ. "ತರಗತಿಗೆ ಹೋಗುವ ಮುನ್ನ ಆಯಾ ಭಾಗಗಳನ್ನು ಓದಿಕೊಂಡುಹೋಗುತ್ತೇನೆ, ಆದರೆ ವ್ಯಾಕರಣವನ್ನು ಕರಗತ ಮಾಡಿಕೊಂಡಿಲ್ಲ; ಇಷ್ಟಕ್ಕೂ ವ್ಯಾಕರಣವೇ ಪ್ರಧಾನ ಪಠ್ಯ ವಿಷಯವಲ್ಲ, ಅಲ್ಲವೇ?" ಎಂಬರ್ಥದ ಉತ್ತರ ಕೊಟ್ಟಿದ್ದೆ. ಆದ್ದರಿಂದ ಇಂಗ್ಲಿಷ್ ಅಧ್ಯಾಪಕನಾಗಿ ಆಯ್ಕೆಯಾಗುವ ಆಶಯ ಹೊಂದಿದ್ದ ನಾನು ಈ ಬಾರಿ ಎಚ್ಚರಿಕೆಯಿಂದ ಉತ್ತರಗಳನ್ನು ಕೊಡಬೇಕೆಂಬ ಮನಸ್ಸು ಮಾಡಿದ್ದೆ. ಆಗ ಪ್ರಾಚಾರ್ಯರಾಗಿದ್ದವರು ಡಾ॥ ಎಚ್ಚೆನ್. ಡಾ॥ ಕೆ. ದ್ವಾರಕಾನಾಥ್, ಪ್ರೊ॥ ನಂಬಿಯಾರ್, ಮತ್ತಿನ್ನಿಬ್ಬರು ಆಯ್ಕೆ ಸಮಿತಿಯಲ್ಲಿದ್ದರು. ನನಗೆ ಮೂರು ತಿಂಗಳ ಅವಧಿಗೆ ಕೆಲಸ ಸಿಕ್ಕಿದ್ದರೆ ಸಾಕಿತ್ತು, ಏಕೆಂದರೆ ಸೆಪ್ಟೆಂಬರ್ ಅಂತ್ಯದಲ್ಲಿ ಉನ್ನತ ವ್ಯಾಸಂಗಕ್ಕೆಂದು ನಾನು ಬ್ರಿಟನ್ನಿನ ವೇಲ್ಸ್ ವಿಶ್ವವಿದ್ಯಾಲಯಕ್ಕೆ ತೆರಳುವವನಿದ್ದೆ. ಮೂರು ತಿಂಗಳು ಮಾತ್ರ ಇರುತ್ತೇನೆಂದರೆ ಯಾರು ಕೆಲಸ ಕೊಡುತ್ತಾರೆ! ಆದ್ದರಿಂದ ಅದರ ಸುಳಿವು ನೀಡದೆ ನಾನು ಅಧ್ಯಾಪಕನಾಗಿ ಸೇರಿಕೊಂಡುಬಿಟ್ಟೆ.

ಅದೇ ವರ್ಷ ಆಗಸ್ಟ್ ೧೬ರಂದು ಡಾ॥ ಎಚ್ಚೆನ್ ಅಮೆರಿಕಾದ ಸೌತ್ ಕಾರ್ಬಂಡೇಲ್ ವಿಶ್ವವಿದ್ಯಾಲಯದಲ್ಲಿ ಅತಿಥಿ ಪ್ರಾಧ್ಯಾಪಕರಾಗಲು ತೆರಳುವವರಿದ್ದರು. ಆಗಸ್ಟ್ ೧೫ರ ಸ್ವಾತಂತ್ರ್ಯೋತ್ಸವ ಸಮಾರಂಭದ ನಂತರ ಕಾಲೇಜು ಆವರಣದಲ್ಲಿ ನೂರಾರು ವಿದ್ಯಾರ್ಥಿ-ವಿದ್ಯಾರ್ಥಿನಿಯರು ಎಚ್ಚೆನ್ ಅವರನ್ನು ಮುತ್ತಿಕೊಂಡಿದ್ದರು. ನಾನೂ ಹೋಗಿ ಸನಿಹದಲ್ಲೇ ನಿಂತೆ. ಏನೋ ಹೇಳಲು ಬಂದಿರಬೇಕೆಂದು ಊಹಿಸಿದ ಎಚ್ಚೆನ್, ಸುತ್ತುವರಿದಿದ್ದ ವಿದ್ಯಾರ್ಥಿಗಳಿಗೆ ಹೇಳಿ ನನ್ನ ಬಳಿ ಬಂದರು. ಸಂಕ್ಷಿಪ್ತವಾಗಿ ನನ್ನ ವಿಚಾರ ತಿಳಿಸಿದೆ : "ನೀವು ನಾಳೆ ಅಮೆರಿಕಾಕ್ಕೆ ತೆರಳಲಿದ್ದೀರಿ. ನನ್ನನ್ನು ಇಲ್ಲಿ ಅಧ್ಯಾಪಕನನ್ನಾಗಿ ಆಯ್ಕೆ ಮಾಡಿಕೊಂಡ ನಿಮಗೆ ಋಣಿ. ಆದರೆ ಒಂದು ವಿಷಯ ನಿಮಗೆ ನಾನು ತಿಳಿಸಿಲ್ಲ, ಕ್ಷಮಿಸಿ. ನಾನು ಸೆಪ್ಟೆಂಬರ್ ಅಂತ್ಯದಲ್ಲಿ ಬ್ರಿಟನ್ನಿಗೆ ತೆರಳಲಿದ್ದೇನೆ. ಬ್ರಿಟಿಷ್ ಕೌನ್ಸಿಲ್ ಸ್ಕಾಲರ್‌ಶಿಪ್ ದೊರೆತಿದೆ, ಒಂದು ವರ್ಷ ವ್ಯಾಸಂಗ ಮಾಡಲು ಹೋಗಬೇಕಾಗಿದೆ." ಒಂದು ಕ್ಷಣವೂ ಯೋಚಿಸದೆ ಎಚ್ಚೆನ್ ಹೇಳಿದರು : "ಎಷ್ಟು ತಡವಾಗಿ ಹೇಳುತ್ತಿದ್ದೀರಿ. ಬಹಳ ಸಂತೋಷ, ಆದರೆ ವ್ಯಾಸಂಗದ ನಂತರ ಇಲ್ಲಿಗೇ ಬಂದುಬಿಡಿ. ಈಗಲೇ ಒಂದು ಅರ್ಜಿ ಬರೆದುಕೊಡಿ, ಒಂದು ವರ್ಷ ವೇತನ ರಹಿತ ರಜೆ ಕೊಡುತ್ತೇವೆ. ನನಗೆ ಪತ್ರ ಬರೆಯುತ್ತಿರಿ, ಸಂಪರ್ಕದಲ್ಲಿರೋಣ."

ಯಾವ ಸಮಿತಿಗೆ ೨೪ ಗಂಟೆಗಳಲ್ಲಿ ಅವರು ಏನು ಹೇಳಿದರೋ ತಿಳಿಯದು, ಆದರೆ ಅವರು ಅಮೆರಿಕಾಕ್ಕೆ ತೆರಳಿದ ಮೂರು-ನಾಲ್ಕು ದಿನಗಳಲ್ಲಿ ನೂತನ ಪ್ರಾಂಶುಪಾಲರಾಗಿ ಬಂದಿದ್ದ ಪ್ರೊ॥ ಎಂ. ಎಸ್. ಸೂರ್ಯನಾರಾಯಣ ಶಾಸ್ತ್ರಿಯವರು ನನ್ನನ್ನು ಕರೆಸಿ ಹೇಳಿದರು : "ಎಚ್ಚೆನ್ ಎಲ್ಲಾ ಹೇಳಿದ್ದಾರೆ. ಸೆಪ್ಟೆಂಬರ್ ೧೧ಕ್ಕೆ ಬೇರೊಂದು ಪತ್ರ ಕೊಡಿ. ನಿಮಗೆ ಒಂದು ವರ್ಷದ ವೇತನಾರಹಿತ ರಜೆ ಮಂಜೂರು ಮಾಡಲಾಗುವುದು." ಬ್ರಿಟನ್ನಿನಿಂದ ಹಿಂದಿರುಗಿದ ಮೂರು ದಿನಗಳ ನಂತರ ಜುಲೈ ೧೯೬೮ರಲ್ಲಿ ಮತ್ತೆ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿಗೆ ಸೇರಿಕೊಂಡೆ. "ಮೂರು ತಿಂಗಳು ಕೂಡ ಕೆಲಸ ಮಾಡಿಲ್ಲದವರಿಗೆ ಒಂದು ವರ್ಷ ರಜೆ ನೀಡಲಾಗುವುದನ್ನು ಎಲ್ಲಾದರೂ ಕೇಳಿದ್ದೀರಾ?" ಎಂದು ಕೆಲವು ಅಧ್ಯಾಪಕರು ತಮ್ಮತಮ್ಮಲ್ಲೇ ಮಾತಾಡಿಕೊಂಡರು, ಆದರೆ ಯಾರೂ ಡಾ॥ ಎಚ್ಚೆನ್ ಅವರನ್ನು ಆ ಬಗ್ಗೆ ಪ್ರಶ್ನಿಸ ಹೋಗಲಿಲ್ಲ. ನಾನೂ ಬೇರೆಲ್ಲರಂತೆ ಕಾಲೇಜಿನ ಬಹುತೇಕ ಎಲ್ಲ ಚಟುವಟಿಕೆಗಳಲ್ಲೂ ಭಾಗಿಯಾದೆ, ಎಚ್ಚೆನ್ ಅವರ ಆತ್ಮೀಯತೆಯನ್ನು ಸವಿದೆ, ಬೇಸಿಗೆ ಶಿಬಿರಗಳಲ್ಲಿ ಇಡೀ ಒಂದು ತಿಂಗಳು ವಿದ್ಯಾರ್ಥಿಗಳೊಡನೆ ಇರುತ್ತಿದ್ದೆ, ಪಾಠದ ಜೊತೆ ಪ್ರವಚನಗಳನ್ನು ನೀಡುತ್ತಿದ್ದೆ. ಬಂಗ್ಲಾದೇಶದ ವಿಮೋಚನಾ ಸಮರವು ಬಿರುಸಿನಿಂದ ನಡೆಯುತ್ತಿದ್ದ ಕಾಲ. ಅಮೆರಿಕಾದ ಯುದ್ಧನೌಕೆಯೊಂದು ಬಂಗಾಳ ಕೊಲ್ಲಿಯನ್ನು ಪ್ರವೇಶಿಸಿ ಅಂತರರಾಷ್ಟ್ರೀಯ ಗೆರೆಯ ಆ ಮಗ್ಗುಲಿನಲ್ಲಿ ಲಂಗರು ಹಾಕಿತ್ತು. ಭಾರತ ಅದನ್ನು ದೊಡ್ಡ ದನಿಯಲ್ಲಿ ವಿರೋಧಿಸಿ ಬೃಹತ್ ಪ್ರತಿಭಟನಾ ಸಭೆಗಳನ್ನು ನಡೆಸಿತ್ತು. "ಬಂಗಾಳ ಕೊಲ್ಲಿಗೆ ಬಂದಿರುವ ಅಮೆರಿಕಾದ ಆರನೇಯ ಯುದ್ಧನೌಕೆಯು ಯಾವ ಅಂತರರಾಷ್ಟ್ರೀಯ ಕಾನೂನನ್ನೂ ಉಲ್ಲಂಘಿಸಿಲ್ಲ" ಮುಂತಾಗಿ ಎನ್. ಎ. ಪಾಲ್ಖಿವಾಲ ಒಂದು ದೀರ್ಘ ಲೇಖನ ಪ್ರಕಟಿಸಿದ್ದರು. ಆಗ್ಗೆ ಲೋಕಸಭಾ ಸದಸ್ಯರಾಗಿದ್ದ ಪಿಲ್ಲೂ ಮೋದಿ ಪ್ರಕಟಿಸುತ್ತಿದ್ದ ಇಂಗ್ಲಿಷ್ ಪಾಕ್ಷಿಕದಲ್ಲಿ ಅದು ಪ್ರಕಟವಾಗಿತ್ತು. ಆ ಪ್ರಕಟಣೆಯ ಎರಡು ವಾರಗಳ ತರುವಾಯ ಶ್ರೀ. ಪಾಲ್ಖಿವಾಲ ಬೆಂಗಳೂರು ವಿಶ್ವವಿದ್ಯಾಲಯದ ಘಟಿಕೋತ್ಸವ ಸಮಾರಂಭದ ಮುಖ್ಯ ಅತಿಥಿಯಾಗಿ ಬರುವುದಿತ್ತು. ನಾವು ಕೆಲವರು ಅಂದಿನ ಉಪಕುಲಪತಿ ನ್ಯಾಯಮೂರ್ತಿ ಶ್ರೀ. ಟಿ. ಕೆ. ತುಕೋಳ್ ಅವರನ್ನು ಭೇಟಿಯಾಗಿ ಪಾಲ್ಖಿವಾಲ ಅವರಿಗೆ ನೀಡಲಾಗಿದ್ದ ಆಹ್ವಾನವನ್ನು ರದ್ದುಗೊಳಿಸಬೇಕೆಂದು ಕೇಳಿಕೊಂಡೆವು. ಅದನ್ನವರು ನಿರಾಕರಿಸಿದರು. ಸಂಕ್ರಾಂತಿಯಂದು ಘಟಿಕೋತ್ಸವ; ಸೆಂಟ್ರಲ್ ಕಾಲೇಜು ಆವರಣದಲ್ಲಿ. ಹಲವು ವಿದ್ಯಾರ್ಥಿಗಳು ಮತ್ತಿತರರು ಮೈಸೂರು ಬ್ಯಾಂಕ್ ವೃತ್ತದಲ್ಲಿ ಪ್ರತಿಭಟನೆ ನಡೆಸುವುದಿತ್ತು. ನಾನು ಅಲ್ಲಿಗೆ ಹೋದಾಗ ಪೊಲೀಸರು ನನ್ನನ್ನು ಬಂಧಿಸಿ ಅಲಸೂರು ಗೇಟ್ ಪೊಲೀಸ್ ಠಾಣೆಗೆ ಕೊಂಡೊಯ್ದು ರಾತ್ರಿ ೧೧ರ ವರೆಗೆ ಕೂರಿಸಿಕೊಂಡಿದ್ದರು. ನನ್ನ ಜೊತೆ ಶ್ರೀ. ಎನ್. ಸಿ. ರಣನವರೆ (ಛಾಯಾಗ್ರಾಹಕ ಮತ್ತು ಕಮ್ಯುನಿಸ್ಟ್ ಪಕ್ಷದ ಸದಸ್ಯ)ಯವರನ್ನೂ ಬಂಧಿಸಿದ್ದರು. ಶ್ರೀ. ಗೋಪಿ ಆಗ ಕಾರ್ಮಿಕ ನಾಯಕರು, ಎಐಟಿಯುಸಿ ಕಾರ್ಯದರ್ಶಿ; ಎಲ್‌ಎಲ್.ಎಂ. ಪದವಿ ಪಡೆಯಲು ಘಟಿಕೋತ್ಸವಕ್ಕೆ ಹೋಗಿದ್ದರು. ಮಾನ್ಯ ಪಾಲ್ಖಿವಾಲ ಅವರ ಭಾಷಣಕ್ಕೆ ಅಡ್ಡಿಯುಂಟುಮಾಡಲು ಘೋಷಣೆ ಕೂಗುತ್ತಾ

ವೇದಿಕೆಯೇರಿದರು. ಅವರನ್ನೂ ದಸ್ತಗಿರಿ ಮಾಡಲಾಯಿತು.

ಇದೆಲ್ಲಾ ನಡೆದ ಒಂದು ವಾರದಲ್ಲಿ ವಿಶ್ವವಿದ್ಯಾಲಯದ ಕುಲಸಚಿವ ಶ್ರೀ. ಟಿ. ಪಿ. ಇಸ್ಸಾರ್ ಡಾ॥ ಎಚ್ಚೆನ್ ಅವರಿಗೆ ಪತ್ರ ಬರೆದು ನನ್ನ ಮೇಲೆ ಕಾನೂನು ಕ್ರಮ ಜರುಗಿಸಬೇಕೆಂದು ಆಗ್ರಹಿಸಿದ್ದರು. ಕಾಲೇಜಿನ ನನ್ನ ಕೆಲವು ಸಹೋದ್ಯೋಗಿಗಳು ನನ್ನ ನಡತೆಯು ಪ್ರಶ್ನಾರ್ಹವೆಂದು ತಮ್ಮತಮ್ಮಲ್ಲೇ ಮಾತನಾಡಿಕೊಂಡು ಎಚ್ಚೆನ್ ಅವರ ಬಳಿ ಅದನ್ನು ಪ್ರಸ್ತಾಪಿಸಿದಾಗ ಅವರು ಏನೂ ಹೇಳದೆ ಹಿಂದಕ್ಕೆ ಕಳಿಸಿದ್ದರು. ಅದಾದ ಎರಡು ವಾರಗಳ ನಂತರ ಕುಲಸಚಿವರ ಪತ್ರವನ್ನು ನನಗೆ ತೋರಿಸಿ ನನ್ನೆದುರಿಗೇ ಅದನ್ನು ಹರಿದು ಬಿಸಾಡಿದರು. ಕೆಲವು ಅಧ್ಯಾಪಕರು ಅಸಮಾಧಾನ ವ್ಯಕ್ತಪಡಿಸಿದರು. ನಾನಂತೂ ನನ್ನ ಪ್ರಾಚಾರ್ಯರು ಮಾಡಿದ್ದನ್ನು ನೋಡಿ ಸ್ತಂಭೀಭೂತನಾದೆ. ನನ್ನ ಬಗೆಗಿನ ಆತ್ಮೀಯತೆಗಿಂತಲೂ ಅವರಲ್ಲಿದ್ದ ನ್ಯಾಯಪರತೆ ಮತ್ತು ದಿಟ್ಟತನ ಅವರನ್ನು ಕಾಗದ ಹರಿದು ಬಿಸುಡಲು ಪ್ರೇರೇಪಿಸಿತ್ತು. ಇದನ್ನೆಲ್ಲಾ ಪ್ರಸ್ತಾಪಿಸಿರುವುದು ನಮ್ಮ ವೈಯ್ಯಕ್ತಿಕ ಸಂಬಂಧವನ್ನು ರಮ್ಯತೆಯಿಂದ ವೈಭವೀಕರಿಸಲು ಅಲ್ಲ; ಎಚ್ಚೆನ್ ಎಷ್ಟು ಸ್ವತಂತ್ರವಾಗಿ, ಅಂಜಿಕೆ ಇಲ್ಲದೆ, ತೀರ್ಮಾನಗಳನ್ನು ಕೈಗೊಂಡು ವಿಶ್ವವಿದ್ಯಾಲಯದ ಅಧಿಕಾರಿಗಳನ್ನು ನಿರಾಯುಧರನ್ನಾಗಿಸಲು ಸಿದ್ಧರಿರುತ್ತಿದ್ದರೆಂಬುದನ್ನು ಒತ್ತಿಹೇಳಲು ಈ ಪ್ರಸಂಗವನ್ನು ನೆನಪಿಸಿಕೊಳ್ಳುತ್ತಿದ್ದೇನೆ.

ಅಂತಹ ಎಚ್ಚೆನ್ ವಿಶ್ವವಿದ್ಯಾಲಯದ ಉಪಕುಲಪತಿಗಳಾದರು, ಅಲ್ಲಿಯ ಆಂತರಿಕ ಮುಗ್ಗಟ್ಟುಗಳನ್ನು ನಿವಾರಿಸಲು ನಿರಾತಂಕವಾಗಿ ಯತ್ನಿಸಿದರು, ವಿರೋಧಿಗಳನ್ನು ಸಾಧ್ಯವಾದಮಟ್ಟಿಗೆ ನಿಯಂತ್ರಿಸಿದರು. ಸರ್ಕಾರವು ಅವರನ್ನು ಇನ್ನೊಂದು ಅವಧಿಗೆ ಉಪಕುಲಪತಿಗಳನ್ನಾಗಿ ನೇಮಿಸಿದ್ದು ಮತ್ತು ಅವರು ಸಹಿಸಲಾಗದ ಉಪಟಳಗಳಿಂದಾಗಿ ರಾಜೀನಾಮೆ ನೀಡಿದ್ದು ಇತಿಹಾಸ. ಅದನ್ನಿಲ್ಲಿ ವಿಸ್ತರಿಸ ಹೋಗುವುದಿಲ್ಲ. ಇಷ್ಟೆಲ್ಲಾ ಮಾನಸಿಕ ಬಾಧೆಗಳ ನಡುವೆ ಅವರದೇ ನ್ಯಾಷನಲ್ ಕಾಲೇಜು ಅವರಿಗೆ ನೂರು ಮುಳ್ಳುಗಳಿಂದ ಚುಚ್ಚಲಾರಂಭಿಸಿತ್ತು. ಕಾಲೇಜಿನ ಅಧ್ಯಾಪಕರ ನಡುವೆ ಎಚ್ಚೆನ್ ಬಗ್ಗೆ ತೀವ್ರ ಭಿನ್ನಾಭಿಪ್ರಾಯಗಳು ಮೂಡಿ ಒಂದು ರೀತಿಯ ಕೋಲಾಹಲ ಉಂಟಾಗಿಬಿಟ್ಟಿತು. ಅವರ ವಿದ್ಯಾರ್ಥಿಗಳಾಗಿದ್ದು ನಂತರ ಸಹೋದ್ಯೋಗಿಗಳಾದ ಕೆಲವರೂ ಸೇರಿದಂತೆ ಅಧ್ಯಾಪಕರ ಒಂದು ಬಣ ಎಚ್ಚೆನ್ ಅವರ ಬಗ್ಗೆ ಸಲ್ಲದ ಆಪಾದನೆಗಳನ್ನು ಹೊರಿಸುತ್ತಾ ಅವರ ನಿಂದನೆಯನ್ನು ಎಗ್ಗಿಲ್ಲದೆ ಮುಕ್ತವಾಗಿ ನಡೆಸಲಾರಂಭಿಸಿತು. ಕಾಲೇಜಿನ ಆವರಣದಲ್ಲಿ ವಿದ್ಯಾರ್ಥಿಗಳ ಸಮ್ಮುಖದಲ್ಲೇ ಕೆಲವು ಅಧ್ಯಾಪಕರು "ಆ ಪಂಚೆಯವನು ಈ ಆವರಣಕ್ಕೆ ಮತ್ತೆ ಕಾಲಿರಿಸಲು ಬಿಡುವುದಿಲ್ಲ" ಎಂದು ಹೇಳುತ್ತಿದ್ದುದೂ ಉಂಟು. ಅದಕ್ಕೆ ದನಿಗೂಡಿಸದವರನ್ನು "ಇವರೆಲ್ಲಾ ಎಚ್ಚೆನ್ ಭಕ್ತರು, ಇವರದೇನೂ ನಡೆಯುವುದಿಲ್ಲ" ಎಂದು ಛೇಡಿಸುತ್ತಿದ್ದರು.

ಡಾ॥ ಎಚ್. ಎನ್. ಉಪಕುಲಪತಿಗಳಾದ್ದು ವಿಶಿಷ್ಟವಾದ ಸಂಗತಿ. ಒಂದು ಖಾಸಗಿ ಕಾಲೇಜಿನ ಪ್ರಾಚಾರ್ಯರಾರೂ ಆ ಸ್ಥಾನವನ್ನು ಆವರೆಗೆ ಪಡೆದಿದ್ದುದಿಲ್ಲ. "ನ್ಯಾಷನಲ್ ಎಜುಕೇಶನ್ ಸೊಸೈಟಿ" ಸಹಜವಾಗಿಯೇ ಸಂಭ್ರಮಿಸಿತ್ತು, ಅವರನ್ನು ದೊಡ್ಡ ಸಭೆಯೊಂದರಲ್ಲಿ ಅಭಿನಂದಿಸಿ ಸನ್ಮಾನ ಪತ್ರವನ್ನು ನೀಡಿ ಗೌರವಿಸಿತು. ಸನ್ಮಾನ ಪತ್ರವನ್ನು ಸಿದ್ಧಗೊಳಿಸಲು ಆಗ್ಗೆ ಎನ್.ಇ.ಎಸ್. ಅಧ್ಯಕ್ಷರಾಗಿದ್ದ ಶ್ರೀ. ಯಾದಾಳಂ ಗಂಗಾಧರ ಶೆಟ್ಟಿಯವರು ನನಗೆ ಹೇಳಿದರು, ನಾನು ಬರೆದಿದ್ದನ್ನು ಒಂದಕ್ಷರದ ಬದಲಾವಣೆಯೂ ಇಲ್ಲದೆ ಮುದ್ರಿಸಿ ಎಚ್ಚೆನ್ ಅವರಿಗೆ ಸಮರ್ಪಿಸಿದರು. ಎಚ್ಚೆನ್ ಅವರ ಬಗ್ಗೆ ಲಘುವಾಗಿ ಮಾತನಾಡುತ್ತಿದ್ದ ನಮ್ಮ ಅಧ್ಯಾಪಕ ಮಿತ್ರರೂ ಸಭೆಯಲ್ಲಿ ಭಾಗವಹಿಸಿದ್ದು ಸಂತಸದ ವಿಷಯ. ಈ ಅಭಿನಂದನಾ ಸಭೆಯ ನಂತರ ಎಚ್ಚೆನ್ ಹೋರಾಟವೊಂದರ ನಾಯಕತ್ವ ವಹಿಸಬೇಕಾಯಿತು, ಅದನ್ನು ಉಪಕುಲಪತಿಗಳಾಗಿದ್ದುಕೊಂಡೇ ಸಮರ್ಥವಾಗಿ ಅವರು ನಿರ್ವಹಿಸಿದರು.

ಪ್ರಜಾಪ್ರಭುತ್ವರೀತ್ಯಾ ನಿರ್ದಿಷ್ಟ ಉದ್ದೇಶಗಳನ್ನು ಸಾಧಿಸಲು ನಾಗರಿಕರು ಭಾಗವಹಿಸಲೆಂದು ಸಾರ್ವಜನಿಕ ಸಂಸ್ಥೆಗಳನ್ನು ಸ್ಥಾಪಿಸಲಾಗುತ್ತದೆ. ಪ್ರಜಾಪ್ರಭುತ್ವದ ಸೌಲಭ್ಯವನ್ನು ಸಾಧನವಾಗಿಸಿಕೊಂಡು ಕೆಲವು ಬಣಗಳು ಅಂತಹ ಸಂಸ್ಥೆಗಳನ್ನು ನುಂಗಿಹಾಕುತ್ತವೆ, ಇಲ್ಲವೇ ಸ್ವಾಧೀನಪಡಿಸಿಕೊಳ್ಳುತ್ತವೆ. ಹಾಗೆ ಸ್ವಾಧೀನಪಡಿಸಿಕೊಂಡ ನಂತರ ಪ್ರಜಾಪ್ರಭುತ್ವ ಕ್ರಮವನ್ನು ನಿಷೇಧಿಸುವಂತಹ ತಿದ್ದುಪಡಿಗಳನ್ನು ತಂದು ಅವನ್ನು ಒಂದು ರೀತಿಯ ಖಾಸಗಿ ಆಸ್ತಿಯನ್ನಾಗಿ ಪರಿವರ್ತಿಸಿಬಿಡುವ ಬಣಗಳಿರುತ್ತವೆ; ಅಥವಾ ಅದೊಂದು ವ್ಯಕ್ತಿಸಮೂಹವೂ ಆಗಬಹುದು. ಆಮೇಲೆ ಬೇರೆ ಸಾರ್ವಜನಿಕರಿಗೆ ಅಲ್ಲಿ ಪ್ರವೇಶ ಸಾಧ್ಯವಾಗುವುದಿಲ್ಲ. ಸಾಂಸ್ಕೃತಿಕ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಉದ್ದೇಶಗಳನ್ನು ಗುಂಡಿಯಲ್ಲಿ ಹಾಕಿ ಮುಚ್ಚಿ, ಸಂಸ್ಥೆಗಳನ್ನು ಯಾವುದೋ ಬಣದ ಕೈಗೊಂಬೆಯಾಗಿ ಪರಿವರ್ತಿಸುವ ಬುದ್ಧಿವಂತ ಕೈಚಳಕ ಪರಿಣತರು ನಮ್ಮ ಸಮಾಜದಲ್ಲಿದ್ದಾರೆ, ಉನ್ನತ ಸ್ಥಾನಗಳನ್ನು ಹೊಂದಿದ್ದಾರೆ, ತಮ್ಮದೇ ಖಾಸಗಿ ಕಾರ್ಯಸೂಚಿಯನ್ನು ಅನುಷ್ಠಾನಕ್ಕೆ ತರಲು ಸಂಸ್ಥೆಗಳನ್ನು ಬಳಸಿಕೊಳ್ಳುತ್ತಾರೆ. ಹೆಸರಿಗೆ ಪ್ರಜಾಪ್ರಭುತ್ವ ಎಂದಿನಂತೆ ಮುಂದುವರಿಯುತ್ತದೆ, ಆದರೆ ಆ ನಿರ್ದಿಷ್ಟ ಬಣದವರನ್ನುಳಿದು ಬೇರೆಯವರಿಗೆ ಅಲ್ಲಿ ಪ್ರವೇಶವಿರುವುದಿಲ್ಲ. ಕೋಟಿಗಟ್ಟಲೆ ರೂಪಾಯಿಗಳ ಮೌಲ್ಯದ ಸಾರ್ವಜನಿಕ ಆಸ್ತಿಯು ಕ್ಷಣಾರ್ಧದಲ್ಲಿ ಒಂದು ಸರ್ವಸದಸ್ಯರ ಸಭೆಯಲ್ಲಿ ಚುನಾವಣಾ ಪ್ರಕ್ರಿಯೆ ಮೂಲಕ ಒಂದು ಬಣಕ್ಕೆ ಸೇರಿಹೋಗುತ್ತದೆ. ಇದಕ್ಕೆ ಬೆಂಗಳೂರಿನಲ್ಲಿ ಸಾಕಷ್ಟು ಉದಾಹರಣೆಗಳಿವೆ, ರಾಜ್ಯದ ಬೇರೆಡೆಗಳಲ್ಲೂ ಇವೆ.

ಬೆಂಗಳೂರಿನ ನ್ಯಾಷನಲ್ ಎಜುಕೇಶನ್ ಸೊಸೈಟಿಯು ಒಂದು ಬಣದ ಹವಣಿಕೆಗೆ ತುತ್ತಾಗಿ ತನ್ನ ಮೂಲ ಲಕ್ಷಣವನ್ನು ಕಳೆದುಕೊಳ್ಳುವ ದುರ್ಗತಿ ಒದಗಿಬಂದಿತ್ತು. ಅದಕ್ಕೆ ಬಸವನಗುಡಿ ನ್ಯಾಷನಲ್ ಕಾಲೇಜಿನ ಅಧ್ಯಾಪಕರ ಒಂದು ಬಣವು ಮೊದಲ ಹೆಜ್ಜೆಗಳನ್ನಿರಿಸಿ ಬಾಹ್ಯ ಸಂಸ್ಥೆಯೊಂದರ ಸಹಕಾರ ಬಯಸಿತ್ತು ಮತ್ತು ಪಡೆದಿತ್ತು. ಅದು ಸಿದ್ಧಿಸಿದ್ದರೆ ನೂರು ವರ್ಷಗಳ ಕಾಲ ಗೌರವದಿಂದ ಬಾಳಿ ಶೈಕ್ಷಣಿಕ ಸೇವೆ ಸಲ್ಲಿಸುತ್ತಾ ಬಂದಿರುವ ನ್ಯಾಷನಲ್ ಎಜುಕೇಶನ್ ಸೊಸೈಟಿಯ ಚಹರೆ ಆಮೂಲಾಗ್ರವಾಗಿ ಬದಲಾಗಿರುತ್ತಿತ್ತು. ಡಾ॥ ಎಚ್ಚೆನ್ ಉಪಕುಲಪತಿಗಳಾಗಿದ್ದುಕೊಂಡೇ ಈ ಪಿಡುಗಿನ ವಿರುದ್ಧ ಸೆಣಸಬೇಕಾಗಿತ್ತು. ಅವರು ನ್ಯಾಷನಲ್ ಕಾಲೇಜಿನ ಸಿಬ್ಬಂದಿಯನ್ನು ಸ್ವಂತಕ್ಕೆ ದುರ್ಬಳಕೆ ಮಾಡಿಕೊಳ್ಳುತ್ತಿದ್ದರೆಂದು "ಇಂಡಿಯನ್ ಎಕ್ಸ್‌ಪ್ರೆಸ್" ಪತ್ರಿಕೆಯಲ್ಲಿ ಕಾಲೇಜಿನ ಅಧ್ಯಾಪಕರೊಬ್ಬರು ಸುಳ್ಳು ಹೆಸರಿನಲ್ಲಿ ಪತ್ರವೊಂದನ್ನು ಪ್ರಕಟಿಸಿದ್ದರು. ಪ್ರಸ್ತುತ ಲೇಖಕ ಮತ್ತು ಇನ್ನೊಬ್ಬ ಅಧ್ಯಾಪಕರು ಜೊತೆಯಾಗಿ ಹೋಗಿ, ಸಂಪಾದಕರನ್ನು ಭೇಟಿಯಾಗಿ, ತಮ್ಮ



**ಮಹಾತ್ಮ ಗಾಂಧಿಯವರೊಡನೆ ಬಾಲಕ ಎಚ್. ನರಸಿಂಹಯ್ಯ**

ಪ್ರತಿಕ್ರಿಯೆಯನ್ನು ಲಿಖಿತರೂಪದಲ್ಲಿ ನೀಡಿಬಂದರು; ಆದರೆ ಸಂಪಾದಕರು ಅದನ್ನು ಪ್ರಕಟಿಸಲಿಲ್ಲ. ಎಚ್ಚೆನ್ ಅವರ ಬಗ್ಗೆ ಇಂತಹ ಅಪಪ್ರಚಾರವು ವಿಪರೀತವಾಗಿ ಬೆಳೆಯುತ್ತಿದ್ದಾಗ ಎನ್.ಇ.ಎಸ್. ಮೂಕವಾಗಿ ಕುಳಿತಿತ್ತು, ಪರಿಸ್ಥಿತಿಯನ್ನು ಹೇಗೆ ನಿಗ್ರಹಿಸಬೇಕೆಂದು ತಿಳಿಯದೆ ಒದ್ದಾಡುತ್ತಿತ್ತು. ಇಡೀ ಸಂಸ್ಥೆಯು ಕೈತಪ್ಪಿಹೋಗುವ ಪರಿಸ್ಥಿತಿ, ಆದರೆ ಹೇಗೆ ನಿಭಾಯಿಸಬೇಕೆಂದು ತೀರ್ಮಾನಿಸಿ ಅದಕ್ಕಾಗಿ ಶ್ರಮಿಸುವ ಮಂದಿ ಮೂಕರಾಗಿದ್ದರು.

ಇದೇ ಸಂದರ್ಭದಲ್ಲಿ ಎನ್.ಇ.ಎಸ್.ನ ಸರ್ವಸದಸ್ಯರ ಸಭೆ ನಡೆಯುವುದಿತ್ತು. ಸೊಸೈಟಿಯ ಸಂವಿಧಾನದ ಪ್ರಕಾರ ಅದರ ಎಲ್ಲ ಶಿಕ್ಷಣ ಸಂಸ್ಥೆಗಳ ಅಧ್ಯಾಪಕರೂ ಸರ್ವಸದಸ್ಯ ಸಭೆಯ ಸದಸ್ಯರು. ಆ ಹಕ್ಕನ್ನು ಬಳಸಿ ಅಧ್ಯಾಪಕರೊಬ್ಬರು ಸಭೆಯ ಮುಂದೆ ನಿರ್ಣಯವೊಂದನ್ನು ಮಂಡಿಸಿದರು : ಡಾ॥ ಎಚ್ಚೆನ್ ಅವರಿಗೆ ನೀಡಿರುವ ರಜೆಯನ್ನು ರದ್ದು ಮಾಡಬೇಕು, ಅವರನ್ನು ವಿಶ್ವವಿದ್ಯಾಲಯದಿಂದ ಹಿಂದಕ್ಕೆ ಕರೆಸಿಕೊಳ್ಳಬೇಕು, ಅವರು ಹಿಂದಕ್ಕೆ ಬರದಿದ್ದರೆ ಅವರನ್ನು ವಜಾಗೊಳಿಸಬೇಕು, ಮುಂದೆ ಯಾರಿಗೂ ಪೂರ್ವಷರತ್ತು ವಿಧಿಸದೆ ಯಾವ ರೀತಿಯ ರಜೆಯನ್ನೂ ನೀಡಬಾರದು, ಎಂದು. ಮಾನ್ಯ ಯಾದಾಳಂ ಗಂಗಾಧರ ಶೆಟ್ಟಿಯವರು ಅಧ್ಯಕ್ಷರು ಮತ್ತು ಈ ನಿರ್ಣಯವನ್ನು ಸಭೆಯು ಚರ್ಚೆಗೆ ತೆಗೆದುಕೊಳ್ಳಬೇಕು! ನಿರ್ಣಯಗಳ ಚರ್ಚೆಗೆ ಮುಂಚೆ ಸೊಸೈಟಿಯ ಕಾರ್ಯದರ್ಶಿಯವರ ವಾರ್ಷಿಕ ವರದಿಯನ್ನು ಸಭೆಯು ಅಂಗೀಕರಿಸಿದ್ದಿತು. ಅದರಲ್ಲಿ ಡಾ॥ ಎಚ್ಚೆನ್ ಅವರಿಗೆ ಅಭಿನಂದನೆಗಳನ್ನು ತಿಳಿಸಿ, ಅವರ ಆಯ್ಕೆಯು ಸೊಸೈಟಿಗೆ ಹೆಮ್ಮೆಯ ಸಂಗತಿಯಾಗಿದೆ, ಎಂದು ತಿಳಿಸಲಾಗಿತ್ತು. ಡಾ॥ ಎಚ್ಚೆನ್ ಎನ್.ಇ.ಎಸ್.ನ ಆಜೀವ ಸದಸ್ಯರು, ಆದರೆ ಉಪಕುಲಪತಿ ಹುದ್ದೆಯಲ್ಲಿದ್ದು ಸಭೆಯಲ್ಲಿ ಪಾಲ್ಗೊಳ್ಳುವುದು ಅನುಚಿತವೆಂದು ತಿಳಿದು ಸಭೆಗೆ ಬಂದಿರಲಿಲ್ಲ.

ಸಭೆ ನಡೆದಿದ್ದು ಬಸವನಗುಡಿ ನ್ಯಾಷನಲ್ ಕಾಲೇಜಿನ ಒಂದು ದೊಡ್ಡ ಕೋಣೆಯಲ್ಲಿ. ಅಂದು ಬೆಳಿಗ್ಗೆಯಷ್ಟೆ ನಾನು ಮದ್ರಾಸಿನಿಂದ ಹಿಂದಿರುಗಿದ್ದೆ. ಸಭಾಭವನವನ್ನು ಪ್ರವೇಶಿಸಿದರೆ ಕೆಲವರಲ್ಲಿ ಆತಂಕ ಮತ್ತೆ ಕೆಲವರಲ್ಲಿ ಹರ್ಷ ಎದ್ದುಕಾಣುತ್ತಿತ್ತು. ಕೆಲವು ಸಹೋದ್ಯೋಗಿಗಳು ಬೆಳಿಗ್ಗೆಯೇ ಎಚ್ಚೆನ್ ಅವರನ್ನು ಕಂಡುಬಂದಿದ್ದರು; ಅವರು ಸ್ವಲ್ಪ ಖಿನ್ನರಾಗಿದ್ದರೆಂದು ತಿಳಿಸಿದರು. ಕಾರ್ಯದರ್ಶಿ ವರದಿಯ ಚರ್ಚೆ ಮತ್ತು ಅನುಮೋದನೆ ಹಾಗೂ ವಾರ್ಷಿಕ ಆಯವ್ಯಯದ ಮಂಡನೆ ಮತ್ತು ಅನುಮೋದನೆಯ ನಂತರ ನಿರ್ಣಯಗಳ ಮಂಡನೆ – ಚರ್ಚೆ ಮತ್ತು ಅಂಗೀಕಾರ ಇಲ್ಲವೇ ತಿರಸ್ಕಾರ, ಇವು ಸಭೆಯ ಕಾರ್ಯಸೂಚಿ. ನಿರ್ಣಯ ಮಂಡಿಸಲಿದ್ದ ಅಧ್ಯಾಪಕರಲ್ಲಿ ಅಧ್ಯಕ್ಷರು ಮೊದಲಿಗೆ ವಿನಂತಿ ಮಾಡಿಕೊಂಡರು, ನಿರ್ಣಯವನ್ನು ಹಿಂತೆಗೆದುಕೊಳ್ಳಬೇಕೆಂದು; ಆದರೆ ಅವರು ನಿರಾಕರಿಸಿದರು. ಕುತೂಹಲ ಇಮ್ಮಡಿಯಾಯಿತು.



"ನಿರ್ಣಯವನ್ನು ಮಂಡಿಸಿ" ಎಂದು ಅಧ್ಯಕ್ಷರು ಹೇಳಿದಾಗ ಠೀವಿಯಿಂದ ಸದರಿ ಅಧ್ಯಾಪಕರು ವೇದಿಕೆ ಏರಲಿದ್ದರು. ಆಗ ನಾನು ಎದ್ದುನಿಂತೆ : "ಅಧ್ಯಕ್ಷರೆ, ನಿರ್ಣಯದ ಮಂಡನೆಗೆ ಮುನ್ನ ನಾನು ಕ್ರಿಯಾಲೋಪವನ್ನು ಎತ್ತಬಯಸುತ್ತೇನೆ. ಅದರ ಬಗ್ಗೆ ತಾವು ನೀಡುವ ತೀರ್ಮಾನದ ನಂತರವೇ ನಿರ್ಣಯದ ಮಂಡನೆ ಸಾಧ್ಯ" ಎಂದೆ. ಸಭೆಯಲ್ಲಿ ಗುಸುಗುಸು ಆರಂಭವಾಯಿತು. ಯಾರೋ ಒಬ್ಬರು "ಓಹೋ, ಎಚ್ಚೆನ್ ಏಜೆಂಟ್ ಬಂದಂತಿದೆ" ಎಂದರು. ಯಾರೆಂದು ತಿಳಿಯಲಿಲ್ಲ. "ಯಾರು ಹಾಗೆ ಹೇಳಿದ್ದು?" ಎಂದು ಅಧ್ಯಕ್ಷರು ಕೇಳಿದರು; "ನಾನು" ಎನ್ನುವ ಛಾತಿ ಇಲ್ಲದ ವ್ಯಕ್ತಿಯು ಸಭೆಯಲ್ಲೆಲ್ಲೋ ಕಳೆದುಹೋಗಿದ್ದ! ನನ್ನ ಮಾತು ಮೂರು ನಿಮಿಷಗಳಿಗೂ ಕಡಿಮೆ : "ಡಾ॥ ಎಚ್ಚೆನ್ ಉಪಕುಲಪತಿಗಳಾಗಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಹೊಣೆ ಹೊತ್ತಾಗ ಎನ್.ಇ.ಎಸ್. ಸಾರ್ವಜನಿಕ ಸಭೆಯೊಂದನ್ನು ಆಯೋಜಿಸಿ ಅವರನ್ನು ಅಭಿನಂದಿಸಿತು, ಒಂದು ಬಿನ್ನವತ್ತಳೆಯನ್ನು ಅರ್ಪಿಸಿತು. ಆಗ ಯಾವ ಸದಸ್ಯರೂ ಆಕ್ಷೇಪವೆತ್ತಿರಲಿಲ್ಲ. ಇಂದು ಕಾರ್ಯದರ್ಶಿಯ ವರದಿಯನ್ನು ಸರ್ವಾನುಮತದಿಂದ ಅನುಮೋದಿಸಲಾಗಿದೆ. ಅದರಲ್ಲಿ ಎಚ್ಚೆನ್ ಅವರನ್ನು ಶ್ಲಾಘಿಸಿ ಅಭಿನಂದಿಸಲಾಗಿದೆ. ಅದಕ್ಕೆ ಯಾರೂ ಆಕ್ಷೇಪವೆತ್ತಲಿಲ್ಲ. ಆದ್ದರಿಂದ ಎನ್.ಇ.ಎಸ್. ಉಪನಿಯಮಗಳ ಪ್ರಕಾರ ಕಡೇಪಕ್ಷ ಆರು ತಿಂಗಳವರೆಗೆ ಎಚ್ಚೆನ್ ಅವರ ರಜೆ ಮುಂತಾದ ವಿಷಯಗಳನ್ನು ಸರ್ವಸದಸ್ಯರ ಸಭೆಯು ಕೈಗೆತ್ತಿಕೊಳ್ಳುವಂತಿಲ್ಲ. ಹೀಗಾಗಿ ಈ ನಿರ್ಣಯವನ್ನು ಮಂಡಿಸುವುದು ಸಭೆಯ ನಡಾವಳಿಗೆ ವಿರುದ್ಧವಾಗುತ್ತದೆ. ಅಧ್ಯಕ್ಷರು ನಿರ್ಣಯದ ಮಂಡನೆಗೆ ಅನುಮತಿ ನೀಡುವಂತಿಲ್ಲ." ಸಭೆಯಲ್ಲಿ ಗಡಚಿಕ್ಕುವ ಚಪ್ಪಾಳೆಗಳು ಮತ್ತು ಒಂದಷ್ಟು ಸಪ್ಪೆ ಮುಖಗಳು. ಅಧ್ಯಕ್ಷರು ಎದ್ದುನಿಂತರು : "ಕ್ರಿಯಾಲೋಪವನ್ನು ಎತ್ತಲಾಗಿದೆ. ನಾನು ಅದನ್ನು ಅಂಗೀಕರಿಸುತ್ತೇನೆ." ಅಲ್ಲಿಗೆ ಸಭೆ ಮುಕ್ತಾಯವಾಯಿತು. ಅಧ್ಯಕ್ಷರು ನನ್ನ ಬೆನ್ನಮೇಲೆ ಕೈಯ್ಯಿಟ್ಟು ಹೇಳಿದರು : "ನನಗಿದು ಹೊಳೆದೇ ಇರಲಿಲ್ಲ. ಎಷ್ಟು ಸಮಯೋಚಿತ ಕೆಲಸ ಮಾಡಿದಿರಿ, ನಾವೆಲ್ಲಾ ನಿಮಗೆ ಆಭಾರಿಯಾಗಿದ್ದೇವೆ." ನಿರ್ಣಯ ಮಂಡಿಸಲಿದ್ದ ಸಹೋದ್ಯೋಗಿ ಮಿತ್ರರು ಬಂದು ಕೈಹಿಡಿದು ಹೇಳಿದರು : "ಅಂತೂ ನಿನ್ನ ಬುದ್ಧಿ ತೋರಿಸಿಬಿಟ್ಟೆ. ನೀನು ಎಚ್ಚೆನ್ ಭಂಟನಲ್ಲದೆ ಮತ್ತೇನೂ ಅಲ್ಲ. ಪ್ರಕರಣ ಇಲ್ಲಿಗೆ ಮುಗಿಯಲಿಲ್ಲವೆಂಬುದನ್ನು ತಿಳಿದುಕೊ," ಎಂದರು. ಸದಸ್ಯರ ಮುಖಗಳು ಪ್ರೇಕ್ಷಣೀಯವಾಗಿದ್ದವು. ಡಾ॥ ಕೆ. ದ್ವಾರಕಾನಾಥ್, ಪ್ರೊ॥ ಬಿ. ಎಂ. ಶ್ರೀನಿವಾಸರಾವ್, ಪ್ರೊ॥ ಚಿ. ನ. ಮಂಗಳ, ಮುಂತಾದವರು ಉಲ್ಲಸಿತರಾಗಿದ್ದರು. ರಾತ್ರಿ ಒಂಭತ್ತು ಗಂಟೆಗೆ ಎಚ್ಚೆನ್ ನಮ್ಮ ಮನೆಗೆ ಬಂದು ಮೇಜಿನ ಮೇಲೆ ಕೂತರು. "ವಿಷಯ ತಿಳಿಯಿತು. ನನಗೂ ಅದು ಅನಿರೀಕ್ಷಿತವೇ. ನಿರ್ಣಯವನ್ನು ನೀವೆಲ್ಲಾ ಸೇರಿ ಸೋಲಿಸುತ್ತೀರೆಂಬ ಭರವಸೆ ಇತ್ತು," ಇತ್ಯಾದಿ ನಿರ್ಭಾವುಕ ಮಾತುಗಳು ಅವರದು.

ಆಗ ಚಾಲ್ತಿಯಲ್ಲಿದ್ದ ನಿಯಮಗಳ ಪ್ರಕಾರ ಎನ್.ಇ.ಎಸ್.ನಲ್ಲಿ ಐದು ಬಗೆಯ ಸದಸ್ಯರಿರುತ್ತಿದ್ದರು. ನೂರು ರೂಪಾಯಿ ಪಾವತಿಸಿದರೆ ಒಂದು ವರ್ಷ 'ಸಿ' ವಿಭಾಗದ ಸದಸ್ಯರಾಗಲು ಮುಕ್ತವಾದ ಅವಕಾಶವಿತ್ತು. ಡಾ॥ ಎಚ್ಚೆನ್ ಅವರ ಮುಖಭಂಗ ಮಾಡಲು ಆ ನಿಯಮದಡಿ ಕಾರ್ಯಪ್ರವೃತ್ತರಾಗಲು ನಮ್ಮ ಕೆಲವು ಅಧ್ಯಾಪಕ ಮಿತ್ರರು ತೀರ್ಮಾನಿಸಿದರು. ಒಂದು "ಸಾಂಸ್ಕೃತಿಕ – ರಾಜಕೀಯ" ಸಂಸ್ಥೆಯನ್ನು ಸಂಪರ್ಕಿಸಿ ಮುಂದಿನ ಸರ್ವಸದಸ್ಯರ ಸಭೆಯ ವೇಳೆಗೆ ಸುಮಾರು ಮುನ್ನೂರು ವ್ಯಕ್ತಿಗಳನ್ನು 'ಸಿ ವಿಭಾಗ'ದ ಸದಸ್ಯರನ್ನಾಗಿ ನೋಂದಾಯಿಸಿದರು. ಸಾಮಾನ್ಯವಾಗಿ ಈ ಸಭೆಗಳಲ್ಲಿ ಹಾಜರಿರುತ್ತಿದ್ದವರು ನೂರೋ ನೂರಿಪ್ಪತ್ತೋ, ಆದರೆ ಮುಂದಿನ ಸಭೆಗೆ ಸುಮಾರು ಐನೂರು ಮಂದಿ ಹಾಜರು. ಸಭೆಯನ್ನು ಆಡಿಟೋರಿಯಂನಲ್ಲಿ ಆಯೋಜಿಸಲಾಗಿತ್ತು. ಯಥಾಪ್ರಕಾರ ಉಪಕುಲಪತಿ ಎಚ್ಚೆನ್ ಸಭೆಗೆ ಬಂದಿರಲಿಲ್ಲ. 'ಸಿ ವಿಭಾಗ'ದ ಸದಸ್ಯರ ಪೈಕಿ ಹತ್ತು ಮಂದಿ ಎನ್.ಇ.ಎಸ್.ನ ಆಡಳಿತ ಮಂಡಲಿಗೆ ಚುನಾಯಿತರಾಗುವುದು ಸಂವಿಧಾನಾತ್ಮಕ ಅವಕಾಶ. ಸಾಮಾನ್ಯವಾಗಿ ಎಚ್ಚೆನ್ ಒಂದು ಪಟ್ಟಿಯನ್ನು ಮಂಡಿಸಿ ಅಂಗೀಕಾರ ಪಡೆಯುತ್ತಿದ್ದುದು ವಾಡಿಕೆ. ಈ ಬಾರಿ ಅದು ಸಾಧ್ಯವಿರಲಿಲ್ಲ. ಹೊಸ ಸದಸ್ಯರು ಹತ್ತು ಸ್ಥಾನಗಳನ್ನೂ ತಮ್ಮದನ್ನಾಗಿಸಿಕೊಂಡರು. ಅವರ ವಿರುದ್ಧ ಅಭ್ಯರ್ಥಿಗಳಾಗಿದ್ದ ಬೇರೆ ಹತ್ತು ಮಂದಿ ನಿರ್ಣಾಯಕವಾಗಿ ಸೋತರು. ಗೆದ್ದವರಲ್ಲಿ ನಿವೃತ್ತ ನ್ಯಾಯಮೂರ್ತಿಯೊಬ್ಬರು, ಇಂಜಿನಿಯರಿಂಗ್ ಕಾಲೇಜೊಂದರಲ್ಲಿ ಅಧ್ಯಾಪಕರಾಗಿದ್ದವರೊಬ್ಬರು, ಶಾಸಕರಾಗಲು ಯತ್ನಿಸಿ ಸೋತಿದ್ದ ಒಬ್ಬ ರಾಜಕೀಯ ಪುಢಾರಿ, ಬ್ಯಾಂಕ್ ಒಂದರ ಹಿರಿಯ ಅಧಿಕಾರಿ, ಹೀಗೆ ಖ್ಯಾತನಾಮರಿದ್ದರು. ಇನ್ನೇನು ಎನ್.ಇ.ಎಸ್. ತಮ್ಮದಾಯಿತೆಂಬ ಪುಲಕ ಅನುಭವಿಸಿ ಮೋಡಗಳ

ಮೇಲೆ ಅಡ್ಡಾಡಿದರು. ಎಚ್ಚೆನ್ ಅವರು ಮೂಕರಾಗಿ ಬಿಟ್ಟರು. ಅವರು ಅಷ್ಟು ವ್ಯಸನ ಅನುಭವಿಸಿದ್ದುದನ್ನು ಹಿಂದೆಂದೂ ಯಾರೂ ಕಂಡಿರಲಿಲ್ಲ. ಅವರನ್ನು ಭೇಟಿಯಾದಾಗ ಕೇವಲ ಅರ್ಧಗಂಟೆಯ ನಂತರ ಚೇತರಿಸಿಕೊಂಡು ಹೇಳಿದರು : "ಇದರಿಂದ ಕಂಗೆಡಬೇಕಾಗಿಲ್ಲ. ಮುಂದಿನ ವರ್ಷ ಆ ಹತ್ತು ಸ್ಥಾನಗಳನ್ನೂ ನಾವು ಗೆದ್ದುಕೊಳ್ಳೋಣ. ನಮ್ಮ ಎನ್.ಇ.ಎಸ್.ನ ಆಡಳಿತ ಮಂಡಲಿಯಲ್ಲಿ ಹತ್ತು ಜನ ಸದಸ್ಯರು ಸಂಸ್ಥೆಯನ್ನು ಬುಡಮೇಲು ಮಾಡಲಾಗುವುದಿಲ್ಲ, ಹತಾಶರಾಗಬೇಕಾಗಿಲ್ಲ." ಈ ಗೆದ್ದ ಹತ್ತು ಮಂದಿ ಕಾಲೇಜಿಗೆ ಬಂದು ಅಧ್ಯಾಪಕರ ಸಭೆ ನಡೆಸಿ ಏನೇನೋ ಯೋಜನೆಗಳನ್ನು ಪ್ರಕಟಿಸಿದರು, ಆಶ್ವಾಸನೆಗಳ ಮಳೆ ಸುರಿಸಿದರು. ಅಧ್ಯಾಪಕರು ನೇರವಾಗಿ ಇಬ್ಭಾಗವಾಗಿದ್ದಂತೆ ತೋರುತ್ತಿತ್ತು, ಆದರೆ ವೈಮನಸ್ಯವು ವೈಯ್ಯಕ್ತಿಕ ನೆಲೆಯಲ್ಲಿ ಅಷ್ಟಾಗಿ ತೋರಿಬರುತ್ತಿರಲಿಲ್ಲ.

ಮುಂದಿನ ಸರ್ವಸದಸ್ಯರ ಸಭೆಯ ವೇಳೆಗೆ ಎಚ್ಚೆನ್, ಜಿ. ನ. ಮಂಗಳ, ಮುಂತಾದವರು ಒಟ್ಟಾಗಿ ಶ್ರಮಿಸಿ ಮುನ್ನೂರನ್ನು ನಗಣ್ಯವಾಗಿಸುವಷ್ಟು ಮಂದಿ 'ಸಿ ವಿಭಾಗ'ದ ಸದಸ್ಯರನ್ನು ನೋಂದಾಯಿಸಿದರು. ಗೌರಿಬಿದನೂರೊಂದರಲ್ಲೇ ಮುನ್ನೂರಕ್ಕೂ ಹೆಚ್ಚು ಸದಸ್ಯರನ್ನು ಪಡೆದಿದ್ದರು ಎಚ್ಚೆನ್. ಸಾಮ್ರಾಜ್ಯ ವಿಸ್ತರಿಸಿಕೊಂಡೆವೆಂಬ ಹುಮ್ಮಸ್ಸಿನ ಹಿಂದಿನ ಹತ್ತು ಮಂದಿ ಚುನಾಯಿತ ಸದಸ್ಯರಾಗಲಿ, ಮುನ್ನೂರು ಸದಸ್ಯರಾಗಲಿ, ಸರ್ವಸದಸ್ಯರ ಸಭೆಯತ್ತ ಮುಖ ಮಾಡಲಿಲ್ಲ. ಅದೇ ಸುಮಾರಿನಲ್ಲಿ ದೇಶವು ತುರ್ತು ಪರಿಸ್ಥಿತಿಯ ಘೋಷಣೆಯನ್ನು ಕಂಡಿತ್ತು. ಕಾಲೇಜಿನ ಒಬ್ಬ ಅಧ್ಯಾಪಕರ ಮೇಲೆ ಕೆಲವು ಆಪಾದನೆಗಳಿದ್ದು, ವಿಚಾರಣೆಗೆ ಒಂದು ಆಯೋಗವನ್ನು ರಚಿಸಲಾಗಿತ್ತು. ವಿಶ್ವೇಶ್ವರಪುರ ಕಾನೂನು ಕಾಲೇಜಿನ ಪ್ರಾಂಶುಪಾಲರಾಗಿದ್ದ ಶ್ರೀ. ಬಿ. ಟಿ. ಪಾರ್ಥಸಾರಥಿ ಅವರು ವಿಚಾರಣೆ ನಡೆಸುವ ಏಕಸದಸ್ಯ ಆಯೋಗ. ಎನ್.ಇ.ಎಸ್. ಪರವಾಗಿ ಶ್ರೀ. ಎನ್. ಎಸ್. ಚಂದ್ರಶೇಖರ (ಮಾನ್ಯ ಶ್ರೀ. ನಿಟ್ಟೂರು ಶ್ರೀನಿವಾಸರಾವ್ ಅವರ ಮಗ) ಅವರು ಆಯೋಗದೆದುರು ವಕೀಲರಾಗಿ ಕೆಲಸ ಮಾಡಿದರು. ಆಪಾದಿತರನ್ನು ಖುಲಾಸೆ ಮಾಡಲಿಲ್ಲ ಮತ್ತು ಹೆಚ್ಚಿನ ಶಿಕ್ಷೆಯನ್ನೂ ಅವರಿಗೆ ನೀಡಲಿಲ್ಲ. ನಂತರದ ಕಾಲದಲ್ಲಿ ಅವರು ಎಚ್ಚೆನ್ ಅವರೊಡನೆ ಆತ್ಮೀಯವಾಗಿದ್ದಂತೆ ವ್ಯವಹರಿಸುತ್ತಿದ್ದರು.

ಈ ಮಧ್ಯೆ ಡಾ॥ ಎಚ್ಚೆನ್ ಉಪಕುಲಪತಿ ಸ್ಥಾನಕ್ಕೆ ರಾಜೀನಾಮೆ ಇತ್ತು ಕೆಲಕಾಲ 'ನಿರುದ್ಯೋಗಿ' ಯಾಗಿದ್ದರು. ತರುವಾಯದಲ್ಲಿ ಯಥಾಪ್ರಕಾರ ಕಾಲೇಜು ವಿದ್ಯಾರ್ಥಿನಿಲಯದಲ್ಲಿ ಅವರ ಕೋಣೆಗೆ ಹಿಂದಿರುಗಿದರು ಮತ್ತು ಎನ್.ಇ.ಎಸ್. ಅಧ್ಯಕ್ಷರಾದರು. ಸಂಸ್ಥೆಯ ಆಕ್ರಮಣದ ಹುನ್ನಾರವನ್ನು ಹುಸಿಯಾಗಿಸಿದ್ದ ತೃಪ್ತಿ ಅವರಲ್ಲಿತ್ತು. ಆದರೆ ಹುಳಿ ಹಿಂಡುವ ಕೆಲಸವಿನ್ನೂ ಮುಕ್ತಾಯವಾಗಿರಲಿಲ್ಲ. ತುರ್ತು ಪರಿಸ್ಥಿತಿಯನ್ನು ರದ್ದುಗೊಳಿಸಿದ ನಂತರ ಹೊಸ ಕೇಂದ್ರ ಸರ್ಕಾರವು "ಶಾ ಆಯೋಗ"ವನ್ನು ರಚಿಸಿತ್ತು. ಬಸವನಗುಡಿ ನ್ಯಾಷನಲ್ ಕಾಲೇಜಿನ ಒಬ್ಬ ಅಧ್ಯಾಪಕರು ಆಯೋಗಕ್ಕೆ ದೂರಿತ್ತು ತುರ್ತು ಪರಿಸ್ಥಿತಿಯ ವೇಳೆಯಲ್ಲಿ ಅವರಿಗೆ ವಿಪರೀತ ಮಾನಸಿಕ ಕಿರುಕುಳ ನೀಡಲಾಗಿತ್ತೆಂದು ಎಚ್ಚೆನ್ ಅವರ ಮೇಲೆ ಆರೋಪ ಹೊರಿಸಿದರು. ಈ ಪ್ರಕರಣದ ವಿಚಾರಣೆಯ ಸಂದರ್ಭದಲ್ಲಿ ನ್ಯಾಯಮೂರ್ತಿ ಶಾ ಅವರು "ಅಬ್ಬಾ, ಎಂತಹ ಕ್ರೌರ್ಯ; ಒಂದು ಶಿಕ್ಷಣ ಸಂಸ್ಥೆಯಲ್ಲಿ ಹೀಗಾಗಿದ್ದು ಶೋಚನೀಯ" ಎಂದು ಉದ್ಗರಿಸಿದ್ದರೆಂದು ಪತ್ರಿಕೆಗಳಲ್ಲಿ ವರದಿಯಾಗಿತ್ತು. ಎಚ್ಚೆನ್ ಅವರು ಅನೇಕ ಅಧ್ಯಾಪಕರು, ವಿದ್ಯಾರ್ಥಿಗಳು, ಮುಂತಾದವರೊಡನೆ ಇರುವಾಗೊಮ್ಮೆ ನಾನವರಿಗೆ ಹೇಳಿದೆ : "ನೋಡಿದಿರಾ, ನೀವೆಷ್ಟು ಕ್ರೂರಿ ಎಂಬುದು ಇಡೀ ದೇಶಕ್ಕೆ ತಿಳಿದಿದೆ. ಆದರೇನಂತೆ, ಸಂಸ್ಥೆಯನ್ನು ಹದ್ದುಗಳಿಂದ ಕಾಪಾಡಿದ ಕೀರ್ತಿ ನಿಮ್ಮದೆಂಬ ಸಮಾಧಾನ ಅದಕ್ಕೆ ಪರಿಹಾರವಾಗಿ ಚಿರಕಾಲ ಉಳಿಯುತ್ತದೆ. ವಿಚಲಿತರಾಗದೆ ಹೋರಾಟ ನಡೆಸಿದಿರಲ್ಲಾ ಅದು 'ಭಾರತ ಬಿಟ್ಟು ತೊಲಗಿ' ಎಂಬ ಹೋರಾಟದಲ್ಲಿ ನೀವು ವಿದ್ಯಾರ್ಥಿಯಾಗಿದ್ದಾಗ ಜೈಲಿಗೆ ಹೋದಿರಲ್ಲಾ, ಅದಕ್ಕೆ ಸಮನಾದ್ದು."

ಸಾರ್ವಜನಿಕ ಸಂಸ್ಥೆಗಳಿಗೆ ಎಚ್ಚರಿಕೆ ನೀಡುವಂತಹ ಪ್ರಸಂಗದಲ್ಲಿ ಡಾ॥ ಎಚ್ಚೆನ್ ಅವರಿಗೆ "ಕ್ರೂರಿ" ಎಂಬ ಬಿರುದನ್ನು ಶಾ ಆಯೋಗದಿಂದ ಕೊಡಮಾಡಿಸಿದ ವ್ಯಕ್ತಿಗಳು ಮತ್ತು ಶಕ್ತಿಗಳು ಸ್ವಸ್ಥರಾಗಿರುವುದಿಲ್ಲ; ಬೇರೆ ಸಂಸ್ಥೆಗಳನ್ನು ಬಾಚಿಕೊಳ್ಳುವುದು ಅವರ ಹವ್ಯಾಸ. ಎಷ್ಟು ಸುಲಭವಾಗಿ ಸಂಸ್ಥೆಗಳ ಕೀರ್ತಿ, ಆಸ್ತಿ, ಎಲ್ಲವನ್ನೂ ತಮ್ಮದಾಗಿಸಿಕೊಳ್ಳಬಹುದು! ಎಚ್ಚೆನ್ ಅವರಂತೆ ಹೋರಾಟ ನಡೆಸುವವರಿದ್ದರೆ ಸಂಸ್ಥೆಗಳು ಸಾರ್ವಜನಿಕವಾಗಿ ಉಳಿಯುತ್ತವೆ; ಇಲ್ಲವಾದರೆ, ಅವು ಖಾಸಗಿ ಸಂಸ್ಥೆಗಳಾಗಿ ಪರ್ಯವಸಾನ ಹೊಂದುತ್ತವೆ. ಎಚ್ಚೆನ್ ಎನ್.ಇ.ಎಸ್.ನ ಅಧ್ಯಕ್ಷರಾಗುತ್ತಿದ್ದಂತೆ ಅವರ ಮೇಲೆ ಕತ್ತಿ ಕಟ್ಟಿದ್ದ ಅವರ ಮಾಜಿ ಶಿಷ್ಯರು ಮತ್ತು ಸಹೋದ್ಯೋಗಿಗಳು ಮತ್ತೆ ಅವರನ್ನು ಸುತ್ತುವರಿದು ಆಪ್ತರಾದರು, ಕಾಲೇಜಿನ ಪ್ರಾಚಾರ್ಯರುಗಳೂ ಆದರು. ಎಚ್ಚೆನ್ ಅವರನ್ನು ಓಲೈಸಲು ಅವರಿಗೆ ಅತ್ಯಂತ ಸುಲಭ ಮಾರ್ಗವು ಚೆನ್ನಾಗಿ ತಿಳಿದಿತ್ತು : ಮನೆಗೆ ಕರೆದು ಒಳ್ಳೆಯ ಊಟ ಮಾಡಿಸುವುದು, ಮಡದಿಯೊಡನೆ ಅವರ ಕಾಲಿಗೆ ಬೀಳುವುದು ಮತ್ತು ಕಣ್ಣೀರ ಕೋಡಿ ಹರಿಸುವುದು; ಹಿಂದಿನ ಎಲ್ಲ ಕಹಿ ಅನುಭವಗಳನ್ನೂ ಮರೆತು ಎಚ್ಚೆನ್ ನಿರ್ಮಲಚಿತ್ತರಾಗಿ ಬಿಡುತ್ತಾರೆ! ಸಂಸ್ಥೆಯನ್ನು ಉಳಿಸುವ ಹೋರಾಟದಲ್ಲಿ ತೊಡಗಿದ್ದಾಗ "ನನ್ನ ಶಿಷ್ಯರು ಮತ್ತು ಸಹೋದ್ಯೋಗಿಗಳು ಹೀಗೇಕಾದರು?" ಎಂದು ಪರಿತಪಿಸುತ್ತಿದ್ದವರು 'ಇದೇ ಎಚ್ಚೆನ್ ಅವರೇ' ಎಂದು ವಿಸ್ಮಿತರಾಗುವುದು ಕೆ.ಡಿ.ಎನ್., ಸೀಯೆನ್ನೆಮ್, ಬೀಎಮ್ಮೆಸ್, ಸೀವೀವಿ, ಜಿಆರ್, ವೈಎನ್ನಾರ್, ಎನ್ನಾರ್, ಬೀಜೀಎಂ, ಎಂಸಿ, ರಾಜಕುಮಾರ್, ಮುಂತಾದವರ ಪಾಲಿನ ಭಾಗ್ಯ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫




**ಡಾ॥ ಜಿ. ರಾಮಕೃಷ್ಣ ಅವರ ೮೧ನೇ ಹುಟ್ಟುಹಬ್ಬದ ಪ್ರಯುಕ್ತ ಮಾ–ಲೆ ಅಧ್ಯಯನ ಕೂಟ ಮತ್ತು ಸಮಕಾಲೀನ ಸಾಮಾಜಿಕ ಸಾಂಸ್ಕೃತಿಕ ವೇದಿಕೆ ಆಯೋಜಿಸಿದ ಕಾರ್ಯಕ್ರಮದಲ್ಲಿ ನವಕರ್ನಾಟಕ ಪ್ರಕಟಿಸಿರುವ ಜಿ. ಆರ್. ಅವರ 'ವರ್ತಮಾನ' ಕೃತಿಯ ಬಿಡುಗಡೆ ಹಾಗೂ ಅವರು ನಟಿಸಿರುವ ಶ್ರೀ ನಾಗನಾಥ ಮಾಧವರಾವ್ ಜೋಶಿ ನಿರ್ದೇಶನದ 'ಗಾಂಧಿದೇವಿ' ಚಲನಚಿತ್ರದ ಪ್ರದರ್ಶನ ಏರ್ಪಡಿಸಲಾಯಿತು. ದಿನಾಂಕ ೧೬–೬–೨೦೧೯ರಂದು ಬೆಂಗಳೂರಿನ ಬಸವನಗುಡಿಯ ನ್ಯಾಷನಲ್ ಕಾಲೇಜು ಮಲ್ಟಿಮೀಡಿಯ ಸಭಾಂಗಣದಲ್ಲಿ ನಡೆದ ಈ ಸಮಾರಂಭದಲ್ಲಿ ಶ್ರೀ ಎಚ್. ಎಸ್. ದೊರೆಸ್ವಾಮಿ ಅವರು ಕೃತಿಯ ಬಿಡುಗಡೆ ಮಾಡಿದರು. ಶ್ರೀ ಶಶಿಧರ ಡೋಂಗ್ರೆ ಅವರು ಕೃತಿಯ ಕುರಿತು ಮಾತನಾಡಿದರು. ಡಾ॥ ಕೆ. ಮರುಳಸಿದ್ದಪ್ಪ ಅವರು ತಮ್ಮ ಅಭಿಪ್ರಾಯ ಹಂಚಿಕೊಂಡರು.**

ನಾನು ಓದಿದ ಪುಸ್ತಕ

# ಧರ್ಮಾಂಧತೆಗೆ ಶಾಸ್ತ್ರ ಚಿಕಿತ್ಸೆ




## ಧರ್ಮಾನಂದ ಕೊಸಾಂಬಿಯವರ ಆತ್ಮಕಥನ – ನಿವೇದನೆ

**ಧರ್ಮಾನಂದ ಕೊಸಾಂಬಿ ಅಮೆರಿಕಕ್ಕೆ ತಾನು ಹೋಗಿದ್ದರಿಂದ ಸಮಾಜ ವಿಜ್ಞಾನದಲ್ಲಿ ಅಪಾರವಾದ ಆಸಕ್ತಿ ಬಂದಿತೆಂದು ಹೇಳುತ್ತಾರೆ. ಈ ಕುರಿತು ಅವರು ಅನೇಕ ಗ್ರಂಥಗಳನ್ನು ಓದಿದರು. ಅವರ ಚಿಂತನಾಕ್ರಮದ ಮೇಲೆ ಸಮಾಜವಾದ ತೀವ್ರ ಪರಿಣಾಮ ಬೀರಿತು. ಕೆಳವರ್ಗದ ಕಾರ್ಮಿಕ ವ್ಯಕ್ತಿ ಹೇಗೆ ತನ್ನ ಆಧ್ಯಾತ್ಮಿಕ, ಧಾರ್ಮಿಕ ಪ್ರಗತಿ ಸಾಧಿಸಬಲ್ಲ ಎಂದು ಚಿಂತಿಸತೊಡಗಿದರು. ಒಂದು ವೇಳೆ ನಾನು ಭಾರತದಲ್ಲೇ ಉಳಿದಿದ್ದರೆ ನನ್ನ ಬದುಕು ಧಾರ್ಮಿಕ ಚಿಂತನೆಗಳಲ್ಲೇ ಕಳೆಯುತ್ತಿತ್ತು ಎನ್ನುವ ಧರ್ಮಾನಂದ ಕೊಸಾಂಬಿಯವರು ಪಾಶ್ಚಾತ್ಯ ವಿಜ್ಞಾನಿಗಳ ಮರುವ್ಯಾಖ್ಯಾನದಿಂದ ಸಂಪ್ರದಾಯ, ಧರ್ಮ ಮತ್ತು ಮನುಷ್ಯನ ವಾಸ್ತವದ ಬದುಕನ್ನು ಸ್ಪಷ್ಟವಾಗಿ ನೈಜ ದೃಷ್ಟಿಯಿಂದ ನೋಡುವ ಹೊಸ ದೃಷ್ಟಿಕೋನವನ್ನು ಬೆಳೆಸಿಕೊಂಡರು. ಪ್ರಾಚೀನ ಚೀನಾದ ಜ್ಞಾನಯಾತ್ರಿಕ ಹ್ಯೂ ಯನ್ ತ್ಸಾಂಗ್‌ನ ಪ್ರವಾಸ, ಪ್ರಯಾಸ, ಜಿದ್ದಿಗೆ, ಸಿದ್ಧಿಗೆ ಸರಿಮಿಗಿಲಾಗಿ ನಿವೇದನದುದ್ದಕ್ಕೂ ಕೊಸಾಂಬಿಯವರ ಜೀವನ ಹರಡಿಕೊಂಡಿದೆ.**


**ರಾಜಕುಮಾರ ಎಸ್. ಸಂಕಪಾಳ**



ಮೂಲ : **ಧರ್ಮಾನಂದ ಕೊಸಾಂಬಿ**

ಅನುವಾದ : **ಡಾ|| ಗೀತಾ ಶೆಣೈ**

ಪುಟಗಳು : ೨೨೭   ಬೆಲೆ : ರೂ. ೧೬೦/–

ಪ್ರಕಾಶಕರು :

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

೧೧, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೧


ಧರ್ಮಾನಂದ ಕೊಸಾಂಬಿಯವರ ಆತ್ಮಕಥನವನ್ನು ಓದಿದಾಗ ಗಾಢ ವಿಸ್ಮಯ ಆವರಿಸಿಕೊಳ್ಳುತ್ತದೆ. ಕೊಸಾಂಬಿ ಹುಟ್ಟಿದ್ದು ಗೌಡ ಸಾರಸ್ವತ ಬ್ರಾಹ್ಮಣ ಕುಟುಂಬದಲ್ಲಿ. ಜೀವನವಿಡೀ ಧ್ಯಾನಿಸಿದ್ದು, ಸಾಧಿಸಿದ್ದು ಬೌದ್ಧ ಧರ್ಮವನ್ನು, ಮರಣಹೊಂದಿದ್ದು ಜೈನಧರ್ಮದ ಸಲ್ಲೇಖನದಲ್ಲಿ !!

ಧರ್ಮಾನಂದ ಕೊಸಾಂಬಿಯವರ ಅಪರೂಪದ ಸರಳತನ, ನೈತಿಕ ಪ್ರಾಮಾಣಿಕತೆ ಆತ್ಮಕಥನದುದ್ದಕ್ಕೂ ನಮ್ಮನ್ನು ಆಪ್ತವಾಗಿ ಕೈಹಿಡಿದು ನಡೆಸಿಕೊಂಡು ಹೋಗುತ್ತವೆ. ೧೮೭೬ರ ಅಕ್ಟೋಬರ್ ೯ರಂದು ಧರ್ಮಾನಂದ ಕೊಸಾಂಬಿಯವರು ಗೋವೆಯ ಸಾಂಖವಾಳ ಎಂಬ ಗ್ರಾಮದಲ್ಲಿ ಜನಿಸುತ್ತಾರೆ. ವಿಚಾರಗಳ ತಾಕಲಾಟದಲ್ಲಿ ಸೋತ ಯುವಕ ಧರ್ಮಾನಂದ ಕೊಸಾಂಬಿ ತನಗೆ ಬರುತ್ತಿದ್ದ ಎದೆನೋವನ್ನು ಪರಿಹಾರ ಮಾಡಿಕೊಂಡಿದ್ದು ಸಂತ ತುಕಾರಾಮರ ಅಭಂಗಗಳನ್ನೋದಿ. ಅವರ ಮೇಲೆ ಸಂತ ತುಕಾರಾಮರ ಜೀವನ ಗಾಢವಾಗಿ ಪರಿಣಾಮ ಬೀರಿತು. ಕೊಸಾಂಬಿಯವರ ಓದಿನ ದಾಹ ಅಪರಿಮಿತವಾಗಿತ್ತು. ರಘುವಂಶ, ಜ್ಞಾನೇಶ್ವರಿಯಿಂದ ಹಿಡಿದು ಜಾಹೀರಾತಿನವರೆಗೂ ಸಿಕ್ಕಿದ್ದೆಲ್ಲವನ್ನೂ ಓದಿದರು.

೧೮೯೪ರಲ್ಲಿ ಸಂಸ್ಕೃತ ಕಲಿಯಬೇಕೆಂದು ಊರನ್ನು ಬಿಟ್ಟು ಕೊಲ್ಲಾಪುರಕ್ಕೆ ಬಂದು, ಅದು ವಿಫಲವಾಗಿ ಮರಳಿ ಊರಿಗೆ ಸೇರಿ ವಯಸ್ಸಾದ ತಂದೆಯ ಕ್ಷಮೆ ಯಾಚಿಸುತ್ತಾರೆ. ಆಗಸ್ಟ್ ೧೮, ೧೮೯೮ರಲ್ಲಿ ತಂದೆಯ ಸಾವು ಕೊಸಾಂಬಿಯವರನ್ನು ಬುದ್ಧನ ಮಾರ್ಗಕ್ಕೆ ಕರೆತಂದಿತು. ಸಾವಿನ ಸಂಕಷ್ಟ, ಕುಟುಂಬದ ಬಡತನ ಕೊಸಾಂಬಿ ಹುಚ್ಚರಾಗಿದ್ದಾರೆ ಎಂದು ಸುದ್ದಿ ಹಬ್ಬುವ ಮಟ್ಟಿಗೆ ಅವರನ್ನು ಏಕಾಂತಕ್ಕೆ ತಳ್ಳಿದವು. ಬುದ್ಧನ ಉಪದೇಶದ ಜ್ಞಾನವನ್ನು ಸಂಪಾದಿಸಿದರೆ ತನ್ನ ಬದುಕು ಸಾರ್ಥಕವಾಗುತ್ತದೆ ಎಂದು ಭಾವಿಸಿದರು. ೧೮೯೮ರಲ್ಲಿ ಮತ್ತೊಮ್ಮೆ ಊರು ಬಿಡುವ ವಿಫಲ ಪ್ರಯತ್ನವಾಗುತ್ತದೆ. ೧೮೯೯ ಡಿಸೆಂಬರ್ ೨ರಂದು ಊರು ತೊರೆದ ಕೊಸಾಂಬಿ ಪುಣೆಯತ್ತ ಹೊರಟರು.

ಕೊಸಾಂಬಿ ಅವರಿಗೆ ಪುಣೆಯಲ್ಲಿ ಓದಿನ ದಾಹ. ಎಡ್ವಿನ್ ಆರ್ನಾಲ್ಡ್ ಅವರ 'ಲೈಟ್ ಆಫ್ ಏಷಿಯಾ'ದ ಮರಾಠಿ ಅನುವಾದದ ಓದಿನಿಂದ ತೀವ್ರವಾಗಿ ಪ್ರಭಾವಿತರಾಗುತ್ತಾರೆ. 'ಪ್ರಾರ್ಥನಾ ಸಮಾಜದ ಪ್ರಚಾರ ಮಾಡು' ಎಂದು ಹೇಳಿದ ಹಿತೈಷಿ ಡಾ|| ಭಂಡಾರ್ಕರರ ವಿನಂತಿಯನ್ನು ಅನುಸರಿಸದೆ ಬೌದ್ಧ ಧರ್ಮದ ಜ್ಞಾನಕ್ಕಾಗಿ ಹಳದಿ ಬಣ್ಣ ಹಾಕಿದ ಎರಡು ತುಂಡು ಬಟ್ಟೆ ತೊಟ್ಟುಕೊಂಡು ಪುಣೆ ಬಿಡುತ್ತಾರೆ. ಗ್ವಾಲಿಯರ್‌ಗೆ ಬಂದಿಳಿದ ಕೊಸಾಂಬಿಯವರಿಗೆ ನೆರಳಿನಂತೆ ಹಣದ ಮುಗ್ಗಟ್ಟೂ ಜೊತೆಗೇ ಇರುತ್ತದೆ. ಇಲ್ಲಿ ಅವರಿಗೆ ಡಾ|| ವಾಗ್ಲೆ ಎಂಬ ಸಜ್ಜನರು ಭೇಟಿಯಾಗಿ ಲೌಕಿಕದ ಉಪದೇಶ ಮಾಡಿ ವ್ಯರ್ಥ ಸಾಹಸ ಬಿಟ್ಟುಬಿಡಲು ಹೇಳುತ್ತಾರೆ. ತಾವೇ ಸ್ವತಃ ಅವರಿಗೆ ಹಣ ನೀಡಲು ಬಂದರೂ ಕೊಸಾಂಬಿ ತಿರಸ್ಕರಿಸಿ ಪ್ರಯಾಣವನ್ನು ಮುಂದುವರಿಸುತ್ತಾರೆ. ಗ್ವಾಲಿಯರ್‌ನಲ್ಲಿ ತಮ್ಮ ತಂಬಾಕಿನ ಚಟವನ್ನು ಕೊಸಾಂಬಿ ಬಿಡುತ್ತಾರೆ. ಸೆಪ್ಟೆಂಬರ್ ೨೦, ೧೯೦೦ ರಂದು ಕಾಶಿ ತಲುಪಿದ ಕೊಸಾಂಬಿಯವರಿಗೆ ಆ ಪುರಾತನ ಪುಣ್ಯ ನಗರಿಯ ವ್ಯಾವಹಾರಿಕ ವಾಸ್ತವ ಜಗತ್ತಿನ ಅಪಸವ್ಯಗಳು ಎದುರಾಗುತ್ತವೆ. ಬೆಳಗಾವಿಯ ಗೋವಿಂದ ಪಾಲೇಕರರ ಮಾತಿನಿಂದ ಕೊಸಾಂಬಿ

ಉತ್ತೇಜಿತರಾಗುತ್ತಾರೆ. ಗೋವಿಂದ ಪಾಲೇಕರರಿಗೆ ಅಡುಗೆ ಮಾಡಿಹಾಕುವ ಸಾರಸ್ವತ ವಿಧವೆ ಕಾಶಿಬಾಯಿ ಮಾತ್ರ ಕೊಸಾಂಬಿ ಅವರಿಗೆ ಹೊರ ಭಾಗದಲ್ಲಿ ಊಟ ಬಡಿಸುತ್ತಿದ್ದಳು. ಕಾಶಿಯಲ್ಲಿ ಪ್ರಸಿದ್ಧ ಗಂಗಾಧರ ಶಾಸ್ತ್ರಿಯವರಲ್ಲಿಯೇ ಸಂಸ್ಕೃತ ಕಲಿಯಬೇಕೆಂದು ಹಠ ತೊಟ್ಟರು. ಧರ್ಮಾನಂದ ಕೊಸಾಂಬಿ ಕಾಶಿಯಲ್ಲಿ ವಾಸ್ತವ್ಯ ಮತ್ತು ಊಟಕ್ಕಾಗಿ ಬಹಳಷ್ಟು ನೋವು, ಅವಮಾನ, ಜಾತಿಯ ತಾರತಮ್ಯ ಅನುಭವಿಸಿದರು. ಅಲ್ಲಿ ಪರಿಚಯವಾದ ದುರ್ಗಾನಾಥ ಎಂಬ ಹೆಸರಿನ ಯುವಕನಿಂದಾಗಿ ಕೊಸಾಂಬಿ ಬೌದ್ಧಧರ್ಮದ ಅಧ್ಯಯನಕ್ಕಾಗಿ ನೇಪಾಳಕ್ಕೆ ಹೋಗಲು ಇಚ್ಛಿಸುತ್ತಾರೆ. ನೇಪಾಳವನ್ನು ಪ್ರವೇಶಿಸುವುದಕ್ಕೆ ಮುಂಚೆ ಎರಡು ದಿನ ಕೇವಲ ಫಲಾಹಾರದಲ್ಲಿ ಕಳೆದ ಕೊಸಾಂಬಿ ನೇಪಾಳದ ಗಡಿ ದಾಟಿದ ಬಳಿಕ ಅವರ ಬಲಗಾಲು ಪೂರ್ಣ ರಕ್ತಸಿಕ್ತವಾಗುತ್ತದೆ.

ಕೊಸಾಂಬಿ ನೇಪಾಳವನ್ನು ಬಿಡುವಾಗ ಅವರಲ್ಲಿದ್ದುದು ಒಂದು ಚಾದರ, ಕೋಟು, ಕೆಲವು ಪುಸ್ತಕಗಳು, ಎರಡು ಪಂಚೆ, ಒಂದು ರುಮಾಲಿನ ಬಟ್ಟೆ, ನೀರಿನ ತಂಬಿಗೆ, ಎರಡು ಚಲ್ಲಣಗಳು, ಒಂದು ಜೊತೆ ವ್ಯಾಯಾಮದ ಡಂಬೆಲ್ಲುಗಳು ಮತ್ತು ಎರಡು ರೂಪಾಯಿ, ಹನ್ನೆರಡು ಆಣೆಗಳು ಮಾತ್ರ.

ಮದರಾಸಿನ ತಳಮಳದ ವಾಸ್ತವ್ಯದ ನಂತರ ಸಿಲೋನನ್ನು ತಲುಪಿದ ಧರ್ಮಾನಂದರು ವಿದ್ಯೋದಯ ವಿದ್ಯಾಲಯದಲ್ಲಿ ಬೌದ್ಧಧರ್ಮವನ್ನು ಅಭ್ಯಸಿಸಲು ನಿಂತರು. ಒಂದು ಆಣೆಗೂ ತತ್ವಾರವಾಗಿ ನರಕಸದೃಶ ಕಷ್ಟಗಳನ್ನು ಅನುಭವಿಸಿದ ಕೊಸಾಂಬಿ ಪೂರ್ಣಿಮೆಯ ದಿನ ಬೌದ್ಧಧರ್ಮ ಕುರಿತು ವಿದ್ಯಾಲಯದಲ್ಲಿ ಸಂಸ್ಕೃತದಲ್ಲಿ ಭಾಷಣ ಮಾಡುತ್ತಾರೆ. ಅಲ್ಲಿನ ಜನರೆಲ್ಲ ಮೆಚ್ಚುಗೆ ಸೂಸಿ ದೇಣಿಗೆ ನೀಡಿದಾಗ ಒಟ್ಟು ಮೂರು ರೂಪಾಯಿಗಳಾಗುತ್ತವೆ. "ನಾನು ಬ್ರಾಹ್ಮಣನಾಗಿರುವುದರಿಂದ ಪುರೋಹಿತನಂತೆ ಈ ದಕ್ಷಿಣೆಗಳನ್ನು ಹೇಗೆ ಸ್ವೀಕರಿಸಲಿ?" – ಎಂದಾಗ ಅಲ್ಲಿದ್ದ ಧರ್ಮಪಾಲರು, "ನೀನು ವಿದ್ಯಾರ್ಥಿಯಾಗಿರುವುದರಿಂದ ಪುಸ್ತಕಗಳ ಖರೀದಿಗೆ ಇದನ್ನು ಬಳಸಿಕೋ" ಎನ್ನುತ್ತಾರೆ. ಕೊಸಾಂಬಿಯವರ ನಿಸ್ಪೃಹತೆ ಅನನ್ಯವಾಗಿತ್ತು. ನಂತರ ತೀವ್ರ ಅನಾರೋಗ್ಯದಿಂದಾಗಿ ೧೯೦೩ರಲ್ಲಿ ಭಾರತಕ್ಕೆ ಮರಳುತ್ತಾರೆ. ಅಲ್ಲಿಂದ ಬೌದ್ಧಧರ್ಮದ ಅಧ್ಯಯನ ಮಾಡಲು ಬರ್ಮಾ ದೇಶಕ್ಕೆ ಹೋಗುತ್ತಾರೆ. ಅಲ್ಲಿ ಮಾಂಸಾಹಾರ ಸರ್ವತ್ರವಾಗಿದ್ದರಿಂದ ಅವರಿಗೆ ಅನ್ನ ಮಾತ್ರ ಸಸ್ಯಾಹಾರಿ ರೂಪದಲ್ಲಿ ದೊರೆಯುತ್ತಿತ್ತು. ಬೌದ್ಧ ವಿಹಾರದ ಮರಗಳ ಎಲೆಗಳನ್ನು ಈರುಳ್ಳಿಯ ಜತೆ ಬೇಯಿಸಿ ಅದರ ಕಷಾಯದೊಂದಿಗೆ ಅನ್ನವನ್ನು ತಮ್ಮ ಸಂಗಾತಿಯಾದ ಜರ್ಮನ್ ಬೌದ್ಧ ಬಿಕ್ಕು ಧ್ಯಾನ ತ್ರಿಲೋಕದೊಂದಿಗೆ ಸೇವಿಸುತ್ತಿದ್ದರು. ಅಲ್ಲಿಂದ ಕುಶಿನಗರಕ್ಕೆ ಪ್ರಯಾಣ ಬೆಳೆಸಿದರು. ನಡುವೆ ಅಮರಾವತಿಯಲ್ಲಿ ಸಾಮಾಜಿಕ, ರಾಜಕೀಯ ಸುಧಾರಕರಾದ ಶ್ರೀ ದಾದಾಸಾಹೇಬ ಖಾಪರ್ಡೆಯವರನ್ನು ಕೊಸಾಂಬಿಯವರು ಭೇಟಿಯಾಗಿ ಅವರ ಒತ್ತಾಯಕ್ಕೆ ಮಣಿದು ಬೌದ್ಧಧರ್ಮ ಕುರಿತು




**ಕೇಂದ್ರದಿಂದ ರಾಜ್ಯಕ್ಕೆ ಬರೋದ್ರೊಳಗೆ ಮಧ್ಯದಲ್ಲಿ ಎಷ್ಟು ರಾಜಕೀಯರ ಕೈ ಸೇರಿ ಬರಬೇಕೂ ಅಲ್ವಾ ರಂಗಣ್ಣ...!**

ಉಪನ್ಯಾಸ ನೀಡಿದರು. ಹರಿಸೀತಾರಾಮ ದೀಕ್ಷಿತ್ ಮತ್ತು ದಾಭೋಲ್ಕರ್ ಎಂಬುವರನ್ನು ಕೊಸಾಂಬಿ ಮುಂಬಯಿಯಲ್ಲಿ ಭೇಟಿಯಾದರು. ೧೯೦೪ರಲ್ಲಿ ಕುಶಿನಗರವನ್ನು ತಲುಪಿದರು. ಇಲ್ಲಿ ಭಗವಾನ್ ಬುದ್ಧನ ಧ್ಯಾನ ಪದ್ಧತಿಗಳಲ್ಲಿ ಪರಿಣತಿ ಪಡೆದರು. ಇದೇ ಸಮಯದಲ್ಲಿ ವಿಶ್ವಧರ್ಮ ಸಮ್ಮೇಳನದಲ್ಲಿ ಪಾಲ್ಗೊಂಡಿದ್ದ ಧರ್ಮಪಾಲರು ಭಾರತಕ್ಕೂ ಬಂದಿದ್ದರು. ಆಗ ಕೊಸಾಂಬಿ ಅವರೊಂದಿಗೆ ಸಾರನಾಥದಲ್ಲಿರುವ ಚಕ್ರವರ್ತಿ ಅಶೋಕನ ಸ್ತೂಪದ ಇತಿಹಾಸ ಹೇಳಲು ಹೋದಾಗ ಸ್ಥಳೀಯರು ಅದನ್ನು ಒಪ್ಪದೆ ತಮಾಷೆ ಮಾಡಿ ನಕ್ಕು ಅದು ಗಾಣಿಗನೊಬ್ಬನ ಗಿರಣಿ ಆಗಿತ್ತೆಂದು ಸಾಧಿಸುತ್ತಾರೆ. ಬೌದ್ಧಧರ್ಮದ ಮೇಲೆ ನಡೆದ ಧಾರ್ಮಿಕ ಅತಿಕ್ರಮಗಳನ್ನು ಕೊಸಾಂಬಿ ಉದಾಹರಣೆಗಳ ಮೂಲಕ ನೀಡುತ್ತಾರೆ. ಭಗವಾನ್ ಬುದ್ಧನ ಜನ್ಮಸ್ಥಳವಾದ ಲುಂಬಿನಿ ಗ್ರಾಮಕ್ಕೆ ಭೇಟಿ ನೀಡಿದ ಕೊಸಾಂಬಿ ಅಲ್ಲಿ ನಡೆಯುತ್ತಿದ್ದ ಪ್ರಾಣಿಬಲಿಯಿಂದ ತೀವ್ರ ಕ್ಷೋಭೆಗೊಳ್ಳುತ್ತಾರೆ.

ಕಲ್ಕತ್ತಾಗೆ ಮರಳಿದ ಕೊಸಾಂಬಿ ಅಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾದ ಹರಿನಾಥ್ ಡೇ ಮತ್ತು ಮನಮೋಹನ ಘೋಷ್ (ಅರವಿಂದ ಘೋಷ್‌ರವರ ಅಣ್ಣ)ರವರ ಸ್ನೇಹ ಸಂಪಾದಿಸಿ, ಅವರ ನೆರವಿನಿಂದ ಬೌದ್ಧಧರ್ಮದ ಮತ್ತಷ್ಟು ಅಧ್ಯಯನಕ್ಕೆ ಸಿಕ್ಕಿಂಗೆ ತೆರಳಿದರು. ಸಿಕ್ಕಿಂ ಅರಸನ ಮಠದಲ್ಲಿ ಬಹಳ ಜ್ಞಾನಿ ಎಂದು ಪ್ರಸಿದ್ಧಿ ಪಡೆದ ಲಾಮಾನೊಂದಿಗೆ ಕೊಸಾಂಬಿಯವರು ಉಳಿದುಕೊಳ್ಳುತ್ತಾರೆ. ಲಾಮಾ ಕೊಸಾಂಬಿಯವರನ್ನು ಊಟಕ್ಕೆ ಆಮಂತ್ರಿಸುತ್ತಾನೆ. ಕೊಸಾಂಬಿ ತಾನು ಪೂರ್ಣ ಸಸ್ಯಾಹಾರಿಯಾದ್ದರಿಂದ ಮಾಂಸ ಸೇವಿಸುವುದಿಲ್ಲವೆಂದು ಲಾಮಾ ಗುರುವಿಗೆ ಹೇಳಿರುತ್ತಾರೆ. ಊಟಕ್ಕೆ ಕುಳಿತಾಗ ಕೊಸಾಂಬಿ ಅವರಿಗೆ ತನ್ನ ತಟ್ಟೆಯಲ್ಲಿರುವುದು ಮಾಂಸವೆಂದು ಸಂಶಯ ಬರುತ್ತದೆ. ಅದರ ಕುರಿತು ಕೇಳಿದಾಗ ಲಾಮಾ, "ನೀವು ಮಾಂಸ ಅಥವಾ ಮೀನು ತಿನ್ನುವುದಿಲ್ಲವೆಂದು ನನ್ನ ಶಿಷ್ಯನ ಬಳಿ ಹೇಳಿಕಳಿಸಿದ್ದರಲ್ಲ! ಆದ್ದರಿಂದ ಈ ತರಕಾರಿ ಪಲ್ಯವನ್ನು ನಿಮಗಾಗಿ ಅತ್ಯಂತ ಕಷ್ಟದಿಂದ ತಯಾರಿಸಲಾಗಿದೆ" ಎಂದರು. "ಹಾಗಾದರೆ ಇದನ್ನು ಯಾವುದರಿಂದ ತಯಾರಿಸಲಾಗಿದೆ?" ಎಂದು ಕೊಸಾಂಬಿ ಕೇಳಿದರು. ಅದಕ್ಕೆ ಲಾಮಾ "ಇದು ಬರೀ ಕಪ್ಪೆಗಳಿಂದ ಮಾಡಿದ ಪಲ್ಯ. ನೀವು ಸಂದೇಹಪಡುವ ಅಗತ್ಯವೇ ಇಲ್ಲ. ಇಲ್ಲಿನ ಕಪ್ಪೆಗಳು ನಿಮ್ಮ ಭಾರತದ ಕಪ್ಪೆಗಳ ಹಾಗೆ ಕೊಳಕಾಗಿರುವುದಿಲ್ಲ. ಅದನ್ನು ನಿಮಗಾಗಿಯೇ ಮಾಡಿರುವುದು" ಎಂದರು. ಕೊಸಾಂಬಿ ಕಂಗಾಲಾಗಿ ಹೋದರು. ಮುಂದೆ ಸಿಕ್ಕಿಂನಲ್ಲಿರುವಷ್ಟು ಕಾಲ ತಾನು ಮೀನು, ಮಾಂಸ ಮತ್ತು ಕಪ್ಪೆ ತಿನ್ನುವುದಿಲ್ಲ ಎಂದು ಹೇಳುತ್ತಿದ್ದರು.

ಹರಿನಾಥ್ ಡೇ ಅವರ ಪ್ರೀತಿಪೂರ್ವಕ ಒತ್ತಾಯದಿಂದ ಕಲ್ಕತ್ತಾಗೆ ಮರಳಿದ ಕೊಸಾಂಬಿ ಹರಿನಾಥ್, ಮನಮೋಹನ ಘೋಷ್, ಸತ್ಯೇಂದ್ರ ಠಾಕೂರ್ (ರವೀಂದ್ರನಾಥ್ ಠಾಕೂರರ ಅಣ್ಣ)ರ ಬೆಂಬಲ ಹಾಗೂ ಸಹಾಯದಿಂದ ನ್ಯಾಷನಲ್ ಕಾಲೇಜಿನ ವಿಶ್ವವಿದ್ಯಾಲಯದ ಪಠ್ಯಕ್ರಮದಲ್ಲಿ ಪಾಲಿಯನ್ನು ಅಳವಡಿಸಲು ಯಶಸ್ವಿಯಾದರು. ಈ ಕಾಲೇಜಿನ ಪ್ರಾಂಶುಪಾಲರಾಗಿ ಶ್ರೀ ಅರವಿಂದೋ ಘೋಷ್ ಇದ್ದರು. ಪಾಲಿ ಭಾಷೆಯ ಉಪನ್ಯಾಸಕರಾಗಿ ಕೊಸಾಂಬಿ ಕಲ್ಕತ್ತೆಯಲ್ಲಿ ಖ್ಯಾತಿ ಪಡೆಯುತ್ತಾರೆ.

ಲೌಕಿಕ ಲಾಭ ಮತ್ತು ಕರ್ತವ್ಯದಲ್ಲಿ ಕೊಸಾಂಬಿ ಎಂದಿಗೂ ಎರಡನೆಯದನ್ನೇ ಆಯ್ಕೆ ಮಾಡಿಕೊಂಡರು. ಪಾಲಿ ಭಾಷೆಯ ಪುನಶ್ಚೇತನ, ಪ್ರಚಾರ ಮತ್ತು ಭಗವಾನ್ ಬುದ್ಧ ಮತ್ತು ಬೌದ್ಧಧರ್ಮದ ಪ್ರಸಾರ, ಅದರ ಪುನರುಜ್ಜೀವನವನ್ನು ಕೊಸಾಂಬಿ ತಮ್ಮ ಜೀವನದ ಆದ್ಯ ಕರ್ತವ್ಯ ಎಂದು ತಿಳಿದಿದ್ದರು. ಇದರಿಂದ ಅವರು ಕೊಂಚವೂ ವಿಚಲಿತರಾಗಲಿಲ್ಲ. ೧೯೦೭ರಲ್ಲಿ ಸಿಲೋನಿನಲ್ಲಿ ತಿಂಗಳಿಗೆ ಎಪ್ಪತ್ತು ರೂಪಾಯಿ ಆದಾಯದೊಂದಿಗೆ ಆರಾಮವಾಗಿ ತನ್ನ ಕುಟುಂಬದೊಂದಿಗೆ ಬದುಕಬಹುದಾಗಿದ್ದ ಕೊಸಾಂಬಿ ಅದನ್ನು ತ್ಯಜಿಸಿದರು. ೧೯೦೮ರಲ್ಲಿ ನೂರರಿಂದ ಎರಡುನೂರು ರೂಪಾಯಿಗೆ ಏರಿಸಿದ ತಮ್ಮ ಅಧ್ಯಾಪಕ ವೃತ್ತಿಯ ವೇತನವನ್ನು ಬಿಟ್ಟು ಬಡೋದೆಯ ಮಹಾರಾಜರು ಶ್ರೀ ಸಯ್ಯಾಜಿರಾವ ಗಾಯಕವಾಡರು

## ಉಯ್ಯಾಲೆ

ತೂಗು ಉಯ್ಯಾಲೆಯಲ್ಲಿ
ಮೈತ್ರಿ ಸರಕಾರ
ತೊರೆಯಲು ಮನಸ್ಸಿಲ್ಲ
ಯಾರಿಗೂ ಅಧಿಕಾರ
ಕಾಲು ಎಳೆಯುವುದೇ
ಆಗಿದೆ ನಿರಂತರ

**ಎ. ಜಿ. ರತ್ನಕಾಳೇಗೌಡ**
ಬೆಂಗಳೂರು – ೫೬೦ ೦೯೭

ನೀಡಿ ಕೇವಲ ಐವತ್ತು ರೂಪಾಯಿಯ ಸ್ಟೈಫಂಡ್ ಸ್ವೀಕರಿಸಲು ಒಪ್ಪಿಕೊಂಡು ಕರ್ತವ್ಯಶೀಲರಾದರು. ಕಲ್ಕತ್ತೆಯ ನೌಕರಿ ಬಿಡುವಾಗ ಕೊಸಾಂಬಿ, "ಇಂದು ನಾನು ಬುದ್ಧ ಮತ್ತು ಬೋಧಿಸತ್ವರ ಒಲವಿನ ಮೂಲಕ ಲಾಭದ ಆಮಿಷವನ್ನು ಮೀರಿರುವುದಕ್ಕಾಗಿ ಬಹಳ ಸಂತೋಷಪಡುತ್ತಿದ್ದೇನೆ" ಎಂದು ಹೇಳಿದ್ದಾರೆ. ಸಯ್ಯಾಜಿರಾವ ಗಾಯಕವಾಡ ಕೊಸಾಂಬಿ ಅವರಿಗೆ ಪಾಲಿ ಮತ್ತು ಬೌದ್ಧಧರ್ಮದಲ್ಲಿ ಮುಕ್ತವಾಗಿ ಕರ್ತವ್ಯ ಮಾಡಲು ಅನುಕೂಲ ಮಾಡಿಕೊಟ್ಟರು. ಇದರಿಂದಾಗಿ ಕೊಸಾಂಬಿ ಮುಂದೆ ಪ್ರೊ॥ ವುಡ್ಸ್‌ರ ಮೂಲಕ ಅಮೇರಿಕಾಕ್ಕೆ 'ವಿಶುದ್ಧಿಮಗ್ಗ'ದ ಪರಿಷ್ಕಾರ ಕಾರ್ಯಕ್ಕೆಂದು ಹೋಗುತ್ತಾರೆ. ಆ ದೇಶಕ್ಕೆ ಹೋಗುತ್ತಿರುವಾಗ ಮಾರ್ಗಮಧ್ಯದಲ್ಲಿ ಲಿವರ್‌ಪೂಲ್ ನಗರದಲ್ಲಿ ಡಚ್ ವ್ಯಕ್ತಿಯೊಬ್ಬ ಕೊಸಾಂಬಿಯವರಿಗೆ ಸ್ನೇಹಿತನಾಗುತ್ತಾನೆ. ಆ ನಗರದಲ್ಲಿ ತಿರುಗಾಡುತ್ತಿರುವಾಗ ಆತ ಕಾರ್ಲ್ ಮಾರ್ಕ್ಸ್‌ರ ಬಗ್ಗೆ ಹೇಳುತ್ತಾನೆ. ಕೊಸಾಂಬಿ ಸಹಜವಾಗಿ, "ಈ ಕಾರ್ಲ್ ಮಾರ್ಕ್ಸ್ ಯಾರು?" ಎಂದು ಕೇಳುತ್ತಾರೆ. ಆತನಿಗೆ ಆಶ್ಚರ್ಯವಾಗಿ "ಕಾರ್ಲ್ ಮಾರ್ಕ್ಸ್ ನಿಮಗೆ ಗೊತ್ತಿಲ್ಲವೇ?! ಆತ ಸಮಾಜವಾದದ ಸ್ಥಾಪಕ" ಎಂದು ವಿವರಿಸುತ್ತಾನೆ. ಕೊಸಾಂಬಿ "ಈ ಸಮಾಜವಾದ ಎಂದರೇನು? ಭಾರತದಲ್ಲಿ ಇಂತಹದ್ದೊಂದು ಚಳವಳಿ ಇಲ್ಲವಲ್ಲ?" ಎಂದು ಪ್ರತಿಕ್ರಿಯಿಸುತ್ತಾರೆ. ಆಗ ಆತ ಅವರನ್ನು ಸಮೀಪದ ಪುಸ್ತಕದಂಗಡಿಗೆ ಕರೆದುಕೊಂಡು ಹೋಗಿ ಬ್ಯಾಕ್ ಫೋರ್ಡ್ ಬರೆದ 'ಮೆರ‍್ರಿ ಇಂಗ್ಲೆಂಡ್' ಎಂಬ ಪುಸ್ತಕವನ್ನು ಖರೀದಿಸಿ ನೀಡುತ್ತಾನೆ. ಎರಡು ಬಾರಿ ಇದನ್ನು ಓದಿದ ಕೊಸಾಂಬಿ ಅವರಿಗೆ ಸಮಾಜವಾದದ ಕುರಿತು ತಿಳಿಯುವ ಆಸಕ್ತಿ ತೀವ್ರವಾಗಿ ಬೆಳೆಯುತ್ತದೆ. ಅಮೇರಿಕೆಯನ್ನು ತಲುಪಿದ ಬಳಿಕ ಕಾರ್ಲ್ ಮಾರ್ಕ್ಸ್‌ರ ಜೀವನ ಚರಿತ್ರೆಯನ್ನು ಓದಿದರು. ಇವರನ್ನು ಅಮೇರಿಕೆಗೆ ಕರೆಸಿಕೊಂಡ ಪ್ರೊ॥ ವುಡ್ಸ್ ಒಳ್ಳೆಯ ವ್ಯಕ್ತಿಯಾಗಿದ್ದು, ಕೊಸಾಂಬಿ ಅವರಿಗೆ ಮೌಲಿಕ ಸಹಾಯ ಮಾಡಿದರು. ಆದರೆ ವಿಶುದ್ಧಿಮಗ್ಗದ ಪರಿಷ್ಕಾರ, ಸಂಪಾದನೆಯಲ್ಲಿ ಇವರ ಜೊತೆ ಇದ್ದ ಪ್ರೊ॥ ಲೆನ್‌ಮನ್ ಸಂಕುಚಿತ ಮನಸ್ಸಿನ ವ್ಯಕ್ತಿಯಾಗಿದ್ದ. ಕೊಸಾಂಬಿ ಅವರೊಂದಿಗೆ ಈತನ ಸಂಬಂಧ ಹಾರ್ದಿಕವಾಗಿರಲಿಲ್ಲ. ವಿಶುದ್ಧಿಮಗ್ಗವನ್ನು ಕೇವಲ ತನ್ನ ಹೆಸರಿನಲ್ಲೇ ಪ್ರಕಟಿಸಬೇಕೆಂದು ಹಠ ಹಿಡಿದಿದ್ದ. ಆದರೆ ಇದಕ್ಕೆ ಧನಸಹಾಯ ನೀಡಿದ ವಾರೆನ್‌ರ ಹೆಸರಿನೊಂದಿಗೆ ಕೆಲಸ ಮಾಡಿದ ತನ್ನ ಹೆಸರನ್ನು ಸೇರಿಸಿ ವಾರೆನ್-ಲೆನ್‌ಮನ್-ಕೊಸಾಂಬಿ ಎಂದು ಪ್ರಕಟಿಸಬೇಕೆಂದು ಕೊಸಾಂಬಿ ಸಕಾರಣಗಳನ್ನು ನೀಡಿದರು. ಇದರಿಂದ ಲೆನ್‌ಮನ್ ಕೋಪದಿಂದ ಉರಿದು ಕೊಸಾಂಬಿಯವರಿಗೆ ಶಾಪಹಾಕತೊಡಗಿದ. ಆದರೆ ೧೯೫೦ರಲ್ಲಿ ಹಾರ್ವರ್ಡ್ ವಿಶ್ವವಿದ್ಯಾಲಯ ಹೊರತಂದ ವಿಶುದ್ಧಿಮಗ್ಗದ ಗ್ರಂಥದಲ್ಲಿ ಸಂಪಾದಕರಾಗಿ ಎಚ್. ಸಿ. ವಾರೆನ್ ಮತ್ತು ಪರಿಷ್ಕಾರ ಮಾಡಿದ ಧರ್ಮಾನಂದ ಕೊಸಾಂಬಿಯವರ ಹೆಸರು ಉಲ್ಲೇಖಿಸಲಾಗಿದೆಯೇ ಹೊರತು ಲೆನ್‌ಮನ್ ಹೆಸರನ್ನು ಎಲ್ಲಿಯೂ ಪ್ರಸ್ತಾಪ ಮಾಡಿಲ್ಲ.

ಧರ್ಮಾನಂದ ಕೊಸಾಂಬಿ ಅಮೇರಿಕಾಕ್ಕೆ ತಾನು ಹೋಗಿದ್ದರಿಂದ ಸಮಾಜ ವಿಜ್ಞಾನದಲ್ಲಿ ಅಪಾರವಾದ ಆಸಕ್ತಿ ಬಂದಿತೆಂದು ಹೇಳುತ್ತಾರೆ. ಈ ಕುರಿತು ಅವರು ಅನೇಕ ಗ್ರಂಥಗಳನ್ನು ಓದಿದರು. ಅವರ ಚಿಂತನಾಕ್ರಮದ ಮೇಲೆ ಸಮಾಜವಾದ ತೀವ್ರ ಪರಿಣಾಮ ಬೀರಿತು. ಕೆಳವರ್ಗದ ಕಾರ್ಮಿಕ ವ್ಯಕ್ತಿ ಹೇಗೆ ತನ್ನ ಆಧ್ಯಾತ್ಮಿಕ, ಧಾರ್ಮಿಕ ಪ್ರಗತಿಯನ್ನು ಸಾಧಿಸಬಲ್ಲ ಎಂದು ಚಿಂತಿಸತೊಡಗಿದರು. ಒಂದು ವೇಳೆ ನಾನು ಭಾರತದಲ್ಲೇ ಉಳಿದಿದ್ದರೆ ನನ್ನ ಬದುಕು ಧಾರ್ಮಿಕ ಚಿಂತನೆಗಳಲ್ಲೇ ಕಳೆಯುತ್ತಿತ್ತು ಎನ್ನುವ ಧರ್ಮಾನಂದ ಕೊಸಾಂಬಿಯವರು ಪಾಶ್ಚಾತ್ಯ ವಿಜ್ಞಾನಿಗಳ ಮರುವ್ಯಾಖ್ಯಾನದಿಂದ ಸಂಪ್ರದಾಯ, ಧರ್ಮ ಮತ್ತು ಮನುಷ್ಯನ ವಾಸ್ತವದ ಬದುಕನ್ನು ಸ್ಪಷ್ಟವಾಗಿ ನೈಜ ದೃಷ್ಟಿಯಿಂದ ನೋಡುವ ಹೊಸ ದೃಷ್ಟಿಕೋನವನ್ನು ಬೆಳೆಸಿಕೊಂಡರು. ಪ್ರಾಚೀನ ಚೀನಾದ ಜ್ಞಾನಯಾತ್ರಿಕ ಹ್ಯೂ ಯನ್ ತ್ಸಾಂಗ್‌ನ ಪ್ರವಾಸ, ಪ್ರಯಾಸ, ಜಿದ್ದಿಗೆ, ಸಿದ್ಧಿಗೆ ಸರಿಮಿಗಿಲಾಗಿ ನಿವೇದನದುದ್ದಕ್ಕೂ ಕೊಸಾಂಬಿಯವರ ಜೀವನ ಹರಡಿಕೊಂಡಿದೆ.

ಅಪರೂಪದ ಆತ್ಮಕಥೆಯನ್ನು ಮೂಲ ಮರಾಠಿ ಕೃತಿಯೊಂದಿಗೆ ಪರಿಶೀಲಿಸಿ ಇಂಗ್ಲಿಷ್‌ನಿಂದ ಕನ್ನಡಕ್ಕೆ ಸೊಗಸಾಗಿ, ಸಮರ್ಥವಾಗಿ ಅನುವಾದಿಸಿರುವ ಡಾ॥ ಗೀತಾ ಶೆಣ್ಯೆರವರಿಗೂ ಪ್ರಕಟಿಸಿದ ನವಕರ್ನಾಟಕ ಪಬ್ಲಿಕೇಷನ್ಸ್‌ರವರಿಗೂ ಹೃತ್ಪೂರ್ವಕವಾದ ಧನ್ಯವಾದಗಳು ಸಲ್ಲುತ್ತವೆ.

**ರಾಜಕುಮಾರ ಎಸ್. ಸಂಕಪಾಳ**
ಸರಕಾರಿ ಪದವಿ ಪೂರ್ವ ಕಾಲೇಜು
ಮಜಲಟ್ಟಿ ಅಂಚೆ - ೫೯೧ ೨೨೭, ಚಿಕ್ಕೋಡಿ ತಾಲೂಕು
ಬೆಳಗಾವಿ ಜಿಲ್ಲೆ

## ಅಭಿನಂದನೆ

ಡಾ॥ ಗಂಗಾರಾಂ ಚಂಡಾಳ ಬಂಡಾಯ ಸಾಹಿತಿ, ಪ್ರಾಂಶುಪಾಲರು ಸರ್ಕಾರಿ ಪಾಲಿಟೆಕ್ನಿಕ್ ನಾಗಮಂಗಲ, ಮಂಡ್ಯ ಜಿಲ್ಲೆ, ಇವರು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಲ್ಲಿಸಿರುವ ಅಮೂಲ್ಯ ಸೇವೆಗಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿಯು '೨೦೧೮ರ ಸಾಹಿತ್ಯ ಶ್ರೀ ಪ್ರಶಸ್ತಿ'ಯನ್ನು ಇತ್ತೀಚಿಗೆ ಬೆಂಗಳೂರಿನಲ್ಲಿ ನೀಡಿ ಪುರಸ್ಕರಿಸಿದೆ. ಡಾ॥ ಗಂಗಾರಾಂ ಅವರಿಗೆ 'ಹೊಸತು' ಬಳಗದ ಅಭಿನಂದನೆಗಳು.




ನವಕರ್ನಾಟಕ ಪ್ರಕಟಿಸಿರುವ 'ಕಾಳಿ ಗಂಗಾ' (ಕೊಂಕಣಿ ಮೂಲ : ಮಹಾಬಳೇಶ್ವರ ಸೈಲ್; ಕನ್ನಡಕ್ಕೆ : ಗೀತಾ ಶೆಣ್ಯೆ) ಕಾದಂಬರಿಯ ಬಿಡುಗಡೆ ಕಾರ್ಯಕ್ರಮ ಮಂಗಳೂರಿನ ವಿಶ್ವಕೊಂಕಣಿ ಕೇಂದ್ರದಲ್ಲಿ ೨೫-೫-೨೦೧೮ರಂದು ನಡೆಯಿತು. 'ಕವಿತಾ ಟ್ರಸ್ಟ್' ಹಾಗೂ 'ಕೊಂಕಣಿ ಭಾಸ ಆನಿ ಸಂಸ್ಕೃತಿ ಪ್ರತಿಷ್ಠಾನ'ದ ಆಶ್ರಯದಲ್ಲಿ ಏರ್ಪಟ್ಟ ಈ ಸಮಾರಂಭದ ವೇದಿಕೆಯಲ್ಲಿ ಡಾ॥ ಗೀತಾ ಶೆಣ್ಯೆ, ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಬಸ್ತಿ ವಾಮನ ಶೆಣ್ಯೆ, ಪುಸ್ತಕ ಬಿಡುಗಡೆ ಮಾಡಿದ ಖ್ಯಾತ ಕೊಂಕಣಿ ಸಾಹಿತಿ ಶ್ರೀ ದಾಮೋದರ ಮೌಜ್ಹೋ, ನವಕರ್ನಾಟಕದ ಶ್ರೀ ಎ. ರಮೇಶ ಉಡುಪ ಉಪಸ್ಥಿತರಿದ್ದರು.

# ನರೇಂದ್ರ ಮೋದಿಯವರ ಸೆಕೆಂಡ್ ಇನ್ನಿಂಗ್ಸ್ ಆರಂಭ...

**ಲೋ**ಕಸಭೆಯ ಚುನಾವಣೆಯ ಫಲಿತಾಂಶಗಳು ಹೊರಬಿದ್ದಿವೆ. ೨೦೧೪ಕ್ಕಿಂತಲೂ ಹೆಚ್ಚಿನ ಸ್ಥಾನಗಳನ್ನು ಪಡೆದು ಮೋದಿಯವರ ಭಾಜಪ ರಾರಾಜಿಸುತ್ತಿದೆ. ಪಕ್ಷಕ್ಕಿಂತಲೂ ಮೋದಿಯವರೇ ದೊಡ್ಡವರು. ಎಲ್ಲ ಅಧಿಕಾರವೂ ಅವರದ್ದೇ, ಎಲ್ಲ ಅಧಿಕಾರವೂ ಅವರಲ್ಲಿಯೇ ಕೇಂದ್ರೀಕೃತವಾಗಿದೆ. ಇದು ಸರ್ವಾಧಿಕಾರದ ಲಕ್ಷಣ. ೧೭ ರಾಜ್ಯಗಳಲ್ಲಿ ಖಾತೆಯನ್ನೇ ತೆರೆಯದ ಕಾಂಗ್ರೆಸ್ ದಾರುಣ ಪರಿಸ್ಥಿತಿಯಲ್ಲಿದೆ. ಉತ್ತರ ಪ್ರದೇಶದ ಅಮೇಥಿಯಲ್ಲಿ ಕಾಂಗ್ರೆಸ್ ಅಧ್ಯಕ್ಷ ರಾಹುಲ್ ಗಾಂಧಿ ಭಾಜಪದ ಸ್ಮೃತಿ ಇರಾನಿ ವಿರುದ್ಧ ಪರಾಭವಗೊಂಡಿದ್ದಾರೆ. ಉತ್ತರ ಪ್ರದೇಶದಲ್ಲಿ ಕಾಂಗ್ರೆಸ್ ಕೇವಲ ಒಂದು ಕ್ಷೇತ್ರ ಗೆದ್ದಿದ್ದು, ಯುಪಿಎ ಅಧ್ಯಕ್ಷೆ ಸೋನಿಯಾ ಗಾಂಧಿಯವರು ತಮ್ಮ ರಾಯ್ ಬರೇಲಿ ಕ್ಷೇತ್ರ ಉಳಿಸಿಕೊಂಡಿದ್ದಾರೆ. ಕಾಂಗ್ರೆಸ್ಸಿನ ವರಿಷ್ಠ ನಾಯಕ ದಿಗ್ವಿಜಯ ಸಿಂಗ್ ಭಾಜಪದ ಪ್ರಜ್ಞಾ ಸಿಂಗ್ ಠಾಕೂರ್ ವಿರುದ್ಧ ಮೂರು ಲಕ್ಷ ಓಟುಗಳ ಅಂತರದಿಂದ ಸೋಲನ್ನು ಅನುಭವಿಸಿದ್ದಾರೆ. ಕೇರಳದಲ್ಲಿ ಭಾಜಪ ಒಂದು ಸ್ಥಾನವನ್ನೂ ಗೆಲ್ಲಲಿಲ್ಲ ಅನ್ನುವುದು ಅಲ್ಪ ಸಮಾಧಾನ. ಆದರೆ ಆ ರಾಜ್ಯದ ಆಡಳಿತಾರೂಢ ಸಿಪಿಎಂ ನೇತೃತ್ವದ ಎಲ್‌ಡಿಎಫ್ ಹೀನಾಯ ಸೋಲು ಕಂಡಿದೆ. ಒಟ್ಟು ೨೦ ಲೋಕಸಭಾ ಕ್ಷೇತ್ರಗಳಲ್ಲಿ ಕಾಂಗ್ರೆಸ್ ನಾಯಕತ್ವದ ಯುಡಿಎಫ್ ೧೯ ಸ್ಥಾನಗಳನ್ನು ಗೆದ್ದುಕೊಂಡಿದೆ. ಕೇವಲ ಒಂದು ಸ್ಥಾನ ಮಾತ್ರ ಸಿಪಿಎಂ ಪಾಲಿಗೆ ಲಭಿಸಿದೆ. ವಯನಾಡಿನಲ್ಲಿ ರಾಹುಲ್ ಗಾಂಧಿಯವರು ಗೆಲುವು ಸಾಧಿಸಿದ್ದಾರೆ.

ಕರ್ನಾಟಕದಲ್ಲಿ ಕಾಂಗ್ರೆಸ್ ಧೂಳೀಪಟವಾಗಿದೆ. ರಾಜ್ಯದ ೨೮ ಲೋಕಸಭಾ ಕ್ಷೇತ್ರಗಳಲ್ಲಿ ಭಾಜಪ ೨೫ ಕ್ಷೇತ್ರಗಳಲ್ಲಿ ಗೆಲುವು ಪಡೆದಿದೆ. ಕಾಂಗ್ರೆಸ್ ಮತ್ತು ಜೆಡಿಎಸ್‌ಗೆ ಕೇವಲ ಒಂದೊಂದು ಸ್ಥಾನಗಳು ದೊರಕಿವೆ. ಎಚ್.ಡಿ. ದೇವೇಗೌಡ, ಮಲ್ಲಿಕಾರ್ಜುನ ಖರ್ಗೆ, ವೀರಪ್ಪ ಮೊಯಿಲಿ ಮೊದಲಾದ ಪ್ರಮುಖರು ಸೋತವರಲ್ಲಿ ಕೆಲವರು. ಮಂಡ್ಯ ಕ್ಷೇತ್ರದಲ್ಲಿ ಪಕ್ಷೇತರ ಸುಮಲತಾ ಅಂಬರೀಷ್ ಗೆಲುವು ಪಡೆದರು. ಮಹಿಳೆಯೊಬ್ಬರು ಪಕ್ಷೇತರವಾಗಿ ಸ್ಪರ್ಧಿಸಿ ಲೋಕಸಭೆ ಪ್ರವೇಶಿಸಿದ ಇತಿಹಾಸವನ್ನು ದೇಶದಲ್ಲಿ ಮೊಟ್ಟಮೊದಲ ಬಾರಿಗೆ ಸುಮಲತಾ ನಿರ್ಮಿಸಿದ್ದಾರೆ.

ಕಾಂಗ್ರೆಸ್ – ಜೆಡಿಎಸ್ ಮೈತ್ರಿ ಸರ್ಕಾರದ ದುರಾಡಳಿತ, ಒಳಜಗಳ, ಶಾಸಕರುಗಳ ಅಧಿಕಾರ ದಾಹ ಮತ್ತು ದೇವೇಗೌಡರ ಕೌಟುಂಬಿಕ ರಾಜಕಾರಣ ಮುಂತಾದವುಗಳೇ ಭಾಜಪ ಕರ್ನಾಟಕದಲ್ಲಿ ಅತಿ ಹೆಚ್ಚಿನ ಸ್ಥಾನಗಳನ್ನು ಗೆಲ್ಲಲು ಕಾರಣವಾದವು. ಮೋದಿ – ಅಮಿತ್ ಶಾರವರ ಕೆಲಸ ಸುಲಭವಾಯಿತು.

ಪಶ್ಚಿಮ ಬಂಗಾಲದಲ್ಲಿ ಭಾಜಪ ದಾಪುಗಾಲಲ್ಲಿ ಮುನ್ನಡೆ ಸಾಧಿಸಿದೆ. ಒಟ್ಟು ೪೨ ಲೋಕಸಭಾ ಕ್ಷೇತ್ರಗಳು ಇರುವ ಪಶ್ಚಿಮ ಬಂಗಾಲದಲ್ಲಿ ೧೮ ಕ್ಷೇತ್ರಗಳಲ್ಲಿ ಭಾಜಪ ಗೆದ್ದಿದೆ. ೨೩ ಸ್ಥಾನಗಳನ್ನು ತೃಣಮೂಲ ಕಾಂಗ್ರೆಸ್ ತನ್ನದಾಗಿಸಿಕೊಂಡಿದೆ. ಶೇಕಡಾ ೪೦ರಷ್ಟು ಮತಗಳನ್ನು ಭಾಜಪ ಗಳಿಸಿದೆ. ಒಂದೇ ಒಂದು ಸ್ಥಾನದಲ್ಲೂ ಸಿಪಿಎಂ ಗೆಲುವು ಸಾಧಿಸಲಾಗಲಿಲ್ಲ. ಈ ಹಿಂದೆ ೨೦೧೪ರ ಚುನಾವಣೆಯಲ್ಲಿ ಭಾಜಪಕ್ಕೆ ಪಶ್ಚಿಮ ಬಂಗಾಲದಲ್ಲಿ ದೊರಕಿದ್ದು ಕೇವಲ ಎರಡು ಸ್ಥಾನಗಳು ಮಾತ್ರ. ಈಗ ಅದು ೧೮ಕ್ಕೆ ಏರಿದೆ. ಸುಮಾರು ಶೇಕಡಾ ೭೦ರಷ್ಟು ಎಡಪಕ್ಷಗಳ ಮತಗಳು ಭಾಜಪಕ್ಕೆ ದೊರಕಿದೆ ಎಂದು ತಿಳಿದು ಬರುತ್ತಿದೆ. ಇದು ಅತ್ಯಂತ ಕಳವಳಕಾರೀ ವಿಚಾರ. ಜ್ಯೋತಿ ಬಸುರವರಂತಹ ಮೇರು ಕಮ್ಯುನಿಸ್ಟ್ ನಾಯಕರ ನೇತೃತ್ವದಲ್ಲಿ ೨೦೧೧ರವರೆವಿಗೆ ೩೪ ವರ್ಷಗಳು ರಾಜ್ಯವಾಳಿದ ಸಿಪಿಎಂ ಪಕ್ಷ ಇಂದು ಹೇಳಲು ಹೆಸರಿಲ್ಲದಂತೆ ಮಾಯವಾಗಿದೆ. ಎಡ ಪಕ್ಷಗಳ ಅಭ್ಯರ್ಥಿಗಳು ಸ್ಪರ್ಧಿಸಿದ್ದ ಎಲ್ಲ ಕ್ಷೇತ್ರಗಳಲ್ಲೂ ಸೋತು, ಡೆಪಾಸಿಟ್ ಕಳೆದುಕೊಂಡರು ಎಂಬುದು ತಲೆ ತಗ್ಗಿಸುವ ಸಂಗತಿ. ಅವರುಗಳು ಗಳಿಸಿದ ಮತಗಳು ಶೇಕಡಾ ೮ಕ್ಕಿಂತಲೂ ಕಡಿಮೆ. ಬೇರೊಂದು ಸಂದರ್ಭದಲ್ಲಿ ಇದರ ಕುರಿತು ದೀರ್ಘವಾದ ವಿಶ್ಲೇಷಣೆ ಅಗತ್ಯವಾಗಬಹುದು.

ಇಡೀ ದೇಶದಲ್ಲಿ ಸಿಪಿಐ ಮತ್ತು ಸಿಪಿಎಂ ಸೇರಿ ಒಟ್ಟು ಗಳಿಸಿದ ಸ್ಥಾನ ಕೇವಲ ೫. ಒಂದು

ನ. ಸುಂದರಮೂರ್ತಿ

ಕೇರಳದಿಂದ. ಇನ್ನು ನಾಲ್ಕು ತಮಿಳುನಾಡಿನಿಂದ. ಅಂದರೆ ಲೋಕಸಭೆಯಲ್ಲಿ ಕಮ್ಯುನಿಸ್ಟರ ಸಂಖ್ಯೆ ೫ ಮಾತ್ರ. ತಮಿಳುನಾಡಿನಲ್ಲಿ ಸಿಪಿಐ ಮತ್ತು ಸಿಪಿಎಂಗೆ ತಲಾ ೨ ಕ್ಷೇತ್ರಗಳಲ್ಲಿ ಗೆಲುವು ದೊರಕಿದೆ. ಅದಕ್ಕೆ ಪ್ರಮುಖ ಕಾರಣ ಎಡ ಪಕ್ಷಗಳು ಪ್ರಾದೇಶಿಕ ಪಕ್ಷ ಡಿಎಂಕೆ ಜೊತೆ ಮಾಡಿಕೊಂಡಿದ್ದ ಚುನಾವಣಾ ಒಪ್ಪಂದ. ಮುಂಬರುವ ದಿನಗಳಲ್ಲಿ ಎಡ ಪಕ್ಷಗಳು ಪ್ರಾಮಾಣಿಕವಾಗಿ ಆತ್ಮಾವಲೋಕನ ಮಾಡಿಕೊಳ್ಳ ಬೇಕು. ದೇಶದ ಯುವಜನತೆಯ ಆಶಾಕಿರಣವಾಗಿದ್ದ ಸಿಪಿಐನ ಕನ್ಹಯ್ಯ ಕುಮಾರ್‌ರವರು ಭಾಜಪ ಅಭ್ಯರ್ಥಿಯ ವಿರುದ್ಧ ನಾಲ್ಕು ಲಕ್ಷಕ್ಕಿಂತಲೂ ಹೆಚ್ಚಿನ ಓಟುಗಳ ಅಂತರದಿಂದ ಸೋಲನ್ನು ಅನುಭವಿ ಸಿದ್ದಾರೆ. ಜನಪ್ರಿಯತೆ, ಮಾಧ್ಯಮದಲ್ಲಿ ಪ್ರಚಾರ ಇವುಗಳನ್ನು ಓಟುಗಳಾಗಿ ಪರಿವರ್ತಿಸಲಾಗಲಿಲ್ಲ. ಬಿಹಾರದ ಹಿಂದುಳಿದ ಪ್ರದೇಶಗಳಲ್ಲಿ ಇಂದಿಗೂ ಆಚರಣೆಯಲ್ಲಿರುವ ಜಾತಿ ರಾಜಕಾರಣವೂ ಸೋಲಿಗೆ ಕಾರಣವಾಗಿದ್ದಿರಬಹುದು.

ದೇಶದ ರಾಜಧಾನಿ ದೆಹಲಿಯಲ್ಲೂ ಭಾಜಪದ್ದೇ ಅಬ್ಬರ. ಖಾತೆಯನ್ನೇ ತೆರೆಯದ ಆಮ್ ಆದ್ಮೀ ಪಾರ್ಟಿಯ ಸ್ಥಿತಿಯೂ ಶೋಚನೀಯ. ಕಾಂಗ್ರೆಸ್‌ಗೂ ಸೊನ್ನೆ !

ತಮಿಳುನಾಡಿನಲ್ಲಿ ಭಾಜಪಕ್ಕೆ ನೋ ಎನ್‌ಟ್ರೀ ! ಡಿಎಂಕೆ-ಕಾಂಗ್ರೆಸ್ ಮೈತ್ರಿ ಕೂಟಕ್ಕೆ ಭರ್ಜರಿ ಜಯ. ಎಐಎಡಿಎಂಕೆ ಪಕ್ಷಕ್ಕೆ ಭಾರೀ ಹಿನ್ನಡೆ, ಇಕ್ಕಟ್ಟು.

ಆಂಧ್ರಪ್ರದೇಶದಲ್ಲಿ ಚಂದ್ರಬಾಬು ನಾಯ್ಡು ಸೋಲು. ಮಧ್ಯಪ್ರದೇಶದಲ್ಲಿ ಕಮಲ್‌ನಾಥರವರ ನೇತೃತ್ವದ ಕಾಂಗ್ರೆಸ್ ಪಕ್ಷದ ಸರ್ಕಾರಕ್ಕೂ ಒತ್ತಡ. ಪಕ್ಷಾಂತರದ ಪಿಡುಗು, ಕುದುರೆ ವ್ಯಾಪಾರ ಮುಂತಾದವುಗಳಿಂದ ಅಧಿಕಾರವನ್ನು ಕಬಳಿಸುವ ಪ್ರಯತ್ನಗಳಲ್ಲಿ ಭಾಜಪ ಈಗಾಗಲೇ ಮಗ್ನವಾಗಿದೆ. ಕರ್ನಾಟಕದಲ್ಲೂ ಇದೇ ಸಾಧ್ಯತೆ ಇದೆ.

**ಭಾರತ ಚುನಾವಣಾ ಆಯೋಗ ತನ್ನ ವಿಶ್ವಾಸಾರ್ಹತೆಯನ್ನು ಕಳೆದುಕೊಂಡಿತು**

ಈ ಚುನಾವಣೆಯಲ್ಲಿ ಭಾರತ ಚುನಾವಣಾ ಆಯೋಗ ಪಕ್ಷಪಾತವಿಲ್ಲದೆ, ದಕ್ಷತೆ ಹಾಗೂ ಪಾರದರ್ಶಕತೆಯಿಂದ ಕಾರ್ಯ ನಿರ್ವಹಿಸಿತಾ ಅನ್ನುವ ಪ್ರಶ್ನೆ ಅನೇಕರನ್ನು ಕಾಡಿತ್ತು. ಆಯೋಗದ ಸ್ವಾತಂತ್ರ್ಯದ ಬಗ್ಗೆ ಗಂಭೀರ ಪ್ರಶ್ನೆಗಳು ಮೂಡಿದವು. ಮುಕ್ತ ಮತ್ತು ನ್ಯಾಯ ಸಮ್ಮತವಾದ ಚುನಾವಣೆ ನಡೆದಿದೆಯಾ ಎಂಬ ಶಂಕೆ ಕಾಣಿಸಿಕೊಂಡಿತು. ನಿಜ ಹೇಳುವುದಾದರೆ, ಚುನಾವಣಾ ಆಯೋಗ ಈ ನಿಟ್ಟಿನಲ್ಲಿ ಸೋತಿದೆ. ಮೋದಿ ಪಕ್ಷದ ಅನುಯಾಯಿಯಾಗಿಯೇ ಚುನಾವಣಾ ಆಯೋಗ ಕಾರ್ಯ ಚಲಾಯಿಸಿತು. ಆಯೋಗದ ವಿಶ್ವಾಸಾರ್ಹತೆಗೆ ಬಲವಾದ ಪೆಟ್ಟಾಗಿದೆ. ಭಾರತ ಚುನಾವಣಾ ಆಯೋಗದ ವಿಶ್ವಾಸವನ್ನು ನಾಶ ಮಾಡುವುದರ ಕೀರ್ತಿ ಮೋದಿ-ಶಾರವರಿಗೇ ಸಲ್ಲುವುದು. ಇದು ಪ್ರಜಾಪ್ರಭುತ್ವಕ್ಕೆ ಮಾರಕ.

**ಮುಂದೇನು ಮಾಡಬೇಕು?**

ಹತ್ತು ಹಲವಾರು ಪ್ರಶ್ನೆಗಳು, ಸಮಸ್ಯೆಗಳು ಮತ್ತು ಗೊಂದಲಗಳು ಎಡಪಕ್ಷಗಳ ಮುಂದೆ ಕಾಣಿಸಿಕೊಂಡಿವೆ. ಮೊದಲ ಬಾರಿಯಲ್ಲ. ಆದರೂ, ಈಗಿನ ಪರಿಸ್ಥಿತಿ ಭಿನ್ನವಾಗಿದೆ. ಅತ್ಯಂತ ಬಿಗಡಾಯಿಸಿದೆ. ೫೪೩ ಸ್ಥಾನಗಳ ಲೋಕಸಭೆಯಲ್ಲಿ ಕಮ್ಯುನಿಸ್ಟ್ ಪಕ್ಷಗಳ ಸಂಖ್ಯೆ ೫ ಮಾತ್ರ. ಭಾರತದ ಮೊದಲ ಪಾರ್ಲಿಮೆಂಟಿನಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷ ಪ್ರಮುಖ ವಿರೋಧ ಪಕ್ಷವಾಗಿತ್ತು. ೨೦೦೪ರ ಚುನಾವಣೆಯಲ್ಲಿ ಒಟ್ಟು ೫೯ ಸೀಟುಗಳನ್ನು ಹೊಂದಿತ್ತು. ೧೭ನೆಯ ಲೋಕಸಭೆಯಲ್ಲಿ ಅದು ಐದಕ್ಕೆ ಕ್ಷೀಣಿಸಿದೆ. ಅದೂ ದಕ್ಷಿಣದ ಎರಡು ರಾಜ್ಯಗಳಿಂದ ಮಾತ್ರ. ತಮಿಳುನಾಡಿನಲ್ಲಿ ಡಿಎಂಕೆ ಪಕ್ಷದೊಂದಿಗೆ ಚುನಾವಣಾ ಹೊಂದಾಣಿಕೆ ಇಲ್ಲದೆ ಹೋಗಿದ್ದರೆ ಎಡ ಪಕ್ಷಗಳ ಪರಿಸ್ಥಿತಿ ಏನಾಗುತಿತ್ತು ಅನ್ನುವುದನ್ನು ಊಹಿಸಬಹುದು. ದೇಶದ ರಾಜಕೀಯದಲ್ಲಿ, ಜನಗಳ, ರೈತರ, ಮಹಿಳೆಯರ, ಕಾರ್ಮಿಕರ, ದಲಿತರ, ವಿದ್ಯಾರ್ಥಿಗಳ ಹೋರಾಟಗಳಲ್ಲಿ ಎಡ ಪಕ್ಷಗಳ ಪಾತ್ರ ಪ್ರಸ್ತುತವಾಗಿರಲಿಲ್ಲವೇ?! ಹೋರಾಟಗಳಲ್ಲಿ ವರ್ಗ ರಾಜಕೀಯ ಅಥವಾ ಜನ ಸಾಮಾನ್ಯರ ದೈನಂದಿನ ಬದುಕಿನ ರಾಜಕೀಯ ಬೆಸದಿರಲಿಲ್ಲವೇ? ಪೋಲಿಟ್ ಬ್ಯೂರೋ ಅಥವಾ ಕೇಂದ್ರ ಕಾರ್ಯಕಾರೀ ಸಮಿತಿ ಸಭೆಗಳು ನಡೆದು ದೀರ್ಘವಾದ, ಆಳವಾದ ಚರ್ಚೆಗಳು ನಡೆಯಬಹುದು. ಪಠ್ಯ ಪುಸ್ತಕಗಳ ರೀತಿ ವಿಶ್ಲೇಷಣೆಗಳಿಂದ ಪ್ರಯೋಜನವಾಗಲಾರದು.

ಕೆಲವು ವಿಚಾರಗಳನ್ನು ಸೂಕ್ಷ್ಮವಾಗಿ ಪರಿಗಣಿಸಬೇಕು. ದೇಶದ ರಾಜಕೀಯದಲ್ಲಿ ಕಮ್ಯುನಿಸ್ಟ್ ಪಕ್ಷದ ಪಾತ್ರವೇನು? ಕಾಮ್ರೇಡ್ ಶಿವಣ್ಣರವರು ತುಮಕೂರಿನಲ್ಲಿ ಹದಿನೇಳು ಸಾವಿರ ಮತಗಳನ್ನು ಪಡೆದರು ಅನ್ನುವುದಕ್ಕಿಂತ ಇಡೀ ಕ್ಷೇತ್ರದಲ್ಲಿ ಪಕ್ಷದ ರಾಜಕೀಯವನ್ನು ಪ್ರಚಾರ ಮಾಡಿದರು ಅನ್ನುವುದೇ ಸೂಕ್ತ. ಬೇಗೂಸಾರಾಯಿನಲ್ಲಿ ಕನ್ಹಯ್ಯ ಕುಮಾರ್ ಸೋತಿರಬಹುದು. ಆದರೆ ಇಡೀ ದೇಶದ ಗಮನವನ್ನು ತಮ್ಮ ರಾಜಕೀಯ ಪ್ರಚಾರಗಳಿಂದ ಆಕರ್ಷಿಸಿದ್ದರು ಅನ್ನುವುದು ಸತ್ಯ. ಈ ರೀತಿಯ ರಾಜಕೀಯ ಕೆಲಸಗಳನ್ನು ಎಡ ಪಕ್ಷಗಳು ಬಹಳ ಮಟ್ಟಿಗೆ ಕೈಬಿಟ್ಟಿವೆ ಅನ್ನುವುದೇ ಇಂದಿನ ವಾಸ್ತವತೆ. ಕೆಳಸ್ತರದ ಜನಗಳ ಮಧ್ಯೆ ಜೀವಂತ ಸಂಬಂಧಗಳು ಕಡಿಮೆಯಾಗಿವೆ ಅಥವಾ ಕಡಿದುಹೋಗಿವೆ. ಜಾತಿ, ಧರ್ಮ, ಆಚರಣೆಗಳು, ಮೂಢನಂಬಿಕೆಗಳು, ಶಾಪ, ದೇವರು, ಪೂಜೆ, ಸಿನಿಮಾ, ದೂರದರ್ಶನ, ಶೋಷಿಯಲ್ ಮೀಡಿಯಾ, ಮಾಧ್ಯಮಗಳು, ಕ್ರೀಡೆ ಮುಂತಾದ ವಿಚಾರಗಳು ಇಂದು ಸಮಾಜದಲ್ಲಿ ಹಾಸುಹೊಕ್ಕಾಗಿವೆ. ಇವೆಲ್ಲವೂ ನಗಣ್ಯ, ಕೆಲಸಕ್ಕೆ ಬಾರದವು ಎಂದು ತಿಳಿಯಲಿಕ್ಕಿಲ್ಲ. ಅವುಗಳ ಬಗ್ಗೆ ಗಮನ ಹರಿಸಲೇ ಇಲ್ಲ. ಅವುಗಳನ್ನು ಅರ್ಥ ಮಾಡಿಕೊಳ್ಳಲಿಲ್ಲ. ಮತ್ತು ಅವುಗಳು ಬರೀ ಮಾಯೆ, ನಿರರ್ಥಕ ಎಂದು ಸಾಬೀತು ಮಾಡಲೂ ಸಾಧ್ಯವಾಗಲಿಲ್ಲ. ಈ ವಿಚಾರಗಳಿಂದ ಕಮ್ಯುನಿಸ್ಟ್ ಪಕ್ಷ ಮತ್ತು ಜನಸಾಮಾನ್ಯರ ಮಧ್ಯೆ ಒಂದು ಕಂದರವೇ ಸೃಷ್ಟಿಯಾಯಿತು. ಕೇರಳದಲ್ಲಿ ಶಬರಿಮಲೆ ವಿವಾದ ವಿಶ್ವರೂಪ ತಾಳಿತು. ಭಾಜಪ ಈ ವಿವಾದದಿಂದ ರಾಜಕೀಯ ಲಾಭ ಪಡೆಯಲು ಪ್ರಯತ್ನಿಸಿತು. ನಡೆಯಲಿಲ್ಲ. ಆದರೆ ಕಾಂಗ್ರೆಸ್ ಪಕ್ಷ ಎಡ ಪಕ್ಷಗಳನ್ನು, ಒಂದು ಸೀಟನ್ನು ಹೊರತುಪಡಿಸಿ, ಬಾಕಿ ಎಲ್ಲ ಕ್ಷೇತ್ರಗಳಲ್ಲಿ ಸದೆ ಬಡಿದಿದೆ. ಇದರ ಕಾರಣವೇನು? ಕೇರಳದಲ್ಲಿ, ಪಶ್ಚಿಮ ಬಂಗಾಲದಲ್ಲಿ, ತ್ರಿಪುರದಲ್ಲಿ - ಒಂದು ಕಾಲದಲ್ಲಿ ಈ ಮೂರು ರಾಜ್ಯಗಳು ಕಮ್ಯುನಿಸ್ಟ್ ಪಕ್ಷದ ಕೆಂಪು ಕೋಟೆಗಳಾಗಿದ್ದವು. ಈ ಮೂರು ರಾಜ್ಯಗಳಿಂದ ಎಡ ಪಕ್ಷ ಗಳಿಸಿದ ಸ್ಥಾನ ಒಂದು ಮಾತ್ರ. ಆದ್ದರಿಂದ ಸಮ್ ತಿಂಗ್ ಈಸ್ ಸೀರಿಯಸ್ಲಿ ರಾಂಗ್!

ಎರಡನೆಯ ವಿಚಾರ. ಬಡತನ, ನಿರುದ್ಯೋಗ, ಭ್ರಷ್ಟಾಚಾರ, ರಫೇಲ್ ಹಗರಣ, ನೋಟು ರದ್ದತಿ, ಸಣ್ಣ ಪುಟ್ಟ ವ್ಯಾಪಾರಿಗಳಿಗೆ ಕಲ್ಲು ಹಾಕಿದ ಜಿ.ಎಸ್.ಟಿ., ಸಂವಿಧಾನವನ್ನು ಬುಡಮೇಲು ಮಾಡುವ ಹುನ್ನಾರ, ರಾಷ್ಟ್ರೀಯತೆ ಮತ್ತು ಹುಸಿ ದೇಶಭಕ್ತಿಯ ಪ್ರಚಾರ, ಬ್ಯಾಂಕ್‌ಗಳಲ್ಲಿ ಮರು ಪಾವತಿಯಾಗದ ಸಾಲ ಮತ್ತು ಮೋಸ ವಂಚನೆಗಳ ಪ್ರಕರಣಗಳು, ಕೋಮು ಗಲಭೆಗಳು, ರೈತರಿಗೆ ಆದ ತೊಂದರೆಗಳು, ಕಾರ್ಮಿಕ ಕಾಯಿದೆಗಳಿಗೆ ಮಾಡಿದ ತಿದ್ದುಪಡಿಗಳು, ಇಡೀ ದೇಶವನ್ನೇ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳಿಗೆ ಮಾರುವ ಸಂಚುಗಳು - ಇದಾವುದೂ ಚುನಾವಣಾ ಸಂದರ್ಭದಲ್ಲಿ ಚರ್ಚೆಗೇ ಬರಲಿಲ್ಲ. ಮೋದಿ ಅಲೆಯಲ್ಲಿ ಇವೆಲ್ಲವೂ ಕೊಚ್ಚಿ ಹೋದವೋ ಏನೋ, ಆತ್ಮ ವಿಮರ್ಶೆ ಅಗತ್ಯ.

ಮೂರನೆಯದು, ಕಮ್ಯುನಿಸ್ಟ್ ಪಕ್ಷಗಳು ಇತ್ತೀಚಿನ ವರ್ಷಗಳಲ್ಲಿ ಸ್ವತಂತ್ರವಾಗಿ ಪಕ್ಷಗಳನ್ನು ಬೆಳೆಸಲಿಲ್ಲ. ಪರೋಪಕಾರೀ ಪಾಪಣ್ಣನ ರೀತಿ ಪಾತ್ರ ವಹಿಸಿದವು. ಇತರ ವಿಪಕ್ಷಗಳಲ್ಲಿ ಇಲ್ಲದ ಜಾತ್ಯತೀತತೆಯನ್ನು ನಾವು ಹುಡುಕುತ್ತಿದ್ದೆವು. ಕಮ್ಯುನಿಸ್ಟ್ ಪಕ್ಷಗಳಿಗೆ ತಮ್ಮದೇ ಆದ ಉತ್ಕೃಷ್ಟ ಸಿದ್ಧಾಂತವಿದೆ. ಮೌಲ್ಯಾಧಾರಿತ ಜನಪರ

## ಡಿ. ಕೆ. ಚೌಟ ಅವರಿಗೆ ನಮನಗಳು

ಕನ್ನಡ, ತುಳು ಸಾಹಿತ್ಯ, ಸಾಂಸ್ಕೃತಿಕ ಲೋಕದ ಕ್ರಿಯಾಶೀಲ ಚಿಂತಕ, ನಾಟಕಕಾರ, ಸಂಘಟಕ, ಬೆಂಗಳೂರಿನ ಚಿತ್ರಕಲಾ ಪರಿಷತ್ತಿನ ಯಶಸ್ಸಿನ ರೂವಾರಿ, ಶ್ರೀ ಡಿ. ಕೆ. ಚೌಟ ನಿಧನರಾಗಿದ್ದಾರೆ. ಮಾನವತಾವಾದಿ, ಸ್ನೇಹ ಜೀವಿಯಾಗಿದ್ದ ಚೌಟ ಅವರ ನಿಧನಕ್ಕೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗ ನೋವಿನ ನಮನಗಳನ್ನು ಸಲ್ಲಿಸುತ್ತದೆ.

ರಾಜಕೀಯವಿದೆ. ಶುದ್ಧ ನಡವಳಿಕೆ ಇದೆ. ತ್ಯಾಗದ ಪರಂಪರೆ ಇದೆ. ಹೋರಾಟದ ಹುಟ್ಟು ಗುಣವಿದೆ. ಇವೆಲ್ಲವುಗಳನ್ನು ಸದುಪಯೋಗಿಸಿಕೊಂಡು ಕಮ್ಯುನಿಸ್ಟ್ ಪಕ್ಷವನ್ನು ಸೈದ್ಧಾಂತಿಕವಾಗಿ, ರಾಜಕೀಯವಾಗಿ ಮತ್ತು ಸಂಘಟನಾತ್ಮಕವಾಗಿ, ಬಲವಾಗಿ ಕಟ್ಟಲು ಮುಂದಾಗಲಿಲ್ಲ. ಅತ್ಯಂತ ಮುಖ್ಯವಾಗಿ, ಕಮ್ಯುನಿಸ್ಟ್ ಪಕ್ಷಗಳು ಒಂದಾಗಬೇಕು. ಅತಿ ಮುಖ್ಯವಾಗಿ ಹಾಗೂ ಶೀಘ್ರವಾಗಿ ಭಾರತ ಕಮ್ಯುನಿಸ್ಟ್ ಪಕ್ಷ (ಸಿಪಿಐ) ಮತ್ತು ಭಾರತ ಕಮ್ಯುನಿಸ್ಟ್ ಪಕ್ಷ (ಮಾರ್ಕ್ಸಿಸ್ಟ್) ಒಂದಾಗಬೇಕು. ಈ ನಿಟ್ಟಿನಲ್ಲಿ ಸಿಪಿಐ ತನ್ನ ಪ್ರಾಮಾಣಿಕತೆಯನ್ನು ಪ್ರದರ್ಶಿಸಿದೆ. ಸಿಪಿಐನ ಪ್ರಧಾನ ಕಾರ್ಯದರ್ಶಿ ಸುರವರಂ ಸುಧಾಕರ ರೆಡ್ಡಿಯವರು ಸಿಪಿಎಂನ ಪ್ರಧಾನ ಕಾರ್ಯದರ್ಶಿ ಸೀತಾರಾಂ ಯೆಚೂರಿ ಯವರನ್ನು ಖುದ್ದಾಗಿ ಭೇಟಿ ಮಾಡಿ ಕಮ್ಯುನಿಸ್ಟ್ ಐಕ್ಯತೆಯ ಬಗ್ಗೆ ಪತ್ರವನ್ನು ನೀಡಿದ್ದಾರೆ. ಆದರೆ ಸಿಪಿಎಂನಿಂದ ಯಾವ ಪ್ರತಿಕ್ರಿಯೆಯೂ ಹೊರಬಿದ್ದಿಲ್ಲ. ಸಿಪಿಐ ಪಕ್ಷ ಹತಾಶವಾಗಿ ಐಕ್ಯತೆಯ ಬಗ್ಗೆ ಪ್ರಸ್ತಾಪ ಮಾಡಿಲ್ಲ. ನಮ್ಮ ದೇಶದ ಎಡ ಚಿಂತಕರು, ಬುದ್ಧಿಜೀವಿಗಳು, ದುಡಿಯುವ ಜನ ಕಮ್ಯುನಿಸ್ಟ್ ಐಕ್ಯತೆಯ ಬಗ್ಗೆ ಕಳಕಳಿ ಹೊಂದಿದ್ದಾರೆ. ಐಕ್ಯತೆಯ ಬಗ್ಗೆ ಸಿಪಿಎಂ ಮನಸ್ಸು ಕೊಡದಿರುವುದು ಆತ್ಮವಂಚನೆಗೆ ಸಮ. ಪಾಸಿಟಿವ್ ಧೋರಣೆ ಇಲ್ಲದಿದ್ದಲ್ಲಿ ದೇಶದಲ್ಲಿ ಕಮ್ಯುನಿಸ್ಟ್ ಚಳುವಳಿ ಇನ್ನಷ್ಟು ಕ್ಷೀಣಿಸುವುದು ಅನಿವಾರ್ಯ ವಾಗಬಹುದು. ಅದರ ಅಪಕೀರ್ತಿ ಸಿಪಿಎಂಗೇ ಮೀಸಲು. ದೇಶದ ಪ್ರಸ್ತುತ ರಾಜಕೀಯವನ್ನು ಅವಲೋಕಿಸಿದರೆ ಸಿಪಿಎಂನ ಪರಿಸ್ಥಿತಿ ಅತ್ಯಂತ ಶೋಚನೀಯ. ಅದು ತನ್ನ ಭದ್ರ ಕೋಟೆಗಳನ್ನು ಕಳೆದುಕೊಂಡಿದೆ. ವಾಸ್ತವತೆಯನ್ನು ಸಿಪಿಎಂ ಪರಿಗಣಿಸುವುದು ಸೂಕ್ತ, ಅವಶ್ಯಕ. ಒಡಕಿನ ರಾಜಕೀಯ ಕೊನೆಗೊಂಡ ಅಧ್ಯಾಯ. ಐವತ್ತೈದು ವರ್ಷಗಳು ಸಾಲದೇ?!

**. . . . . ಸದ್ಯದ ಗಂಭೀರ ಪರಿಸ್ಥಿತಿ**

ದೇಶದ ರಾಜಕೀಯ ಕಳವಳಕಾರಿಯಾಗಿದೆ. ಸೆರೆಮನೆಯಲ್ಲಿರಬೇಕಾದ ಅಪರಾಧಿಗಳು ಚುನಾವಣೆಯಲ್ಲಿ ಗೆದ್ದು ಲೋಕಸಭೆಯಲ್ಲಿ ರಾರಾಜಿಸುತ್ತಿದ್ದಾರೆ. ೧೫೯ ಸಂಸದರಿಗೆ ಗಂಭೀರ ಅಪರಾಧದ ಹಿನ್ನೆಲೆ ಇದೆ. ೨೦೦೯ನೇ ಸಾಲಿನಲ್ಲಿ ಆಯ್ಕೆಯಾದವರಿಗೆ ಹೋಲಿಸಿದರೆ ಈ ಬಾರಿ ಅಪರಾಧ ಹಿನ್ನೆಲೆಯ ಸಂಸದರ ಸಂಖ್ಯೆ ಶೇಕಡಾ ೧೦೯ರಷ್ಟು ಏರಿಕೆಯಾಗಿದೆ. ೧೭ನೇ ಲೋಕಸಭೆಯಲ್ಲಿ ಅಪರಾಧ ಪ್ರಕರಣದಲ್ಲಿ ಶಿಕ್ಷೆಗೆ ಒಳಗಾದವರು ೧೦ ಸಂಸದರು, ಕೊಲೆ ಪ್ರಕರಣದ ಆರೋಪಿಗಳು ೧೧ ಮಂದಿ, ಕೊಲೆ ಯತ್ನ ಪ್ರಕರಣದ ಆರೋಪಿಗಳು ೩೦ ಮಂದಿ. ಅಪಹರಣ ಪ್ರಕರಣದ ಆರೋಪಿಗಳು ೬ ಮಂದಿ, ಅತ್ಯಾಚಾರ ಪ್ರಕರಣದ ಆರೋಪಿಗಳು ೩ ಮಂದಿ. ದ್ವೇಷ ಭಾಷಣದ ಆರೋಪ ಹೊತ್ತವರು ೨೯ ಮಂದಿ ಮತ್ತು ಮಹಿಳೆಯ ವಿರುದ್ಧದ ದೌರ್ಜನ್ಯ ಕೃತ್ಯಗಳ ಆರೋಪಿಗಳು ೧೯ ಜನ ಅಡಗಿದ್ದಾರೆ. ಗಂಭೀರ ಅಪರಾಧ ಹಿನ್ನೆಲೆಯ ವ್ಯಕ್ತಿ ಇಂದು ಮೋದಿಯ ನಂತರ ಕೇಂದ್ರ ಮಂತ್ರಿ ಮಂಡಲದಲ್ಲಿ ಎರಡನೆಯ ಅಗ್ರಸ್ಥಾನದಲ್ಲಿದ್ದಾರೆ. ಇದು ಮೋದಿ ಬ್ರಾಂಡ್ ಪ್ರಜಾಪ್ರಭುತ್ವ! ಅಮಿತ್ ಶಾ 'ಯುವರಾಜ', ಉತ್ತರಾಧಿಕಾರಿ! ರಾಷ್ಟ್ರೀಯ ಭದ್ರತಾ ಸಲಹೆಗಾರ (ಎನ್.ಎಸ್.ಎ.) ಅಜಿತ್ ಡೋಭಾಲ್‌ಗೆ ಕೇಂದ್ರ ಸಂಪುಟ ದರ್ಜೆ ಸಚಿವರ ಸ್ಥಾನಮಾನ! ಈ ತ್ರಿಮೂರ್ತಿಗಳು ದೇಶದ ಮುಂದಿನ ಐದು ವರ್ಷಗಳ ರಾಜಕೀಯ ಮತ್ತು ಆಡಳಿತವನ್ನು ನಿರ್ಧರಿಸಲಿದ್ದಾರೆ. ದೇಶ, ಅದರ ಸಮಗ್ರತೆ, ಬಹುತ್ವ ಮತ್ತು ಜನರ ಐಕ್ಯತೆಗೆ ಆಪತ್ತು, ವಿಪತ್ತುಗಳು ಉಂಟಾಗುವುದು ನಿಸ್ಸಂದೇಹ. ಈಗಾಗಲೇ ಚಿಹ್ನೆಗಳು ಕಾಣಿಸಿಕೊಳ್ಳಲಾರಂಭಿಸಿವೆ.

ಕಾಶ್ಮೀರದ ದುಸ್ಥಿತಿ ಇನ್ನಷ್ಟು ಬಿಗಡಾಯಿಸಲಿದೆ. ಗೃಹ ಸಚಿವ ಅಮಿತ್ ಶಾ ಕಾಶ್ಮೀರದಲ್ಲಿ 'ಹಿಂದುತ್ವ' ವನ್ನು ಜಾರಿ ಮಾಡಲು ನಕ್ಷೆ ಸಿದ್ಧಮಾಡಿದ್ದಾರೆ. ಇಂದಿನ ಜಮ್ಮು ಕಾಶ್ಮೀರ ರಾಜ್ಯವೆಂದರೆ ಅದರಲ್ಲಿ ಅಡಕವಾಗಿರುವ ಪ್ರದೇಶಗಳು ಜಮ್ಮು, ಕಾಶ್ಮೀರ, ಲಡಖ್ ಮತ್ತು ಗಿಲ್‌ಗಿಟ್. ಜಮ್ಮುವಿನಲ್ಲಿ ಬಹುಸಂಖ್ಯಾತರು ಹಿಂದುಗಳು. ಕಾಶ್ಮೀರದಲ್ಲಿ ಸುನ್ನಿ ಮುಸಲ್ಮಾನರು ಬಹುಸಂಖ್ಯಾತರು. ಲಡಖ್‌ನಲ್ಲಿ ಬೌದ್ಧರು, ಗಿಲ್‌ಗಿಟ್ ಹಾಗೂ ಬಾಲ್ತೀಸ್ತಾನದಲ್ಲಿ ಶಿಯಾ ಮುಸಲ್ಮಾನರು ಹೆಚ್ಚಿನ ಸಂಖ್ಯೆಯವರು. ಜಮ್ಮು ಜನರ ಭಾಷೆ ಡೋಗ್ರೀ ಮತ್ತು ಹಿಂದಿ. ಕಾಶ್ಮೀರದ ಭಾಷೆ ಕಾಶ್ಮೀರಿ ಹಾಗೂ ಉರ್ದು. ರಾಜ್ಯದಲ್ಲಿ ಒಟ್ಟು ೮೭ ವಿಧಾನಸಭಾ ಕ್ಷೇತ್ರ ಗಳಿವೆ. ಕಾಶ್ಮೀರದಲ್ಲಿ ೪೬, ಜಮ್ಮುವಿನಲ್ಲಿ ೩೭ ಮತ್ತು ಲಡಖ್‌ನಲ್ಲಿ ೪ ಸೀಟುಗಳು. ಜಮ್ಮು ವಲಯದಲ್ಲಿ ಹೆಚ್ಚಿನ ಕ್ಷೇತ್ರಗಳನ್ನು ಸೃಷ್ಟಿಸಿ ಮುಸ್ಲಿಮೇತರ ವ್ಯಕ್ತಿಗೆ ರಾಜ್ಯದ ಮುಖ್ಯಮಂತ್ರಿಯಾಗುವ ಸಾಧ್ಯತೆಯನ್ನು ಉಂಟುಮಾಡಲು ಅಮಿತ್ ಶಾ ಸಿದ್ಧತೆ ಮಾಡುತ್ತಿದ್ದಾರೆ. ರಾಜ್ಯದಲ್ಲಿ ಕ್ಷೇತ್ರ ಮರು ವಿಂಗಡಣೆಗೆ ಕೇಂದ್ರ ಕಾರ್ಯತಂತ್ರ ನಿರೂಪಿಸುತ್ತಿದೆ. ಜೊತೆ ಯಲ್ಲಿಯೇ ಜಮ್ಮು ಮತ್ತು ಕಾಶ್ಮೀರಕ್ಕೆ ವಿಶೇಷ ಸ್ಥಾನಮಾನ ಕಲ್ಪಿಸುವ, ಸಂವಿಧಾನದ ವಿಧಿ ೩೭೦ ಮತ್ತು ೩೫(ಎ) ಅನ್ನು ರದ್ದುಗೊಳಿಸುವುದರ ಬಗ್ಗೆಯೂ ಯೋಚನೆ ಮಾಡುತ್ತಿದೆ. ಈಗ ಜಮ್ಮು ಕಾಶ್ಮೀರದಲ್ಲಿ ಕ್ಷೇತ್ರ ಮರುವಿಂಗಡಣೆ ಮಾಡ ಬೇಕಾದರೆ ಪುನಃ ಅಲ್ಲಿನ ಸಂವಿಧಾನಕ್ಕೆ ತಿದ್ದುಪಡಿ ಮಾಡಬೇಕು. ರಾಜ್ಯದಲ್ಲಿ ಈಗ ರಾಷ್ಟ್ರಪತಿ ಆಡಳಿತ ಇರುವುದರಿಂದ ತಿದ್ದುಪಡಿ ಮಾಡಲು ರಾಜ್ಯಪಾಲರಿಗೆ ಅಧಿಕಾರವಿದೆ ಎಂದು ಹೇಳಲಾಗುತ್ತಿದೆ. ಹಿಂದುತ್ವದ ರಾಜಕಾರಣವನ್ನು ಕಾಶ್ಮೀರದಲ್ಲಿ ಹೇರಲು, ಜಮ್ಮು ಕಾಶ್ಮೀರದ ಜನರನ್ನು ಧರ್ಮದ ಆಧಾರದಲ್ಲಿ ವಿಭಜಿಸುವ ಇನ್ನೊಂದು ಪ್ರಯತ್ನ ಅಮಿತ್ ಶಾರವರ ಸಂಚು ಅನ್ನುವುದರಲ್ಲಿ ಯಾವ ಸಂಶಯವೂ ಇರಬೇಕಾಗಿಲ್ಲ. ಒಟ್ಟಾರೆ, ಕಾಶ್ಮೀರವನ್ನು ಹಿಂದೂ ರಾಜ್ಯ ಮಾಡಿದರೆ ಅಲ್ಲಿನ ಎಲ್ಲ ಸಮಸ್ಯೆಗಳಿಗೂ ಅದು ರಾಮಬಾಣ, ಸಿದ್ಧೌಷಧ ಎಂದು ಅಮಿತ್ ಶಾ ಭಾವಿಸಿದ್ದಾರೆ. ಅತ್ಯಂತ ಅಪಾಯಕಾರೀ ಯೋಚನೆ. ಹಿಟ್ಲರ್‌ನ ಜರ್ಮನಿಯಿಂದ ಸ್ಫೂರ್ತಿ ಪಡೆಯುವುದರ ಬದಲು ಪಾಠ ಕಲಿಯುವುದು ಒಳ್ಳೆಯದು.

'ಒಂದು ದೇಶ, ಒಂದೇ ಭಾಷೆ' ಅನ್ನುವ ಸೋಗಿನಲ್ಲಿ ಕೇಂದ್ರ ಸರ್ಕಾರ ಹಿಂದಿ ಭಾಷೆಯನ್ನು ಹಿಂದಿಯೇತರ ರಾಜ್ಯಗಳ ಮೇಲೆ ಹೇರಲು ಪ್ರಯತ್ನ ಕೈಗೊಂಡಿತ್ತು. ಆದರೆ ದಕ್ಷಿಣದ ರಾಜ್ಯಗಳಿಂದ ಬಂದ ವ್ಯಾಪಕ ವಿರೋಧದಿಂದ ಪ್ರಯತ್ನವನ್ನು ಸದ್ಯಕ್ಕೆ ಕೈ ಬಿಡಲಾಗಿದೆ. ಶಿಕ್ಷಣ ನೀತಿಯ ಕರಡು ಪ್ರತಿಯಲ್ಲಿ 'ತಪ್ಪು ನುಸುಳಿತು' ಎಂದು ಹೇಳಿರುವುದು ಕೇಂದ್ರ ಸರ್ಕಾರದ



ಹೊಣೆಗೇಡಿತನವನ್ನು ತೋರಿಸುತ್ತದೆ. ಹಿಂದಿ ಭಾಷೆಯನ್ನು ಬಲವಂತವಾಗಿ ಹೇರುವ ಪ್ರಯತ್ನ ಇದು ಮೊದಲೇನಲ್ಲ. ಭಾರತದ ಒಕ್ಕೂಟ ವ್ಯವಸ್ಥೆಗೆ ಇದು ಮಾರಕ. ಲಕ್ಷಾಂತರ ಉತ್ತರ ಹಾಗೂ ಈಶಾನ್ಯ ಭಾರತದ ಜನ ಕರ್ನಾಟಕ, ಕೇರಳ, ತಮಿಳುನಾಡು ರಾಜ್ಯಗಳಿಗೆ ವಲಸೆ ಬಂದಿದ್ದಾರೆ. ಬೆಂಗಳೂರಿನಲ್ಲಿ ಇಂದು ಕನ್ನಡ ಮೈನಾರಿಟಿ. ಇದು ವಾಸ್ತವ. ಹೊರ ಪ್ರದೇಶಗಳಿಂದ ಬಡಜನ ಬದುಕಿಗಾಗಿ ಇಲ್ಲಿಗೆ ಬರುವುದಕ್ಕೆ ಏನೂ ಆಕ್ಷೇಪ ಇರಬೇಕಾಗಿಲ್ಲ. ಆದರೆ ಇಲ್ಲಿಗೆ ಬರುವವರು ಕನ್ನಡ ಭಾಷೆ ಕಲಿಯುವುದೇ ಇಲ್ಲ. ಬಿಎಂಟಿಸಿ ಬಸ್ಸಿನಲ್ಲಿ, ಮೆಟ್ರೋನಲ್ಲಿ ನೋಡಬಹುದು – ಕನ್ನಡದ ಭಾಷೆ ಕಡಿಮೆ, ಹಿಂದಿಯ ಆರ್ಭಟವೇ ಹೆಚ್ಚು. ಕರ್ನಾಟಕದ ಕನ್ನಡಿಗರು ಹಿಂದಿ ಕಲಿಯುವುದು ಇರಲಿ, ಇಲ್ಲಿಗೆ, ನಮ್ಮಲ್ಲಿಗೆ ಬರುವ ಹೊರಗಿನವರು ಯಾಕೇ ಕನ್ನಡ ಕಲಿಯಬಾರದು?! ತೇಜಸ್ವಿಗಳು, ಹೆಗ್ಗಡೆಗಳು ಮತ್ತು ಜೋಶಿಗಳು ಇದರ ಬಗ್ಗೆ ಏನು ಹೇಳುವರು? ಇಂದಿನ ನರೇಂದ್ರ ಮೋದಿ–ಅಮಿತ್ ಶಾ ಭಾರತ ಅಂದ್ರೆ ಏನು ಎಂದು ತಿಳಿದುಕೊಳ್ಳಬೇಕಾದರೆ ಬೆಂಗಳೂರಿನಿಂದ ಬಿಹಾರದ ಪಾಟ್ನಾಗೆ ಪಯಣಿಸುವ ಸಂಗಮಿತ್ರ ಎಕ್ಸ್‌ಪ್ರೆಸ್‌ನಲ್ಲಿ ಒಮ್ಮೆ ಪ್ರಯಾಣ ಮಾಡಿದರೆ ಸಾಕು. ಜನ್ಮ ಸಾರ್ಥಕವಾಗುತ್ತೆ. ಮೋದಿ–ಶಾರವರ ರಾಜಕೀಯದ ಅರಿವಾಗುತ್ತೆ. ಇದು ಸ್ವಚ್ಛವಲ್ಲದ ಭಾರತ.

ಭಾರತದಲ್ಲಿ ಭಾಷಾ ಬಹುತ್ವ ಮುಂದವರೆಯಬೇಕು. ಅದೇ ಸಮಯಕ್ಕೆ ಹಿಂದಿ ಹೇರಿಕೆ ಕೊನೆಗಾಣಬೇಕು. ನಮಗೂ ನಮ್ಮ ಭಾಷೆಯ ಹೆಮ್ಮೆ, ಅಭಿಮಾನವಿದೆ; ನಮ್ಮದೇ ಆದ ಸಂಸ್ಕೃತಿ ಇದೆ. ಅದನ್ನು ಕೆಣಕಬೇಡಿ, ಹಿಂದಿ 'ಗುಮ್ಮ'ನನ್ನು ತೋರಿಸಬೇಡಿ.

ಭಾರತ ವಿಶ್ವದ ಅತಿ ದೊಡ್ಡ ಪ್ರಜಾಪ್ರಭುತ್ವ. ಚುನಾವಣಾ ಖರ್ಚೂ ಅಷ್ಟೇ, ಜಗತ್ತಿನಲ್ಲಿಯೇ ಅತ್ಯಂತ ದುಬಾರಿ! ಯಾರು ಹೇಳಿದರು, ಭಾರತ ಬಡ ರಾಷ್ಟ್ರವೆಂದು? ಚುನಾವಣೆಗೆ, ರಾಜಕೀಯ ಪಕ್ಷಗಳು ಮಾಡಿದ ಖರ್ಚು ಅರವತ್ತು ಸಾವಿರ ಕೋಟಿ ರೂಪಾಯಿ. ನೂತನ ವಿಶ್ವದಾಖಲೆ! ಭಾಜಪ




ಮಾತ್ರವೇ ರೂ.೨೭,೦೦೦ಕ್ಕಿಂತ ಹೆಚ್ಚು ಹಣವನ್ನು ಪ್ರಚಾರಕ್ಕಾಗಿ ವ್ಯಯ ಮಾಡಿದೆ. ಸೆಂಟರ್ ಫಾರ್ ಮೀಡಿಯಾ ಸ್ಟಡೀಸ್ (ಸಿಎಂಎಸ್) ಚುನಾವಣೆಯಲ್ಲಿ ಮಾಡಲಾದ ಖರ್ಚುಗಳ ಬಗ್ಗೆ ವರದಿ ಪ್ರಕಟಿಸಿದೆ. ಒಂದು ಮತಕ್ಕೆ ರೂ.೭೦೦ ಖರ್ಚಾಗಿದೆ. ಒಂದು ಕ್ಷೇತ್ರದಲ್ಲಿ ಆಗಿರುವ ವೆಚ್ಚ ಸುಮಾರು ರೂ.೧೦೦ ಕೋಟಿ. ೧೯೯೮ರ ಲೋಕಸಭಾ ಚುನಾವಣೆಗೆ ಹೋಲಿಸಿದರೆ ವೆಚ್ಚವು ೬–೭ ಪಟ್ಟು ಹೆಚ್ಚಾಗಿದೆ. ಮತ ನೀಡಲು ಸುಮಾರು ಶೇಕಡಾ ೬೬ರಷ್ಟು ಜನ ಹಣ ಪಡೆದಿರಬಹುದು ಎಂದು ತಿಳಿದು ಬರುತ್ತದೆ. ಬರೀ ಹಣವಲ್ಲದೆ ಇನ್ನಿತರ ಆಮಿಷಗಳನ್ನೂ ಒಡ್ಡಲಾಯ್ತು. ಸಿಂಗಪುರ್, ಮಲೇಶಿಯಾ ಪ್ರವಾಸ, ಪುಣ್ಯಕ್ಷೇತ್ರಗಳ ತೀರ್ಥಯಾತ್ರೆ ಮುಂತಾದವುಗಳೂ ಓಟ್ ಗಿಟ್ಟಿಸುವುದಕ್ಕೆ ಬಳಸಲಾದ ತಂತ್ರಗಳು. ಭಾಜಪಕ್ಕೆ ಇಷ್ಟೊಂದು ಹಣ ಎಲ್ಲಿಂದ ಬಂತು? ಅಂಬಾನಿ, ಅದಾನಿ, ಡಾಲ್ಮೀಯಾಗಳ ಡಾರ್ಲಿಂಗ್ ನರೇಂದ್ರ ಮೋದಿ ಪಕ್ಷ. ಕುಬೇರನ ಭಂಡಾರವೇ ಅವರ ಬಳಿ ಇದ್ದಾಗ ಯಾವ ಕೊರತೆ? ಕಾರ್ಪೊರೇಟ್ ಧಣಿಗಳ ಚುನಾವಣಾ ಡೊನೇಶನ್ ಏನಿತ್ತು ಅದರಲ್ಲಿ ಶೇಕಡಾ ೯೫ಕ್ಕಿಂತ ಹೆಚ್ಚಿನ ಪಾಲು ಭಾಜಪಕ್ಕೆ ಸಂದಾಯವಾಯಿತು ಎಂಬುದನ್ನು ಯಾರೂ ಮರೆಯುವಂತಿಲ್ಲ. ಸಿಎಂಎಸ್ ವರದಿಯಲ್ಲಿ ಮೇಲ್ನೋಟಕ್ಕೆ ಗೋಚರಿಸುವ ವೆಚ್ಚಗಳನ್ನು ಮಾತ್ರ ಅಂದಾಜು ಮಾಡಲಾಯ್ತು. ಅಂದರೆ ಇದು ನೀರ್ಗಲ್ಲಿನ ತುದಿ ಮಾತ್ರ. Tip of the ice-berg. ಭಾರತದಲ್ಲಿ ಚುನಾವಣೆಗಳಲ್ಲಿ ಹಣದ ಪ್ರಭಾವ ಎಷ್ಟು ವಿಸ್ತಾರವಾಗಿದೆ ಮತ್ತು ಆಳಕ್ಕಿದೆ ಎಂಬುದು ಊಹೆಗಷ್ಟೇ ಬಿಟ್ಟ ವಿಚಾರ. ಇದು ಪ್ರಜಾಪ್ರಭುತ್ವವನ್ನು ಎಷ್ಟರ ಮಟ್ಟಿಗೆ ಹಾನಿ ಮಾಡಿದೆ ಅನ್ನುವುದು ಕಲ್ಪನೆಗೆ ಬಿಟ್ಟದ್ದು ಎಂದು ಸಿಎಂಎಸ್ ಸಂಸ್ಥೆ ಹೇಳಿಕೆ ನೀಡಿದೆ. ಅಂದರೆ, ೨೦೧೯ರ ಚುನಾವಣೆ ಎಷ್ಟರಮಟ್ಟಿಗೆ ಮುಕ್ತ ಹಾಗೂ ನ್ಯಾಯಸಮ್ಮತವಾಗಿದ್ದವು? ಉತ್ತರ ನೀಡಬಲ್ಲದೇ, ಭಾರತ ಚುನಾವಣಾ ಆಯೋಗ?! ಶಿವಮೊಗ್ಗದಲ್ಲಿ ಶಾಸಕ ಕೆ. ಎಸ್. ಈಶ್ವರಪ್ಪನವರಿಂದ ಜನರಿಗೆ ಒಂದು ಲಕ್ಷ ಲಾಡುಗಳನ್ನು ಮೋದಿ ಗೆಲುವಿಗಾಗಿ ವಿತರಿಸಲಾಯಿತು. ಮಂಡ್ಯದಲ್ಲಿ ಅಂಬರೀಷ್ ಅಭಿಮಾನಿಯಿಂದ ಮತದಾರರಿಗೆ ಹಂಚಿಕೆ ಧಾರವಾಡ ಪೇಡಾ! ಸ್ವಾಭಿಮಾನವಿಲ್ಲದ 'ಸ್ವಾಭಿಮಾನಿ ವಿಜಯೋತ್ಸವ'! ಅಂದ ಹಾಗೆ, ಮಂಡ್ಯದಲ್ಲಿ ಅಭ್ಯರ್ಥಿಗಳು ಚುನಾವಣೆಗಾಗಿ ರೂ.೪೦ ಕೋಟಿ ಖರ್ಚು ಮಾಡಿರಬಹುದೆಂದು ಸುದ್ದಿ ಮಾಧ್ಯಮಗಳಲ್ಲಿ ವರದಿಯಾಗಿದೆ.

ದೇಶದಲ್ಲಿ ಬ್ಯಾಂಕಿಂಗ್ ವಂಚನೆಗಳು ೨೦೧೮–೧೯ರಲ್ಲಿ ಶೇಕಡಾ ೭೩ರಷ್ಟು ಏರಿಕೆ ಯಾಗಿದ್ದು, ರೂ.೭೧,೫೦೦ ಕೋಟಿಗೆ ತಲುಪಿದೆ ಎಂದು ರಿಸರ್ವ್ ಬ್ಯಾಂಕ್ ವರದಿ ತಿಳಿಯಪಡಿಸಿದೆ. ೨೦೧೪ರಲ್ಲಿ ನರೇಂದ್ರ ಮೋದಿಯವರು ಪ್ರಧಾನಮಂತ್ರಿ ಪದವಿಗೆ ಬಂದಾಗ್ಗಿನಿಂದ ನಿರಂತರವಾಗಿ ಬ್ಯಾಂಕಿಂಗ್ ವಂಚನೆ ಪ್ರಕರಣಗಳು ವರ್ಷದಿಂದ ವರ್ಷಕ್ಕೆ ಏರಿಕೆಯಾಗುತ್ತಲೇ ಬಂದಿವೆ. ಏನು ಮಾಡಿದ್ದಾರೆ ಮೋದಿಯವರು? ಮುಂದೆ ಏನು ಮಾಡುವವರಿದ್ದಾರೆ? ಬ್ಯಾಂಕ್‌ಗಳಿಂದ ಸಾಲ ಪಡೆದು ಅದನ್ನು ಮರುಪಾವತಿ ಮಾಡದ ಸುಸ್ತಿದಾರರ ಹೆಸರುಗಳ ಪಟ್ಟಿಯನ್ನು ಸಹ ಪ್ರಕಟಿಸಲು ಕೇಂದ್ರ ಸರ್ಕಾರ ಸಿದ್ಧವಿಲ್ಲ. ಸುಪ್ರೀಂ ಕೋರ್ಟಿನ ಆದೇಶವನ್ನೂ ನಿರ್ಲಕ್ಷ್ಯ ಮಾಡಿದೆ ಮೋದಿ ಸರ್ಕಾರ.

ಇಂದು ದೇಶದ ಪರಿಸ್ಥಿತಿ ನಿಜವಾಗಿಯೂ ಗಂಭೀರವಾಗಿದೆ. ಜನ ತಮ್ಮ ಭವಿಷ್ಯದ ಬಗ್ಗೆ, ಮುಂದಿನ ಪೀಳಿಗೆಯ ಬದುಕಿನ ಬಗ್ಗೆ, ದೇಶದ ಐಕ್ಯತೆ, ಸಮಗ್ರತೆಯ ಬಗ್ಗೆ ನಿರ್ಲಕ್ಷ್ಯ ಮಾಡುವ ಹಾಗಿಲ್ಲ. ಚಿಂತನೆ ಮಾಡಬೇಕು. ಇದು ಚುನಾವಣಾ ಸೋಲು ಗೆಲುವಿನ ಪ್ರಶ್ನೆಯಲ್ಲ. ಉಳಿವಿನ ಅಳಿವಿನ ಪ್ರಶ್ನೆ. ನಡೆಯಲಿ ಆತ್ಮಶೋಧನೆ.

**ನ. ಸುಂದರಮೂರ್ತಿ**
ನಂ.೧೪, ೬ನೇ ಅಡ್ಡರಸ್ತೆ, ಶ್ರೀರಾಂಪುರ
ಬೆಂಗಳೂರು – ೫೬೦ ೦೨೧

ಗಿರೀಶರ ಕನ್ನಡ ನಾಟಕಗಳು ಹಿಂದೀ ರಂಗಭೂಮಿಯ ವ್ಯಾಕರಣವನ್ನೇ ಬದಲಾಯಿಸಿದುವು.

– *ಎಂ. ಕೆ. ರೈನಾ*, ನಿರ್ದೇಶಕ

ಇತಿಹಾಸ ಮತ್ತು ಪುರಾಣಗಳು ಶಾಶ್ವತವೆಂದು ಡಂಗುರ ಬಾರಿಸುತ್ತಿರುವ ಹೊತ್ತಲ್ಲಿ ಕಾರ್ನಾಡರು ಅದರ ವಿರುದ್ಧ ದಿಕ್ಕಿನಲ್ಲಿ ಹೊರಟು ಅವೆಷ್ಟು ಫ್ಲೆಕ್ಸಿಬಲ್ ಎಂಬುದನ್ನು ತೋರಿಸಿಕೊಟ್ಟರು.

– *ಅನುರಾಧಾ ಕಪೂರ್*, ಎನ್‌ಎಸ್‌ಡಿ

ಕನ್ನಡದ ಲೇಖಕರು ಇಷ್ಟೊಂದು ಶಕ್ತಿಶಾಲಿಗಳಾಗಲು ಅವರಿಗಿರುವ ವಚನ ಚಳುವಳಿಯ ಹಿನ್ನೆಲೆಯೇ ಕಾರಣ.

– *ಸಚ್ಚಿದಾನಂದನ್*, ಕವಿ

ಅತ್ಯುತ್ಕೃಷ್ಟವಾದ ಪ್ರಾಮಾಣಿಕ ಹುಡುಕಾಟವನ್ನು ಕೊನೆವರೆಗೆ ಕಾರ್ನಾಡರು ಉಳಿಸಿಕೊಂಡಿದ್ದರು. ಇದು ಸುಲಭವಾದ ಕೆಲಸವಲ್ಲ.

– *ಟಿ. ಎಂ. ಕೃಷ್ಣ*, ಕಲಾವಿದ

# ‘ಹುಸಿ ಪ್ರಜ್ಞೆ’ಯನ್ನು ಹುಟ್ಟುಹಾಕುವ ಮಾಧ್ಯಮ ವ್ಯವಸ್ಥೆ :

## ಮಾರ್ಕ್ಸ್ ಮಾಧ್ಯಮ ಸಿದ್ಧಾಂತ

ಹೊಸತು-೨೦
ವಿಶೇಷ ಲೇಖನ

‘ಹುಸಿ ಪ್ರಜ್ಞೆ’ ನುಡಿಗಟ್ಟನ್ನು ಮಾರ್ಕ್ಸ್ ಬಳಸಿಲ್ಲ ಎನ್ನುವುದು ನಿಜವಾದರೂ, ಮಾರ್ಕ್ಸ್ ಚಿಂತಕರು ಈ ಪ್ರಾಕ್ಕಲ್ಪನೆಯನ್ನು ವ್ಯಾಪಕವಾಗಿ ಬಳಸಿಕೊಂಡು ಬಂದಿದ್ದಾರೆ. ಹುಸಿ ಪ್ರಜ್ಞೆ ಎಂದರೆ ಶ್ರಮಿಕ ವರ್ಗದ ಜನ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಸ್ವಾಭಾವಿಕವಾಗಿ ತೋರಿಬರುವ ಅಸಮಾನತೆ, ದಬ್ಬಾಳಿಕೆ, ಶೋಷಣೆಗಳನ್ನು ಗ್ರಹಿಸದೆ ಇರುವ ಮಾನಸಿಕ ಸ್ಥಿತಿ. ಇದಕ್ಕೆ ಕಾರಣವಾಗಿರುವ ಅಂಶ ಬೂರ್ಷ್ವಾಸೀಗಳ ಸಂಯೋಜಿತ ಪ್ರಚಾರ ತಂತ್ರ. ಈ ಪ್ರಚಾರ ತಂತ್ರಗಳ ಉದ್ದೇಶ ತಮ್ಮ ಹಿತಾಸಕ್ತಿಗಳಿಗೆ ಪೂರಕವಾದ ನಂಬಿಕೆಗಳು ಮತ್ತು ಮೌಲ್ಯಗಳನ್ನು ವ್ಯವಸ್ಥಿತವಾಗಿ ಜನರಲ್ಲಿ ಬಿತ್ತುವುದು ಮತ್ತು ಆ ಮೂಲಕ ಅವರು ತಮ್ಮ ಬದುಕಿನ ವಾಸ್ತವಗಳನ್ನು ತಪ್ಪಾಗಿ ಗ್ರಹಿಸುವಂತೆ ಮಾಡುವುದೇ ಆಗಿರುತ್ತದೆ. ಈ ಬಗೆಯ ‘ಹುಸಿ ಪ್ರಜ್ಞೆ’ ಸಾಮಾಜಿಕ ಮತ್ತು ಆರ್ಥಿಕ ಸಂದರ್ಭದ ನೈಜ ಸ್ವರೂಪವನ್ನು ಗ್ರಹಿಸಲಿಕ್ಕೆ ತಡೆಯಾಗುತ್ತದೆ ಎನ್ನುವುದು ಮಾರ್ಕ್ಸ್ ಚಿಂತಕರ ಅಭಿಪ್ರಾಯ.

**ಡಾ॥ ಎಚ್. ಎಸ್. ಈಶ್ವರ**

ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನದ ಕೆಲವು ವಿಜ್ಞಾನಿಗಳು ಮತ್ತು ಚಿಂತಕರ ಆವಿಷ್ಕಾರಗಳು ಮತ್ತು ಸಿದ್ಧಾಂತಗಳಿಂದ ನಮ್ಮ ಇಂದಿನ ಬದುಕು ಮತ್ತು ವಿಚಾರಗಳು ಪ್ರಭಾವಿತಗೊಂಡಿವೆ. ಅಂಥವರ ಪಟ್ಟಿಯಲ್ಲಿ ಅವಶ್ಯಕವಾಗಿ ಉಲ್ಲೇಖಿಸಬೇಕಾದ ಹೆಸರುಗಳು: ಕಾರ್ಲ್ ಮಾರ್ಕ್ಸ್ (ಮಾರ್ಕ್ಸ್ ಸಿದ್ಧಾಂತ), ಚಾರ್ಲ್ಸ್ ಡಾರ್ವಿನ್ (ವಿಕಾಸವಾದ), ಸಿಗ್ಮಂಡ್ ಫ್ರಾಯ್ಡ್ (ಮನೋವಿಶ್ಲೇಷಣೆ), ಆಲ್ಬರ್ಟ್ ಐನ್‌ಸ್ಟೈನ್ (ಸಾಪೇಕ್ಷ ಸಿದ್ಧಾಂತ), ಮತ್ತು ಮಹಾತ್ಮ ಗಾಂಧಿ (ಅಹಿಂಸಾವಾದ ಮತ್ತು ಸತ್ಯಾಗ್ರಹ). ವಿಶೇಷವಾಗಿ ಮಾರ್ಕ್ಸ್ ಸಿದ್ಧಾಂತದ ವ್ಯಾಪ್ತಿ ಮತ್ತು ಪ್ರಭಾವ ಗಮನಾರ್ಹವಾದದ್ದು. ಸಮಾಜದ ಎಲ್ಲ ಆಗುಹೋಗುಗಳನ್ನು ಆರ್ಥಿಕ ವ್ಯವಸ್ಥೆ ನಿಯಂತ್ರಿಸುತ್ತದೆ ಎನ್ನುವ ಮಾರ್ಕ್ಸ್‌ನ ಆರ್ಥಿಕ ನಿಯತಿ ಸಿದ್ಧಾಂತ ಕಳೆದ ಒಂದು ಶತಮಾನಕ್ಕೂ ಮಿಗಿಲಾದ ಅವಧಿಯಲ್ಲಿ ಪ್ರಪಂಚದ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಗಳ ಮೇಲೆ ಕ್ರಾಂತಿಕಾರಕ ಪರಿಣಾಮಗಳನ್ನು ಉಂಟುಮಾಡಿದ್ದು ಈಗ ಇತಿಹಾಸ. ಅದನ್ನು ಆರ್ಥಿಕ ನಿಯತಿ ಸಿದ್ಧಾಂತವೆಂದು ವ್ಯಾಖ್ಯಾನಿಸಲಾಗಿದೆಯಾದರೂ ಏಂಗೆಲ್ಸ್, ಜೋಸೆಫ್ ಬ್ಲಾಕ್‌ಗೆ ಸೆಪ್ಟೆಂಬರ್ ೧೮೯೦ರಲ್ಲಿ ಬರೆದ ಪತ್ರಗಳಲ್ಲಿ ಅದನ್ನು ನಿಯತಿ ಸಿದ್ಧಾಂತವೆಂದು ತಿಳಿಯಬಾರದೆಂದು ಸ್ಪಷ್ಟಪಡಿಸಿದ್ದಾನೆ. ಅವನ ಮಾತಿದು: “ಇತಿಹಾಸ ಭೌತವಾದಿ ಪರಿಕಲ್ಪನೆಯಂತೆ ಅಂತಿಮವಾಗಿ ಇತಿಹಾಸದಲ್ಲಿ ನಿರ್ಧಾರಿತ ಅಂಶವು ಉತ್ಪಾದನೆ ಮತ್ತು ಪುನರುತ್ಪಾದನೆ, ಮಾರ್ಕ್ಸ್ ಮತ್ತು ನಾನು ಅದಕ್ಕಿಂತಲೂ ಹೆಚ್ಚಿನದೇನನ್ನೂ ಹೇಳಿಲ್ಲ. ಆರ್ಥಿಕ ಸಂಗತಿಗಳಷ್ಟೇ ನಿರ್ಧಾರಕವೆಂಬುದು ಅರ್ಥವಿಲ್ಲದ ಅಮೂರ್ತ ಮತ್ತು ಅಸಂಗತ ತತ್ತ್ವವಾಗುತ್ತವೆ. ಆರ್ಥಿಕ ಸಂಗತಿಗಳಿಗೆ ಒತ್ತು ಕೊಡುವುದರಲ್ಲಿ ನಾನು ಮತ್ತು ಮಾರ್ಕ್ಸ್ ಸ್ವಲ್ಪ ಉತ್ಪ್ರೇಕ್ಷೆ ಮಾಡಿದ್ದು ಏಕೆಂದರೆ ಆರ್ಥಿಕ ಸಂಗತಿಗಳು ಪ್ರಧಾನ. ಅದನ್ನು ನಗಣ್ಯವಾಗಿಸಬಾರದು ಎಂದು ಒತ್ತಿ ಹೇಳಲು, ಅಷ್ಟೆ.”

ತಳಪಾಯ ಮತ್ತು ಮೇಲಂತಸ್ತು ಮಾರ್ಕ್ಸ್‌ನ ಸಿದ್ಧಾಂತದ ಎರಡು ಪ್ರಮುಖ ಪ್ರಾಕ್ಕಲ್ಪನೆಗಳು. ಉತ್ಪಾದನಾ ವ್ಯವಸ್ಥೆ ಮತ್ತು ಆ ಪ್ರಕ್ರಿಯೆಯಲ್ಲಿನ ಸಂಬಂಧಗಳು ಎಂದರೆ ಸರಕು ಸಾಮಗ್ರಿಗಳು, ಸಂಪನ್ಮೂಲಗಳು, ಕಾರ್ಖಾನೆಗಳು, ಕೆಲಸಗಾರರು, ಮಾಲೀಕರು ಎಲ್ಲವೂ ಸಮಾಜದ ತಳಪಾಯ. ಈ ತಳಪಾಯದ ಮೇಲೆ ನಿರ್ಮಿತವಾಗುವ ಉಳಿದೆಲ್ಲವೂ ಮೇಲಂತಸ್ತಿನ ಅಂಗಾಂಶಗಳು. ಸಂಸ್ಕೃತಿ, ವಿಚಾರಧಾರೆ, ನಂಬಿಕೆಗಳು, ಮೌಲ್ಯಗಳು, ಕಟ್ಟುಕಟ್ಟಳೆಗಳು, ನಿರೀಕ್ಷೆಗಳು, ಸಂಸ್ಥೆಗಳು ಇವೆಲ್ಲವೂ ಮೇಲಂತಸ್ತಿನ ಭಾಗಗಳು. ಇಲ್ಲಿ ಪ್ರಮುಖವಾಗಿ ಪರಿಗಣಿಸಬೇಕಾದ ಅಂಶವೆಂದರೆ ಸಮಾಜದ ಎಲ್ಲ ಆಗುಹೋಗುಗಳನ್ನು ನಿಯಂತ್ರಿಸುವ ತಳಪಾಯ ಒಂದು ವರ್ಗದ ಆಧಿಪತ್ಯಕ್ಕೆ ಒಳಗಾಗಿದ್ದು, ಆ ವರ್ಗದ ಹಿತಾಸಕ್ತಿಗಳು ಸತತವಾಗಿ ಮುಂದುವರಿದುಕೊಂಡು ಹೋಗುತ್ತವೆ. ಅವರೇ ಸ್ವತ್ತಿನ ಮಾಲೀಕರು; ಅದು ಶ್ರೀಮಂತ ವರ್ಗ. ಮಾರ್ಕ್ಸ್‌ನ ಪರಿಭಾಷೆಯಲ್ಲಿ ಬೂರ್ಷ್ವಾಸೀ. ಇವರು ತಮ್ಮ ಸಂಪತ್ತು ಮತ್ತು ಅಧಿಕಾರವನ್ನು ಬಳಸಿಕೊಂಡು ತಮ್ಮ ಐಶ್ವರ್ಯವನ್ನು ಮತ್ತಷ್ಟು ವೃದ್ಧಿಗೊಳಿಸುತ್ತಲೇ ಮುಂದುವರಿಯುತ್ತಾರೆ. ಸಮಾಜದ ಬಹುಸಂಖ್ಯಾತರು ಶ್ರಮಿಕರು. ಮಾರ್ಕ್ಸ್‌ನ ಭಾಷೆಯಲ್ಲಿ ಪ್ರೋಲಿಟೇರಿಯಟ್: ಬಡವರು, ಕೂಲಿಕಾರರು, ಕಾರ್ಮಿಕರು. ಅವರ ಶ್ರಮ ಮತ್ತು ಸಮಯ ಶ್ರೀಮಂತ ವರ್ಗದ ಸೇವೆಗೆ ಮೀಸಲು. ತಮ್ಮ ಬದುಕನ್ನು ಸಾಗಿಸಲು ಕಾರ್ಮಿಕ ವರ್ಗ ಶ್ರೀಮಂತರನ್ನು ಅವಲಂಬಿಸುವುದು ಅನಿವಾರ್ಯ. ಬಡವರ ಈ ಅಸಹಾಯಕ ಸನ್ನಿವೇಶದ ಪ್ರಯೋಜನ ಬಳಸಿಕೊಂಡು ಶ್ರೀಮಂತರು ಕಡಿಮೆ ಖರೀದಿಯಲ್ಲಿ ಕಾರ್ಮಿಕರ ಅಧಿಕ ಶ್ರಮ ಮತ್ತು ಸಮಯವನ್ನು ಪಡೆದುಕೊಳ್ಳುವ ಮೂಲಕ ತಮ್ಮ ಲಾಭಗಳನ್ನು ಅತ್ಯಧಿಕವಾಗಿಸಿಕೊಳ್ಳುತ್ತಾರೆ. ಪ್ರೋಲಿಟೇರಿಯಟ್‌ರ

ಶೋಷಣೆಯ ಮೂಲಕ ಬೂರ್ಜ್ವಾಸೀ ವರ್ಗ ತನ್ನ ಶ್ರೀಮಂತಿಕೆ ಮತ್ತು ಅಧಿಕಾರವನ್ನು ಶಾಶ್ವತಗೊಳಿಸಿಕೊಳ್ಳುವ ಪ್ರಕ್ರಿಯೆ ಮುಂದುವರಿದುಕೊಂಡು ಹೋಗುತ್ತದೆ.




ಮಾರ್ಕ್ಸ್‌ನ ಪ್ರಕಾರ ಮೇಲಂತಸ್ತು ತಳಪಾಯದಿಂದ ರೂಪಗೊಳ್ಳುತ್ತದೆ ಮತ್ತು ಅದನ್ನು ನಿಯಂತ್ರಿಸುವ ಆಡಳಿತಶಾಹಿಯ ಹಿತಾಸಕ್ತಿಗಳನ್ನು ಅಭಿವ್ಯಕ್ತಿಗೊಳಿಸುತ್ತದೆ, ತಳಪಾಯದ ಕಾರ್ಯ ವಿಧಾನವನ್ನು ಸಮರ್ಥಿಸುವ ಮೂಲಕ ಆಡಳಿತವರ್ಗದ ಪ್ರಾಬಲ್ಯವನ್ನು ಸ್ಥಿರೀಕರಿಸುತ್ತದೆ.

ಮಾಧ್ಯಮ ವ್ಯವಸ್ಥೆ ಮತ್ತು ಅವುಗಳ ಕಾರ್ಯಾಚರಣೆಗಳ ವಿಶ್ಲೇಷಣೆಗೆ ಮಾರ್ಕ್ಸ್ ಸಿದ್ಧಾಂತವನ್ನು ಸಹ ಬಳಸಬಹುದಾಗಿದೆ. ಮಾರ್ಕ್ಸ್‌ನ ಜೀವಿತ ಕಾಲದಲ್ಲಿ ಮಾಧ್ಯಮಗಳು ಇಂದಿನ ಬೃಹತ್ ರೂಪದಲ್ಲಿ ಬೆಳೆದಿರಲಿಲ್ಲ; ಹಾಗಾಗಿ ಮಾರ್ಕ್ಸ್ ಮಾಧ್ಯಮಗಳನ್ನು ಕುರಿತಂತೆ ನೇರವಾಗಿ ವ್ಯಾಖ್ಯಾನಿಸಿದ್ದು ಕಡಿಮೆ. ಹಾಗಾದರೂ ಮಾರ್ಕ್ಸ್ ನಂತರದ ವಿದ್ವಾಂಸರು ಮಾರ್ಕ್ಸ್‌ನ ತತ್ವಗಳನ್ನು ಆಧರಿಸಿ ಮಾಧ್ಯಮಗಳನ್ನು ಕುರಿತಂತೆ ವ್ಯಾಪಕ ಚಿಂತನೆಗಳನ್ನು ನಡೆಸಿದ್ದಾರೆ. ಈ ಚಿಂತನೆಗಳನ್ನು ಒಟ್ಟಾಗಿ ಮಾರ್ಕ್ಸ್‌ನ ಮಾಧ್ಯಮ ಸಿದ್ಧಾಂತ ಎಂದು ಪ್ರತಿಪಾದಿಸಲಾಗುತ್ತಿದೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಸಂಭವಿಸಿದ ಕೈಗಾರಿಕೀಕರಣ ಮತ್ತು ತಂತ್ರಜ್ಞಾನದಲ್ಲಿನ ಆವಿಷ್ಕಾರಗಳು ಮಾಧ್ಯಮ ಬೆಳವಣಿಗೆಗೆ ಪ್ರೇರಕವಾಗಿ, ಅವು ಸಮಾಜದ ಇತರ ವ್ಯವಸ್ಥೆಗಳಾದ ಕಾರ್ಯಾಂಗ, ಶಾಸಕಾಂಗ, ನ್ಯಾಯಾಂಗಗಳ ಜೊತೆಯಲ್ಲಿ ನಾಲ್ಕನೆಯ ಅಂಗ ಎಂಬ ಪ್ರಮುಖ ಸ್ಥಾನವನ್ನು ಪಡೆದುಕೊಂಡವು. ಸಮಾಜದಲ್ಲಿ ಮಾಧ್ಯಮಗಳ ಕಾರ್ಯನಿರ್ವಹಣೆ ಕುರಿತಂತೆ ಎರಡು ಪ್ರಮುಖ ದೃಷ್ಟಿಕೋನಗಳನ್ನು ಗುರುತಿಸಬಹುದು. ಒಂದು, ಉದಾರ–ಬಹುತ್ವವಾದಿ ವಿಶ್ಲೇಷಣೆ; ಇನ್ನೊಂದು ವಿಮರ್ಶಾತ್ಮಕ–ಮಾರ್ಕ್ಸ್ ನಿಲುವು. ಉದಾರ–ಬಹುತ್ವವಾದಿಗಳ ಪ್ರಕಾರ ಪ್ರಜಾಪ್ರಭುತ್ವ ಆಳ್ವಿಕೆಯ ಸಂದರ್ಭದಲ್ಲಿ 'ವಿಚಾರಗಳ ಮುಕ್ತ ಮಾರುಕಟ್ಟೆ' ಇರುತ್ತದೆ; ಅಂತಹ ವಾತಾವರಣದಲ್ಲಿ ವಿಭಿನ್ನ ಅಭಿಪ್ರಾಯ ಮತ್ತು ದೃಷ್ಟಿಕೋನಗಳು ನಾಗರಿಕರಿಗೆ ಲಭ್ಯವಿದ್ದು, ತಮ್ಮದೇ ನಿರ್ಧಾರಗಳಿಗೆ ಅವಕಾಶಗಳು ಇರುತ್ತವೆ. ಸಮಾಜದ ನೀತಿನಿಯಮಗಳನ್ನು, ಕಟ್ಟುಪಾಡುಗಳನ್ನು ರೂಪಿಸುವಲ್ಲಿ ಮಾಧ್ಯಮಗಳು ಪ್ರಭಾವಿ ಪಾತ್ರ ಹೊಂದಿದ್ದು, ಅವುಗಳನ್ನು ಕಾಯ್ದುಕೊಳ್ಳುವಲ್ಲಿ ಅವು 'ಕಾವಲುಗಾರ' (ವಾಚ್‌ಡಾಗ್) ಪಾತ್ರ ನಿರ್ವಹಿಸುತ್ತವೆ. ನಾಗರಿಕ ಹಿತಾಸಕ್ತಿಗಳಿಗೆ ಪೂರಕವಾಗಿ ಕೆಲಸ ಮಾಡುತ್ತವೆ. ಈ ನಿಲುವನ್ನು ವಿರೋಧಿಸುವ ವಿಮರ್ಶಾತ್ಮಕ–ಮಾರ್ಕ್ಸಿಸ್ಟ್ ಚಿಂತಕರ ವಿಚಾರಧಾರೆ ಬೇರೆಯೇ ಆಗಿದೆ. ಅವರ ಪ್ರಕಾರ ಬಂಡವಾಳಶಾಹಿ ಪ್ರಜಾಪ್ರಭುತ್ವ ರಾಜಕೀಯ ವ್ಯವಸ್ಥೆ ವರ್ಗಾಧಾರಿತವಾಗಿದ್ದು, ಅಲ್ಲಿನ ಕಾನೂನು ಕಟ್ಟಳೆಗಳು ವರ್ಗ ಸಂಘರ್ಷದಲ್ಲಿ ಆಳುವ ವರ್ಗದ ಪಕ್ಷಪಾತಿಗಳಾಗಿ ರಚನೆಯಾಗುತ್ತವೆ ಮತ್ತು ಆಳ್ವಿಕೆಗೆ ಒಳಪಟ್ಟವರ ಶೋಷಣೆಗೆ ಅನುಕೂಲವಾಗಿರುತ್ತವೆ. ಈ ಮಾತು ಮಾಧ್ಯಮಗಳ ಕಾರ್ಯ ನಿರ್ವಹಣೆಗೆ ಸಹ ಅನ್ವಯವಾಗುತ್ತದೆ. ಬಂಡವಳಿಗರೇ ಮಾಧ್ಯಮಗಳ ಮಾಲೀಕತ್ವ ಹೊಂದಿರುವ ಕಾರಣ, ಸಂಭವಿಸುವ ಯಾವುದೇ ತಾತ್ವಿಕ ಸಂಘರ್ಷದಲ್ಲಿ ಅವು ಬಲಿಷ್ಠ ವರ್ಗದ ಹಿತಾಸಕ್ತಿಗಳನ್ನೇ ಪ್ರತಿಧ್ವನಿಸುತ್ತವೆ.

ಸಾಮಗ್ರಿಗಳ ಉತ್ಪಾದನೆ ಯಾವ ವರ್ಗದ ವಶದಲ್ಲಿರುತ್ತದೋ ಮಾನಸಿಕ ಉತ್ಪನ್ನಗಳು ಅದೇ ವರ್ಗದ ನಿಯಂತ್ರಣಕ್ಕೆ ಒಳಗಾಗುತ್ತವೆ. ಮಾನಸಿಕ ಉತ್ಪನ್ನಗಳ ಸಾಧನಗಳಿಂದ ವಂಚಿತ ವರ್ಗ ಸಹಜವಾಗಿಯೇ ಅದನ್ನು ನಿಯಂತ್ರಿಸುವ ಮೇಲ್ವರ್ಗದವರ ವಿಚಾರ ಯಾ ಚಿಂತನೆಗಳಿಗೆ ವಶವಾಗುವುದು ಅನಿವಾರ್ಯ. ಒಂದು ನಿರ್ದಿಷ್ಟ ಕಾಲಘಟ್ಟದಲ್ಲಿ ಯಾವುದೇ ಸಮಾಜದಲ್ಲಿ ಪ್ರಚಲಿತವಾದ ಆಲೋಚನೆಗಳು, ಆಡಳಿತ ವರ್ಗ ತನ್ನ ಸ್ಥಾನವನ್ನು ಭದ್ರಗೊಳಿಸಿಕೊಳ್ಳುವ ಯಾ ಸಮರ್ಥಿಸಿಕೊಳ್ಳುವ ಸಲುವಾಗಿ ಪೋಷಿಸಿದ ಚಿಂತನೆಗಳೇ ಆಗಿರುತ್ತವೆ. ಸಾಮಾನ್ಯರ ಭಾವನೆಗಳು ಮತ್ತು ಮೌಲ್ಯಗಳು ರಾಜಕೀಯ ಮತ್ತು ಆರ್ಥಿಕ ಮುಖಂಡರ ಆಲೋಚನೆಗಳಿಗಿಂತ ಬೇರೆಯದೇ ಆದ ಅಸ್ತಿತ್ವವನ್ನು ಪಡೆದುಕೊಳ್ಳದಂತೆ ನಿರ್ವಹಿಸುವ ಪ್ರಕ್ರಿಯೆ ಸತತವಾಗಿ ಮುಂದುವರಿಯುತ್ತಲೇ ಸಾಗುತ್ತದೆ. ಪರಿಣಾಮವಾಗಿ, ಆಳುವ ವರ್ಗವನ್ನು ಬೆಂಬಲಿಸುವ, ಸಮರ್ಥಿಸುವ ಐಡಿಯಾಲಜಿ (ಸಿದ್ಧಾಂತ) ಸ್ವಾಭಾವಿಕ ಎನ್ನಬಹುದಾದ ರೀತಿಯಲ್ಲಿ ಸಮಾಜದಲ್ಲಿ ಸೃಷ್ಟಿಗೊಳ್ಳುತ್ತದೆ. ಮಾರ್ಕ್ಸ್ ಮತ್ತು ಏಂಗೆಲ್ಸ್ ಹೇಳುವಂತೆ, "ಪ್ರತಿಯೊಂದು ಕಾಲದ ಸನ್ನಿವೇಶದಲ್ಲೂ ಆಳುವ ವರ್ಗದ ವಿಚಾರ ಧಾರೆಯು ಸಮಾಜದ ಆಳುವ ವಿಚಾರಧಾರೆಯಾಗಿ ಕಾರ್ಯ ನಿರ್ವಹಿಸುತ್ತದೆ." (ಮಾರ್ಕ್ಸ್ ಮತ್ತು ಏಂಗೆಲ್ಸ್, ೧೮೪೫).

ಕ್ಲಾಸಿಕಲ್ ಮಾರ್ಕ್ಸ್ ಸಿದ್ಧಾಂತದಲ್ಲಿ ಮಾಧ್ಯಮಗಳು ಉತ್ಪಾದನೆಯ ಸಾಧನಗಳು; ಬಂಡವಾಳಶಾಹಿ ಸಮಾಜಗಳಲ್ಲಿ ಮಾಧ್ಯಮಗಳು ಆಡಳಿತವರ್ಗದ ಸ್ವತ್ತಾಗಿದ್ದು, ಅವು ಬಂಡವಾಳಶಾಹಿಯ ಆಲೋಚನೆಗಳು ಮತ್ತು ದೃಷ್ಟಿಕೋನಗಳನ್ನೊಳಗೊಂಡ ವಿಚಾರಗಳನ್ನು ಪ್ರಚುರಪಡಿಸುವ ಕರ್ತವ್ಯಗಳನ್ನು ನಡೆಸಿಕೊಂಡು ಹೋಗುತ್ತವೆ. ಈ ವಾದದ ಮುಂದುವರಿದ ಭಾಗ, ಯಾರಿಗೆ ಉತ್ಪಾದನಾ ಸರಕುಗಳ ಮೇಲೆ ಹಿಡಿತವಿರುತ್ತದೋ ಅವರು ಮಾನಸಿಕ ಉತ್ಪನ್ನಗಳನ್ನೂ ಸಹ, ಎಂದರೆ ಜನರ ಅರಿವು ಮತ್ತು ಭಾವನೆಗಳನ್ನು ಕೂಡ ಮೂಲತಃ ನಿಯಂತ್ರಿಸುತ್ತಾರೆ. ಬೇರೆ ಮಾತುಗಳಲ್ಲಿ ಹೇಳಬಹುದಾದರೆ, ಉತ್ಪಾದನಾ ಸಾಮಗ್ರಿಗಳ ಒಡೆಯರು ಮಾನಸಿಕ ಸರಕುಗಳ ಸೃಷ್ಟಿಕರ್ತರೂ ಆಗುತ್ತಾರೆ. ತಮ್ಮ ಪರವಾದ ವಿಚಾರಗಳನ್ನು ವ್ಯಾಪಕವಾಗಿ ಪ್ರಚಾರ ಮಾಡುವ ಮತ್ತು ವಿರೋಧಿ ಭಾವನೆಗಳನ್ನು ಹತ್ತಿಕ್ಕುವ ಮೂಲಕ ವಂಚಿತ ವರ್ಗಗಳ ಆಲೋಚನೆ ಮತ್ತು ಅಭಿಪ್ರಾಯಗಳನ್ನು ನಿರ್ವಹಿಸಲಾಗುತ್ತದೆ. ಈ ಪ್ರಕ್ರಿಯೆ ಕೆಳವರ್ಗದ (ಎಂದರೆ ಕಾರ್ಮಿಕರು, ಕೂಲಿಕಾರರು, ಬಡವರ) ಜನರಲ್ಲಿ 'ಹುಸಿ ಪ್ರಜ್ಞೆ'ಯನ್ನು (False consciousne) ಹುಟ್ಟುಹಾಕುವಲ್ಲಿ ಪರ್ಯವಸಾನವಾಗುತ್ತದೆ. ಹಾಗಲ್ಲದುದನ್ನು ಹಾಗೆಂದು ತಿಳಿಯುವುದನ್ನು 'ಹುಸಿ ಪ್ರಜ್ಞೆ' ಎನ್ನಲಾಗುತ್ತದೆ.

'ಹುಸಿ ಪ್ರಜ್ಞೆ' ನುಡಿಗಟ್ಟನ್ನು ಮಾರ್ಕ್ಸ್ ಬಳಸಿಲ್ಲ ಎನ್ನುವುದು ನಿಜವಾದರೂ, ಮಾರ್ಕ್ಸ್ ಚಿಂತಕರು ಈ ಪ್ರಾಕ್ಕಲ್ಪನೆಯನ್ನು ವ್ಯಾಪಕವಾಗಿ ಬಳಸಿಕೊಂಡು ಬಂದಿದ್ದಾರೆ. ಹುಸಿ ಪ್ರಜ್ಞೆ ಎಂದರೆ ಶ್ರಮಿಕ ವರ್ಗದ ಜನ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಸ್ವಾಭಾವಿಕವಾಗಿ ತೋರಿಬರುವ ಅಸಮಾನತೆ, ದಬ್ಬಾಳಿಕೆ, ಶೋಷಣೆಗಳನ್ನು ಗ್ರಹಿಸದೆ ಇರುವ ಮಾನಸಿಕ ಸ್ಥಿತಿ. ಇದಕ್ಕೆ ಕಾರಣವಾಗಿರುವ ಅಂಶ ಬೂರ್ಜ್ವಾಸೀಗಳ ಸಂಯೋಜಿತ ಪ್ರಚಾರ ತಂತ್ರ. ಈ ಪ್ರಚಾರ ತಂತ್ರಗಳ ಉದ್ದೇಶ ತಮ್ಮ ಹಿತಾಸಕ್ತಿಗಳಿಗೆ ಪೂರಕವಾದ ನಂಬಿಕೆಗಳು ಮತ್ತು ಮೌಲ್ಯಗಳನ್ನು ವ್ಯವಸ್ಥಿತವಾಗಿ ಜನರಲ್ಲಿ ಬಿತ್ತುವುದು ಮತ್ತು ಆ ಮೂಲಕ ಅವರು ತಮ್ಮ ಬದುಕಿನ ವಾಸ್ತವಗಳನ್ನು ತಪ್ಪಾಗಿ ಗ್ರಹಿಸುವಂತೆ ಮಾಡುವುದೇ ಆಗಿರುತ್ತದೆ. ಈ ಬಗೆಯ 'ಹುಸಿ ಪ್ರಜ್ಞೆ' ಸಾಮಾಜಿಕ ಮತ್ತು ಆರ್ಥಿಕ ಸಂದರ್ಭದ ನೈಜ ಸ್ವರೂಪವನ್ನು ಗ್ರಹಿಸಲಿಕ್ಕೆ ತಡೆಯಾಗುತ್ತದೆ ಎನ್ನುವುದು ಮಾರ್ಕ್ಸ್ ಚಿಂತಕರ ಅಭಿಪ್ರಾಯ. ಸಾಂಸ್ಕೃತಿಕ ವಲಯವನ್ನು ಸಹ ಹುಸಿ ಪ್ರಜ್ಞೆಯ ಪೋಷಣೆಗೆ ಸಾಧನವಾಗಿಸಿಕೊಳ್ಳುವುದುಂಟು.

ಬಂಡವಾಳಶಾಹಿಗಳ ನಿಯಂತ್ರಣಕ್ಕೊಳಪಟ್ಟ ಮಾಧ್ಯಮಗಳು ಹುಸಿ ಪ್ರಜ್ಞೆಯನ್ನು ಸೃಷ್ಟಿಸುತ್ತವೆ ಎನ್ನುವ ವಾದ ಒಂದು ಹಂತದಲ್ಲಿ ವಿಪರೀತವಾದದ್ದು ಎಂದು ಪರಿಗಣಿಸಲೂಬಹುದು. ಬಂಡವಾಳಶಾಹಿ ವರ್ಗದಲ್ಲೂ ಆಂತರಿಕ ಭಿನ್ನಾಭಿಪ್ರಾಯಗಳು ಇರಬಹುದು; ಹಾಗಾಗಿ ಮಾಧ್ಯಮಗಳಲ್ಲೂ ಸ್ವಲ್ಪಮಟ್ಟಿನ ವೈವಿಧ್ಯತೆ ಕಾಣಬಹುದು. ಮಿಗಿಲಾಗಿ, ಮಾಧ್ಯಮಗಳ ಬಳಕೆದಾರರು ಮಾಧ್ಯಮಗಳ ಹೊರತಾಗಿ ಬೇರೆ ಮೂಲಗಳಿಂದಲೂ ತಮ್ಮ ಅರಿವನ್ನು ಪಡೆದುಕೊಳ್ಳುವ ಸಾಧ್ಯತೆಗಳು ಇಲ್ಲದೆ ಇಲ್ಲ. ಹಾಗಾದರೂ ಮಾಧ್ಯಮಗಳ ಒಡೆತನದ ವ್ಯವಸ್ಥೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ, ಮಾಧ್ಯಮಗಳ ವೈವಿಧ್ಯತೆಯ ವಾದಕ್ಕೆ ಸಮರ್ಥನೀಯ ಪುರಾವೆ ಲಭ್ಯವಾಗುವುದಿಲ್ಲ. ವಾಸ್ತವದಲ್ಲಿ, ಪ್ರಪಂಚದ ಎಲ್ಲೆಡೆ ಮಾಧ್ಯಮಗಳ ಒಡೆತನ ಹೆಚ್ಚು ಕೇಂದ್ರೀಕೃತವಾಗಿದ್ದು, ಕೇವಲ ಕೆಲವೇ ವ್ಯಕ್ತಿ ಅಥವಾ ಸಂಸ್ಥೆಗಳ ಸ್ವಾಧೀನದಲ್ಲಿರುವುದು ತೋರಿಬರುತ್ತದೆ.

ಸಾಮಾಜಿಕ ಜಾಲತಾಣಗಳು ಇತ್ತೀಚಿನ ದಿನಗಳಲ್ಲಿ ಸಾಕಷ್ಟು ಬಳಕೆಯಾಗುತ್ತಿರುವ ಒಂದು ತಾಂತ್ರಿಕ ಬೆಳವಣಿಗೆ. ಇವುಗಳ ಬಳಕೆದಾರರು ಯಾವುದೇ ನಿಯಂತ್ರಣಕ್ಕೆ ಒಳಗಾಗದೆ ತಮ್ಮ ವಿಚಾರಗಳನ್ನು, ಭಾವನೆಗಳನ್ನು ವ್ಯಕ್ತಪಡಿಸುವ ಹಾಗೂ ವಿನಿಮಯ ಮಾಡಿಕೊಳ್ಳಬಹುದಾದ ಸಾಧ್ಯತೆ ಇದೆ. ಸದ್ಯದ ಪರಿಸ್ಥಿತಿಯಲ್ಲಿ ಇವುಗಳ ಬಳಕೆ ಕೂಡ ಕೇವಲ ಯಾವುದೋ ಒಂದು ವರ್ಗದ ಜನರಿಗೆ ಮಾತ್ರ ದಕ್ಕುವಂಥದು ಎನ್ನುವ ಸತ್ಯವನ್ನು ಮರೆಯಬಾರದು.

ಮಾರ್ಕ್ಸ್ ಸಿದ್ಧಾಂತದ ಹಿನ್ನೆಲೆಯಲ್ಲಿ ಮಾಧ್ಯಮಗಳನ್ನು ವಿಮರ್ಶೆಗೆ ಒಳಪಡಿಸಿದ ಪ್ರಮುಖರಲ್ಲಿ ನೋಮ್ ಚೋಮ್‌ಸ್ಕಿ ಮಹತ್ವದ ಸ್ಥಾನ ಪಡೆದುಕೊಂಡಿದ್ದಾನೆ. ಚೋಮ್‌ಸ್ಕಿ ಮೂಲತಃ ಭಾಷಾಶಾಸ್ತ್ರಜ್ಞ, ತತ್ವಜ್ಞಾನಿ ಮತ್ತು ಮಾನವತಾವಾದಿ. ಎಡ್ವರ್ಡ್ ಹರ್ಮನ್ ಜೊತೆಯಲ್ಲಿ ಚೋಮ್‌ಸ್ಕಿ ಬರೆದಿರುವ ಪುಸ್ತಕ, 'ಮ್ಯಾನುಫ್ಯಾಕ್ಚರಿಂಗ್ ಕನ್ಸೆಂಟ್: ದಿ ಪೊಲಿಟಿಕಲ್ ಎಕಾನಮಿ ಆಫ್ ಮಾಸ್ ಮೀಡಿಯ', ಬಂಡವಾಳಶಾಹಿ ಸಮಾಜದಲ್ಲಿ, ಅದರಲ್ಲೂ ಪ್ರಮುಖವಾಗಿ ಅಮೆರಿಕಾ ಮಾಧ್ಯಮ ವ್ಯವಸ್ಥೆಯ ಒಡೆತನ ಮತ್ತು ಪ್ರಭಾವ ಕುರಿತ ಮಾರ್ಕ್ಸ್‌ವಾದಿ ವ್ಯಾಖ್ಯಾನವಾಗಿದೆ. 'ಸಂಯೋಜಿತ ಪ್ರಚಾರ ಮಾದರಿ' (ಪ್ರಾಪಗ್ಯಾಂಡ ಮಾಡೆಲ್) ಎಂದು ಕರೆಯಲಾಗುವ ಸಿದ್ಧಾಂತವು, ಸಮೂಹ ಮಾಧ್ಯಮಗಳಲ್ಲಿ ಪ್ರಚಾರ ತಂತ್ರ ಹೇಗೆ ಬಳಕೆಯಾಗುತ್ತದೆ ಎನ್ನುವ ವಿಚಾರದ ವಿವರಣೆಯಾಗಿದೆ. ಸಮೂಹ ಮಾಧ್ಯಮಗಳನ್ನು ಹೇಗೆ ಸ್ವಾರ್ಥಸಾಧನೆಗಾಗಿ ಸಂಯೋಜಿತ ಪ್ರಚಾರದ ಮೂಲಕ ದುರುಪಯೋಗಗೊಳಿಸಿಕೊಳ್ಳಲಾಗುವುದು ಮತ್ತು ಯಾವೊಂದು ಸಮೂಹದ ಸಾಮಾಜಿಕ, ಆರ್ಥಿಕ, ರಾಜಕೀಯ ಅಭಿವ್ಯಕ್ತಿಗಳನ್ನು ತಮ್ಮ ಹಿತಾಸಕ್ತಿಗಳಿಗೆ ಅನುಗುಣವಾಗಿ ರೂಪಿಸಬಹುದು ಎನ್ನುವ ವಿಚಾರವನ್ನು ಪ್ರಚಾರ ಮಾದರಿ ಪ್ರತಿಪಾದಿಸುತ್ತದೆ.

ಚೋಮ್‌ಸ್ಕಿ ಸಿದ್ಧಾಂತಕ್ಕೆ ಅಮೆರಿಕಾದ ಬಂಡವಾಳಶಾಹಿ ಸಮಾಜ ಮತ್ತು ಅಲ್ಲಿನ ಮಾಧ್ಯಮಗಳು ಆಧಾರವಾಗಿದ್ದರೂ ಸಹ, ಅದು ಬೇರೆ ದೇಶಗಳ ಮಾಧ್ಯಮ ಕಾರ್ಯನಿರ್ವಹಣೆಗೂ ಸಮನಾಗಿ ಅನ್ವಯಿಸುತ್ತದೆ. ಪ್ರಚಾರ ಮಾದರಿಯ ವಿವರಣೆಯನ್ನು ಚೋಮ್‌ಸ್ಕಿ ಮತ್ತು ಅವನ ಸಹಲೇಖಕ ಹರ್ಮನ್ ಅವರ ಮಾತುಗಳಲ್ಲಿ ಹೀಗೆ ನಿರೂಪಿಸಬಹುದು: "ಸಂಪತ್ತು ಮತ್ತು ಅಧಿಕಾರಗಳ ಅಸಮಾನತೆ ಸಮೂಹ ಮಾಧ್ಯಮಗಳ ಆಸಕ್ತಿಗಳು ಮತ್ತು ಆಯ್ಕೆಗಳನ್ನು ಹೇಗೆ ವಿವಿಧ ಹಂತಗಳಲ್ಲಿ ಪರಿಣಾಮಕಾರಿಯಾಗಿ ನಿಯಂತ್ರಿಸುತ್ತವೆ ಎನ್ನುವತ್ತ ಸಂಯೋಜಿತ ಪ್ರಚಾರ ಮಾದರಿಯು ತನ್ನ ಗಮನವನ್ನು ಕೇಂದ್ರೀಕರಿಸುತ್ತದೆ. ಹಣ ಮತ್ತು ಅಧಿಕಾರ ಹೇಗೆ ಮುದ್ರಿತವಾಗುವ ಅಥವಾ ಬಿತ್ತರವಾಗುವ ಸುದ್ದಿಗಳನ್ನು ಶೋಧಿಸುವ, ಭಿನ್ನಾಭಿಪ್ರಾಯಗಳನ್ನು ಅಮುಖ್ಯಗೊಳಿಸುವ, ಮತ್ತು ಸರ್ಕಾರ ಅಥವಾ ಬಲಾಢ್ಯ ಖಾಸಗೀ ಹಿತಾಸಕ್ತಿಗಳು ತಮ್ಮ ಸಂದೇಶಗಳನ್ನು ಸಾರ್ವಜನಿಕರಿಗೆ ತಲುಪಿಸುವ ಪ್ರಕ್ರಿಯೆಯಲ್ಲಿ ಅನುಸರಿಸುವ ಮಾರ್ಗಗಳನ್ನು ಸಂಯೋಜಿತ ಪ್ರಚಾರ ಮಾದರಿ ಪತ್ತೆಹಚ್ಚುತ್ತದೆ."

ಹರ್ಮನ್-ಚೋಮ್‌ಸ್ಕಿ ಪ್ರಕಾರ ಮಾಧ್ಯಮ ಒಂದು ಉದ್ದಿಮೆಯಾಗಿ ಕಾರ್ಯ ನಿರ್ವಹಿಸುತ್ತದೆ. ಅದು ತನ್ನ ಉತ್ಪನ್ನಗಳನ್ನು ಬೇರೆ ಉದ್ದಿಮೆದಾರರಿಗೆ (ಉದಾ: ಜಾಹೀರಾತುದಾರರಿಗೆ) ವ್ಯಾಪಾರ ಮಾಡುತ್ತದೆ. ಈ ವ್ಯವಹಾರದಲ್ಲಿ ಮಾಧ್ಯಮಗಳು ವಾಸ್ತವ ಸಂಗತಿಗಳನ್ನು ವಿಕೃತಗೊಳಿಸಿ, ಸುದ್ದಿಯ ಮೂಲ ಸ್ವರೂಪವನ್ನು ತನ್ನ ಗಿರಾಕಿಗಳ ಅನುಕೂಲಕ್ಕೆ ಪೂರಕವಾಗುವಂತೆ ಕುಶಲತೆ ಯಿಂದ ನಿರ್ವಹಿಸುತ್ತವೆ. ಈ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ಅಡಕವಾಗಿರುವ ಕಾರಕಾಂಶಗಳನ್ನು 'ಶೋಧಕಗಳು' (ಫಿಲ್ಟರ್ಸ್) ಎಂಬುದಾಗಿ ಹೆಸರಿಸಿ, ಅಂತಹ ಐದು ಶೋಧಕಗಳನ್ನು ಪಟ್ಟಿಮಾಡಿದ್ದಾರೆ. ಸಂಕ್ಷಿಪ್ತವಾಗಿ ಆ ಶೋಧಕಗಳ ಕಾರ್ಯವೈಖರಿ ಹೀಗಿರುತ್ತದೆ:




**೧. ಮಾಧ್ಯಮಗಳ ಒಡೆತನ ಅಥವಾ ಮಾಲಿಕತ್ವ:** ಬಹುತೇಕ ಮಾಧ್ಯಮ ಸಂಸ್ಥೆಗಳು ಕೆಲವೇ ಕೆಲವು ಗಣ್ಯರ ಹಿಡಿತಕ್ಕೆ ಒಳಪಟ್ಟಿರುತ್ತವೆ. ಪ್ರಮುಖ ಸುದ್ದಿ ವಾಹಿನಿಗಳು, ಪತ್ರಿಕೆಗಳು, ಪ್ರಕಾಶನ ಸಂಸ್ಥೆಗಳು ಮತ್ತು ಇತರೆ ಮಾಧ್ಯಮ ಸಲಕರಣೆಗಳು, ಬೃಹತ್ ಸಂಸ್ಥೆಗಳು ಅಥವಾ ವಾಣಿಜ್ಯ ಒಕ್ಕೂಟಗಳ ಒಡೆತನದಲ್ಲಿ ಕಾರ್ಯ ನಿರ್ವಹಿಸುತ್ತವೆ. ಸಹಜವಾಗಿಯೇ ಈ ಮಾಲಿಕರು ಮಾಧ್ಯಮಗಳ ಕಾರ್ಯನಿರ್ವಹಣೆಯ ಮೇಲೆ ಪ್ರಭಾವ ಬೀರುತ್ತಾರೆ. ಸಾರ್ವಜನಿಕರಿಗೆ ಒದಗಿಸುವ ಸುದ್ದಿಗಳು ಮತ್ತು ಅಭಿಪ್ರಾಯಗಳು ಮಾಲಿಕರ ವಾಣಿಜ್ಯ ಅಥವಾ ರಾಜಕೀಯ ಹಿತಾಸಕ್ತಿಗಳಿಗೆ ಅನುಗುಣವಾಗಿ ತಿರುಚಲ್ಪಡುತ್ತವೆ; ತಮ್ಮ ಲಾಭಕ್ಕಾಗಿ ಸುದ್ದಿಯ ವಸ್ತುನಿಷ್ಠತೆ ಹಾಗೂ ಪಾವಿತ್ರ್ಯವನ್ನು ಅಪಾಯಕ್ಕೆ ಗುರಿ ಮಾಡಲಾಗುತ್ತದೆ. ಬೃಹತ್ ಸಂಸ್ಥೆಗಳ ಆರ್ಥಿಕ ಹಿತಾಸಕ್ತಿಗಳಿಗೆ ಮಾರಕವಾಗಬಹುದಾದ ಯಾವುದೇ ವಿಚಾರಗಳು ಸಹಜವಾಗಿಯೇ ಅತಿ ಹೆಚ್ಚಿನ ಪಕ್ಷಪಾತಕ್ಕೆ ಈಡಾಗುತ್ತವೆ ಮತ್ತು ಸೆನ್ಸಾರ್‌ಗೆ ಗುರಿಯಾಗುತ್ತವೆ. ಈ ಮಾತುಗಳು ಸರ್ಕಾರಿ ಸ್ವಾಮ್ಯದಲ್ಲಿ ಕೆಲಸ ಮಾಡುವ ಮಾಧ್ಯಮ ವಾಹಿನಿಗಳಿಗೂ ಅನ್ವಯಿಸುತ್ತವೆ.

**೨. ಬಂಡವಾಳ ಬೆಂಬಲ :** ಮಾಧ್ಯಮಗಳ ಅಳಿವು ಉಳಿವು ಜಾಹೀರಾತುಗಳ ಮೂಲಕ ಪಡೆದುಕೊಳ್ಳುವ ಆದಾಯವನ್ನೇ ಬಹುಮಟ್ಟಿಗೆ ಅವಲಂಬಿಸುತ್ತದೆ ಎನ್ನುವುದು ಸತ್ಯ. ಜಾಹಿರಾತು ಬಂಡವಾಳದ ಬೆಂಬಲದಿಂದ ಮಾಧ್ಯಮಗಳು ತಮ್ಮ ಉತ್ಪನ್ನಗಳನ್ನು ಜನರಿಗೆ ಎಟಕುವ ಬೆಲೆಯಲ್ಲಿ ಒದಗಿಸಲು ಸಾಧ್ಯವಾಗುತ್ತದೆ. ಆ ಕಾರಣ ಜಾಹಿರಾತುದಾರರ ವ್ಯಾವಹಾರಿಕ ಹಿತಗಳನ್ನು ಕಾಯುವುದು ಕೂಡ ಮಾಧ್ಯಮಗಳಿಗೆ ತೀರಾ ಅವಶ್ಯಕ. ಜಾಹಿರಾತುದಾರರಿಗೆ ಧಕ್ಕೆಯಾಗಬಹುದಾದ ಸಂಗತಿಗಳನ್ನು ಮುಚ್ಚಿಹಾಕುವ, ಅವರಿಗೆ ಅನುಕೂಲಕರವಾದ ವಿಚಾರಗಳನ್ನು ವೈಭವೀಕರಿಸುವ ವ್ಯವಸ್ಥಿತ 'ಶೋಧನೆ'ಯಲ್ಲಿ ಮಾಧ್ಯಮಗಳು ಸದಾ ತೊಡಗಿಸಿ ಕೊಳ್ಳುತ್ತವೆ. ಈ ವ್ಯವಹಾರದಲ್ಲಿ ಮಾಧ್ಯಮಗಳು ತಮ್ಮ ನೈತಿಕತೆಯೊಂದಿಗೆ ರಾಜಿ ಮಾಡಿಕೊಳ್ಳುವುದು ಅನಿವಾರ್ಯವಾಗುತ್ತದೆ. ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿ ಪರಿಗಣಿಸಿದಾಗ ಮಾಧ್ಯಮಗಳ ಓದುಗರು ಅಥವಾ ವೀಕ್ಷಕರು ಒಂದು ಬಗೆಯ ಉತ್ಪನ್ನಗಳು. ಈ ಉತ್ಪನ್ನಗಳನ್ನು ಮಾಧ್ಯಮಗಳು ತಮ್ಮ ಜಾಹಿರಾತುದಾರರಿಗೆ ಮಾರಿಕೊಳ್ಳುತ್ತವೆ. ಈ ವ್ಯವಹಾರದಲ್ಲಿ ಒಂದು ಉತ್ಪನ್ನವಾಗಿ ಸುದ್ದಿ ಕೇವಲ ಗೌಣ; ಅದು ಯಾವುದೇ ಮಹತ್ವ ಇಲ್ಲದ ಸಂಗತಿ.

**೩. ಸುದ್ದಿ ಮೂಲಗಳು :** ದೊಡ್ಡ ದೊಡ್ಡ ಮಾಧ್ಯಮ ಸಂಸ್ಥೆಗಳು ಸಹ ತಮ್ಮ ಸುದ್ದಿ ಸಂಗ್ರಹಣೆ ಕಾರ್ಯದಲ್ಲಿ ಹಲವು ಮೂಲಗಳನ್ನು ಅವಲಂಬಿಸುತ್ತವೆ. ಅಂತಹ ಸುದ್ದಿ ಮೂಲಗಳನ್ನು ನಿರಂತರವಾಗಿ ಪೋಷಿಸಿ, ಪಾಲನೆ ಮಾಡಿಕೊಂಡು ಹೋಗುವ ಅನಿವಾರ್ಯತೆ ಮಾಧ್ಯಮಗಳಿಗೆ ಯಾವತ್ತೂ ಇರುತ್ತದೆ. ಆ ಕಾರಣ ಕೆಲವು ಆಯ್ದ ಮೂಲಗಳನ್ನು ಮೆಚ್ಚಿಸುವ, ಅವರ ನಿಲುವುಗಳನ್ನು ಧಾರಾಳವಾಗಿ ಅನುಮೋದಿಸುವ ಧೋರಣೆಯನ್ನು ಮಾಧ್ಯಮಗಳು ಪಾಲಿಸಿಕೊಂಡು ಬರುತ್ತವೆ. ಈ ಒಂದು ಧೋರಣೆಯಿಂದಾಗಿ ಸುದ್ದಿಯನ್ನು ವರದಿ ಮಾಡುವಲ್ಲಿ ವಸ್ತುನಿಷ್ಠತೆ ಕಳೆದುಹೋಗುವ ಅಪಾಯ ಇಲ್ಲದೆ ಇಲ್ಲ. ಒಂದು ರಾಷ್ಟ್ರದ ಅಧ್ಯಕ್ಷರು ಅಥವಾ ಪ್ರಧಾನಿಯ ಮಂತ್ರಾಲಯದ ವಕ್ತಾರರು, ಒಂದು ಉದ್ಯೋಗ ಸಂಸ್ಥೆಯ ಸಾರ್ವಜನಿಕ ಸಂಪರ್ಕಾಧಿಕಾರಿಗಳು, ಅಥವಾ ಇನ್ಯಾವುದೋ ಇಲಾಖೆಯ ಕಾರ್ಯದರ್ಶಿ ಗಳು ಈ ಬಗೆಯ ಸುದ್ದಿ ಮೂಲಗಳ ನಿದರ್ಶನಗಳು.

**೪. ಟೀಕೆಗಳು / ನಕಾರಾತ್ಮಕ ಪ್ರತಿಕ್ರಿಯೆಗಳು :** ಪ್ರಸಾರವಾದ ಕಾರ್ಯಕ್ರಮಗಳು ಅಥವಾ ಪ್ರಕಟಿತ ಸುದ್ದಿ ಸಮಾಚಾರಗಳಿಗೆ ಒದಗಿಬರುವ ನಕಾರಾತ್ಮಕ ಪ್ರತಿಕ್ರಿಯೆಗಳು ಸಹ ಮಾಧ್ಯಮ ನೀತಿಯನ್ನು ಪ್ರಭಾವಿತಗೊಳಿಸುವ 'ಶೋಧಕ'ಗಳಾಗಿ ಕೆಲಸ ಮಾಡುತ್ತವೆ. ತೀವ್ರತರ ನಕಾರಾತ್ಮಕ ಪ್ರತಿಕ್ರಿಯೆಗಳನ್ನು ಯಾವುದೇ ಮಾಧ್ಯಮಗಳು ಬಯಸುವುದಿಲ್ಲ. ತಮ್ಮ ಓದುಗರ, ವೀಕ್ಷಕರ ಅಥವಾ ಶ್ರೋತೃಗಳ

ಭಾವನೆಗಳನ್ನು ಘಾಸಿಗೊಳಿಸುವ ಅಥವಾ ಅವರ ತಿರಸ್ಕಾರಕ್ಕೆ ಒಳಗಾಗುವ ವಿಚಾರ ಯಾ ವಿಷಯಗಳನ್ನು ದೂರವಿಡುವ ಅಥವಾ ಅಂತಹ ವಿಚಾರಗಳನ್ನು ವರದಿ ಮಾಡುವಲ್ಲಿ ತೀವ್ರತೆಯನ್ನು ಆದಷ್ಟು ಕಡಿಮೆ ಮಾಡುವ ನೀತಿಯನ್ನು ಪಾಲಿಸುವುದು ಸಹ ಶೋಧಕ ಪ್ರಕ್ರಿಯೆಯ ರೂಪವೇ. ಹಾಗಾಗಿ ಮಾಧ್ಯಮಗಳು ತಾವು ಪ್ರದರ್ಶಿಸುವ ಅಥವಾ ಪ್ರಕಟಿಸುವ ವಿಷಯಗಳ ಆಯ್ಕೆಯಲ್ಲಿ ಜಾಗರೂಕ ನೀತಿಯನ್ನು ಅನುಸರಿಸಿಕೊಂಡು ಹೋಗುತ್ತವೆ. ಜನಪ್ರಿಯ ಸಿನೆಮಾ ನಟ ಅಥವಾ ಕ್ರಿಕೆಟ್ ತಾರೆಯ ಬಗೆಗಿನ ಅಪ್ರಿಯ ಸತ್ಯವೊಂದನ್ನು ತಿರುಚಬಹುದು; ಅಥವಾ ಗೌರವಾನ್ವಿತ ಧರ್ಮ ಪ್ರವರ್ತಕನ ಅನೀತಿ ನಡವಳಿಕೆಯನ್ನು ಮುಚ್ಚಿಹಾಕಬಹುದು. ಮಾಧ್ಯಮಗಳ ಸ್ವಂತ ಹಿತಾಸಕ್ತಿಗಳಿಗೆ ಚ್ಯುತಿ ತರಬಹುದಾದ ವಿವಾದಾತ್ಮಕ ವಿಚಾರಗಳಿಂದ ದೂರ ಉಳಿಯುವ ಪ್ರವೃತ್ತಿ ಸಹ ಈ ಶೋಧಕ ಪ್ರಕ್ರಿಯೆಯ ಪ್ರಮುಖ ಅಂಶವೇ ಆಗಿದೆ.



**೫. ಕಮ್ಯುನಿಸ್ಟ್ – ವಿರೋಧಿ ಪಕ್ಷಪಾತ :** ಹರ್ಮನ್ ಮತ್ತು ಚೋಮ್‌ಸ್ಕಿ ಶೋಧಕ ಪಟ್ಟಿಯಲ್ಲಿ ನಮೂದಿಸಲಾದ ಇನ್ನೊಂದು ಶೋಧಕ, ಕಮ್ಯುನಿಸ್ಟ್–ವಿರೋಧಿ ಪಕ್ಷಪಾತ. ಇದು ಅಮೆರಿಕದ ಬಂಡವಾಳಶಾಹಿ ಸಂದರ್ಭದಲ್ಲಿ ಮಾಧ್ಯಮಗಳು ಅನುಸರಿಸಿಕೊಂಡು ಬರುತ್ತಿರುವ ಒಂದು ಪೂರ್ವಗ್ರಹ ಕಾರ್ಯವೈಖರಿ. ಅಮೆರಿಕಾದ ಆಳುವ ಪಕ್ಷಗಳು ಮತ್ತು ಅಲ್ಲಿನ ಶ್ರೀಮಂತ ವರ್ಗ ಕಮ್ಯುನಿಸ್ಟ್ ಸಿದ್ಧಾಂತವನ್ನು ಸದಾ ಭಯ ಮತ್ತು ತಿರಸ್ಕಾರಗಳಿಂದ ಕಾಣುತ್ತಲೇ ಬಂದಿವೆ. ಕಮ್ಯುನಿಸಂ ಒಂದು 'ಪರಮಾವಧಿ ಕೆಡುಕು' ಎನ್ನುವ ಭಯ ಅಲ್ಲಿನ ಆಸ್ತಿವಂತರನ್ನು ಬಿಡದೆ ಕಾಡುತ್ತದೆ. ಶ್ರೀಮಂತ ವರ್ಗದ ಕೈಗೊಂಬೆಗಳಾಗಿರುವ ಅಲ್ಲಿನ ಮಾಧ್ಯಮಗಳು ಕಮ್ಯುನಿಸ್ಟ್ ಸಿದ್ಧಾಂತದ ಪರವಾದ ಅಭಿಪ್ರಾಯವನ್ನು ಪ್ರತಿಪಾದಿಸುವ ಗಂಡಾಂತರಕ್ಕೆ ಯಾವತ್ತೂ ಮುಂದಾಗುವುದಿಲ್ಲ. ಅಮೆರಿಕಾ ಮಾಧ್ಯಮಗಳ ಈ ವಿಶಿಷ್ಟ ನೀತಿ, ಬೇರೆ ರಾಷ್ಟ್ರಗಳಲ್ಲಿ ಬೇರೆ ರೀತಿಯಲ್ಲಿಯೇ – ಅಂದರೆ ಅಲ್ಲಿನ ಸಂದರ್ಭಗಳಿಗೆ ಅನ್ವಯವಾಗುವಂತೆ, ಇತರೆ ಸೈದ್ಧಾಂತಿಕ ತತ್ವಗಳ ನಿರಾಕರಣೆಯಲ್ಲಿ ಕಾರ್ಯಗತವಾಗುವ ಸಾಧ್ಯತೆಗಳು ಇದ್ದೇ ಇರುತ್ತವೆ.

ಮೇಲಿನ ಹರ್ಮನ್–ಚೋಮ್‌ಸ್ಕಿ 'ಸಂಯೋಜಿತ ಪ್ರಚಾರ ಮಾದರಿ' ಮಾಧ್ಯಮಗಳನ್ನು ಕುರಿತಂತೆ ಮಾರ್ಕ್ಸ್ ತತ್ವಗಳ ಆಧಾರದ ಮೇಲೆ ಪ್ರತಿಪಾದಿತವಾಗಿರುವ ಒಂದು ವಿಶ್ಲೇಷಣೆ ಮಾತ್ರ. ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿ ರೂಪಿತವಾಗಿರುವ ಇನ್ನೂ ಹಲವು ಮಾಧ್ಯಮ ವಿಶ್ಲೇಷಣೆಗಳು ಇವೆ. ಜರ್ಮನಿಯ ಫ್ರಾಂಕ್‌ಫರ್ಟ್ ಸ್ಕೂಲಿಗೆ ಸೇರಿದ ಥಿಯೊಡಾರ್ ಅಡಾರ್ನೊ ಮತ್ತು ಹರ್ಬರ್ಟ್ ಮಾರ್ಕೂಸ್, ಫ್ರೆಂಚ್ ಮಾರ್ಕ್ಸಿಸ್ಟ್ ತತ್ವಜ್ಞಾನಿ ಲೂಯಿ ಆಲ್ತೂಸರ್, ಬ್ರಿಟನ್ನಿನ ಸ್ಟೂವರ್ಟ್ ಹಾಲ್ ಇವರೇ ಮೊದಲಾದ ಚಿಂತಕರು ತಮ್ಮದೇ ಆದ ವಿಭಿನ್ನ ವಿಶ್ಲೇಷಣೆಗಳನ್ನು ಮುಂದಿಟ್ಟಿದ್ದಾರೆ. ಅವುಗಳ ವಿಸ್ತೃತ ಚರ್ಚೆ ಈ ಲೇಖನದ ವ್ಯಾಪ್ತಿಗೆ ಮೀರಿದ್ದು.

ಮಾಧ್ಯಮಗಳ ಬಗೆಗಿನ ಮಾರ್ಕ್ಸಿಸ್ಟ್ ಆಧಾರಿತ ಪರಿಕಲ್ಪನೆಗಳ ಸತ್ಯಾಸತ್ಯತೆಗಳನ್ನು ತುಲನೆ ಮಾಡಲು ಎಷ್ಟರಮಟ್ಟಿನ ಪುರಾವೆಗಳು ಇವೆ ಎನ್ನುವುದು ನಿರ್ಣಾಯಕ ಪ್ರಶ್ನೆ. ಹಲವು ರಾಷ್ಟ್ರಗಳ ಮಾಧ್ಯಮ ವ್ಯವಸ್ಥೆ, ಅವುಗಳ ಒಡೆತನ ಮತ್ತು ಕಾರ್ಯವೈಖರಿಗಳನ್ನು ಸ್ಥೂಲವಾಗಿ ಪರಿಶೀಲಿಸಿದರೆ, ಮಾರ್ಕ್ಸ್ ಚಿಂತಕರ ಕಾಳಜಿಗಳಿಗೆ ಸಾಕಷ್ಟು ಸಾಕ್ಷ್ಯ ಸಿಗುತ್ತದೆ. ಅಮೆರಿಕಾದ ಮಾಧ್ಯಮ ವ್ಯವಸ್ಥೆ ಈ ಹೇಳಿಕೆಗೆ ಜ್ವಲಂತ ಸಾಕ್ಷಿ. ಇದಕ್ಕೆ ಪುಷ್ಟೀಕರಣವನ್ನು ಭಾರತ ಮಾಧ್ಯಮ ವ್ಯವಸ್ಥೆಯಲ್ಲೂ ಕಾಣಬಹುದು. ಈ ಕುರಿತಂತೆ ಆಳವಾದ ಸಂಶೋಧನಾ ಅಧ್ಯಯನಗಳನ್ನು ನಡೆಸುವುದು ಪ್ರಸ್ತುತ ಸಂದರ್ಭದಲ್ಲಿ ಹಿಂದೆಂದಿಗಿಂತಲೂ ಹೆಚ್ಚು ಅಗತ್ಯ ಎನ್ನುವ ವಾಸ್ತವಾಂಶವದತ್ತ ನಮ್ಮ ಗಮನ ಹರಿಯಬೇಕು.

**ಡಾ॥ ಎಚ್. ಎಸ್. ಈಶ್ವರ**
"ಉತ್ತುಂಗ", ಹೆಚ್. ಐ. ಜಿ. ೧೧, ಕೆ. ಎಚ್. ಬಿ. ಕಾಲೋನಿ, ಮೊದಲ ಹಂತ
ಬಸವೇಶ್ವರನಗರ, ಬೆಂಗಳೂರು – ೫೬೦ ೦೭೯

# ಮುರುಟಿ ಹೋಗಿದೆ ಗಿಡ



**ಬೆ**ಳಗುವ ದೀಪ ಶಾಂತವಾಗಿದೆ ಯಾರಾದರೂ ಉರಿಸಿರಿ
ಮುರುಟಿ ಹೋಗಿದೆ ಗಿಡ ನೀವಾದರೂ ಚಿಗುರಿಸಿರಿ

ಇಂಗಲಾರದ ಹಸಿವು ಹೊತ್ತಿವೆ ಅನಾಥ ಮಕ್ಕಳು
ತಾಯಿ ಮಮತೆ ತೋರಿ ಊಟವಾದರೂ ಬಡಿಸಿರಿ

ಒರಟು ಬೆರಳುಗಳ ನಡುವೆ ಚಿಟ್ಟೆಯೊಂದು ಸಿಲುಕಿದೆ
ಲೋಕ ಸುತ್ತುವ ಬಣ್ಣದ ಹುಳದ ಪ್ರಾಣವಾದರೂ ಉಳಿಸಿರಿ

ಜಗಕೆ ಬೆಳಕು ನಗುವ ಎಳೆಯ ಚಿಣ್ಣರು
ದುಡಿತದಲಿ ಕಮರುವ ಕನಸುಗಳನಾದರೂ ಪೊರೆಯಿರಿ

ಕೋಮುಗಲಭೆಯ ಭೀತಿಗೆ ಊರೇ ತತ್ತರಿಸಿದೆ
ರಕ್ತದಿಂದ ಉರಿವ ಮನೆಗಳ ಕಿಚ್ಚನಾದರೂ ಆರಿಸಿರಿ

**ದಸ್ತಗೀರ್‌ಸಾಬ್ ದಿನ್ನಿ**
೮, ಪದ್ಮಾವತಿ ಕಾಲೋನಿ, ಆಸಾಪುರ ರಸ್ತೆ
ರಾಯಚೂರು – ೫೮೪ ೧೦೧




# ವೈದ್ಯರು ಆಸ್ಪತ್ರೆಗೆ ಹೋಗುವ ಮುನ್ನ

**ಕಾ**ಯಿಲೆ ಬೀಳದ ಮನುಷ್ಯನಿಲ್ಲ. ಹಸುಗೂಸಿನಿಂದ ಹಿಡಿದು ವೃದ್ಧರವರೆಗೆ, ಪ್ರತಿಯೊಬ್ಬರೂ ಒಂದು ವರ್ಷಕ್ಕೆ ಕನಿಷ್ಠ ಒಂದು ಸಲವಾದರೂ ಕಾಯಿಲೆ ಬೀಳುತ್ತಾರೆ. ಜ್ವರ, ಕೆಮ್ಮು, ನೆಗಡಿ, ವಾಂತಿ–ಭೇದಿ, ಶರೀರದ ವಿವಿಧ ಭಾಗಗಳಲ್ಲಿ ನೋವು, ಸುಸ್ತು, ನಿಶ್ಶಕ್ತಿಯಂತಹ ರೋಗಲಕ್ಷಣಗಳು, ಡಯಾಬಿಟಿಸ್, ಬಿಪಿ ಕಾಯಿಲೆ, ಕ್ಷಯ, ನ್ಯುಮೋನಿಯಾ, ಫಿಟ್ಸ್, ಮಾನಸಿಕ ಕಾಯಿಲೆಗಳು ಯಾರಿಗೆ ಬೇಕಾದರೂ ಬರಬಹುದು.

ಒಂದು ನಿರ್ದಿಷ್ಟ ಸಮಯ ಸ್ಥಳದಲ್ಲಿ ಶೇ. ೫೦ರಷ್ಟು ಜನರಿಗೆ ಅನಾರೋಗ್ಯ ನಿಶ್ಚಿತವಾಗಿರುತ್ತದೆ. ಕಾಯಿಲೆ ಬರಲು ಆರು ಕಾರಣಗಳನ್ನು ಗುರುತಿಸಲಾಗಿದೆ.

೧. ಅಪೌಷ್ಟಿಕತೆಯಿಂದ
೨. ಸೋಂಕು : ಬೆಕ್ಟೀರಿಯಾ, ವೈರಸ್, ಫಂಗಸ್ ನಂತಹ ಸೂಕ್ಷ್ಮಾಣು ಜೀವಿಗಳಿಂದ
೩. ವಿಷವಸ್ತುಗಳ ಸೇವನೆಯಿಂದ: ಆಹಾರಕ್ಕೆ ಸೇರಿಸುವ ರಾಸಾಯನಿಕಗಳು, ನೀರು – ಗಾಳಿ – ನೆಲದಲ್ಲಿರುವ ರೋಗಕಾರಕಗಳು, ತಂಬಾಕು, ಮದ್ಯಪಾನ, ಮಾದಕ ವಸ್ತುಗಳು
೪. ಪೆಟ್ಟುಗಾಯಗಳಿಂದ, ಅಂಗಾಂಗಗಳ ಸವೆತದಿಂದ
೫. ಮಾನಸಿಕ–ದೈಹಿಕ ಒತ್ತಡಗಳಿಂದ, ಜೀವನ ಶೈಲಿಯಿಂದ
೬. ವಂಶಪಾರಂಪರ್ಯವಾಗಿ – ಜೀನ್‌ಗಳಿಂದ

ಸ್ವಲ್ಪ ಎಚ್ಚರವಹಿಸಿದರೆ, ಹಿತಮಿತ ಆಹಾರ ಸೇವನೆ, ವ್ಯಾಯಾಮ, ವೈಯಕ್ತಿಕ ಮತ್ತು ಪರಿಸರ ಸ್ವಚ್ಛತೆ ಹಾಗೂ ಪ್ರಶಾಂತ ಮನಸ್ಸು ನಿಧಾನಗತಿಯ ಜೀವನ ಶೈಲಿಯಿಂದ, ಈ ಬಹುತೇಕ ಕಾಯಿಲೆಗಳನ್ನು ಬರದಂತೆ ತಡೆಗಟ್ಟಬಹುದು. ಆರೋಗ್ಯವಾಗಿ ಬದುಕಬಹುದು.

ಯಾವುದೇ ರೋಗಲಕ್ಷಣ ಕಾಣಿಸಿಕೊಂಡಾಗ, ಅದು ಯಾವ ರೋಗದ ಸೂಚಕ, ಯಾವ ಅಂಗಕ್ಕೆ

**ಡಾ|| ಸಿ. ಆರ್. ಚಂದ್ರಶೇಖರ್**

ಸಂಬಂಧಿಸಿದ ರೋಗ ಎಂದು ಪತ್ತೆ ಮಾಡಿ ಚಿಕಿತ್ಸೆ ನೀಡುವುದು ವೈದ್ಯರ ಕೆಲಸ. ಇಂದು ವೈದ್ಯ ಕ್ಷೇತ್ರ ಅಗಾಧ ಪ್ರಮಾಣದಲ್ಲಿ ಬೆಳೆದಿದೆ. ಅಲೋಪತಿ, ಆಯುರ್ವೇದ, ಹೋಮಿಯೋಪತಿ, ಯುನಾನಿ, ಸಿದ್ಧ ವ್ಯವಸ್ಥೆಯ ಜೊತೆಗೆ ಹತ್ತಾರು ಪರ್ಯಾಯ ವೈದ್ಯ ವ್ಯವಸ್ಥೆಗಳೂ ಕಾಣಿಸಿಕೊಂಡಿವೆ. ನ್ಯಾಚುರೋಪತಿ, ಪ್ರಾಣಿಕ್ ಹೀಲಿಂಗ್, ಅಕ್ಯುಪಂಕ್ಚರ್, ಅಕ್ಯುಪ್ರೆಶರ್, ರೇಖಿ, ಮ್ಯಾಗ್ನೆಟ್ ಥೆರಪಿ, ಯೋಗ–ಧ್ಯಾನ–ಪ್ರಾಣಾಯಾಮ, ಗಿಡ–ಮೂಲಿಕೆಗಳ ನಾಟಿಮದ್ದು, ಮನೆ ಮದ್ದು ಇತ್ಯಾದಿ. ಜೊತೆಜೊತೆಗೆ ಹಿಂದಿನಿಂದಲೂ ಉಳಿದು ಬೆಳೆದು ಬಂದಿರುವ, ಸಂಪ್ರದಾಯ ಚಿಕಿತ್ಸೆಗಳು (ದೇವಸ್ಥಾನ, ಚರ್ಚ್, ಮಸೀದಿಗಳ ಧಾರ್ಮಿಕ ಆಚರಣೆಗಳು ಗ್ರಹಗತಿ ಗ್ರಹಚಾರವನ್ನು ಬಿಡಿಸುವ ಜೋತಿಷ್ಯರು, ಮಂತ್ರ–ತಂತ್ರ ಭೂತೋಚ್ಚಾಟನೆ ಮಾಡುವ ಮಂತ್ರವಾದಿಗಳು ತಾಂತ್ರಿಕರು, ಸಂಖ್ಯಾಶಾಸ್ತ್ರಿಗಳು, ಜನ್ಮ ಪುನರ್ಜನ್ಮಗಳ ಸಿದ್ಧಾಂತವನ್ನು ಬಳಸುವವರು, ಕರ್ಮ ಸಿದ್ಧಾಂತಿಗಳು) ರೋಗ ಚಿಕಿತ್ಸೆಗೆ ಮುಂದಾಗಿವೆ. ಯಾವ ಕಾಯಿಲೆಗೆ ಯಾವುದು ಉತ್ತಮ, ಗ್ಯಾರಂಟಿ ಗುಣ ಯಾವುದರಿಂದ ಎನ್ನುವುದರ ಬಗ್ಗೆ ಒಬ್ಬೊಬ್ಬರು ಒಂದೊಂದು ಹೇಳಿ ನಮ್ಮ ತಲೆ ಬಿಸಿ ಮಾಡುತ್ತಾರೆ. 'ನನ್ನ ಕಾಯಿಲೆ ಏನು ಅಂತ ಯಾರೂ ಕಂಡುಹಿಡಿಯಲಿಲ್ಲ. ಕಾಯಿಲೆ ವಾಸಿಯಾಗಲಿಲ್ಲ' ಎನ್ನುವ ಹತಾಶ ರೋಗಿಗಳು ಈಗ ಎಲ್ಲೆಡೆ ಕಾಣಸಿಗುತ್ತಾರೆ. ಸಾವಿರಾರು ಲಕ್ಷಾಂತರ ರೂಪಾಯಿಗಳನ್ನು ಸಮಯ ಶ್ರಮವನ್ನು ಖರ್ಚು ಮಾಡಿದರೂ, ಕಾಯಿಲೆ ವಾಸಿಯಾಗದೇ ಪರದಾಡುತ್ತಾರೆ. ಏಕೆ ಹೀಗೆ? ಯಾವ ವೈದ್ಯ, ಯಾವ ವೈದ್ಯ ವ್ಯವಸ್ಥೆ ಉತ್ತಮ ಎಂಬ ಪ್ರಶ್ನೆಗೆ ಉತ್ತರ ಸಿಗುವುದೇ ಇಲ್ಲ. ಈಗ ಒಂದೊಂದು ಅಂಗಕ್ಕೆ ಒಂದೊಂದು ಕಾಯಿಲೆಗೆ ಒಬ್ಬ ತಜ್ಞ ವೈದ್ಯ. ವಿಶೇಷ ತಜ್ಞ ವೈದ್ಯ ಹುಟ್ಟಿಕೊಂಡು 'ಮಲ್ಟಿ ಸ್ಪೆಶಾಲಿಟಿ



ನಂಬಲರ್ಹವಾದ ವೈದ್ಯರೊಬ್ಬರನ್ನು ಹಾಗೂ ಚಿಕ್ಕ – ಸಣ್ಣ ಪ್ರಮಾಣದ ಆಸ್ಪತ್ರೆಯನ್ನು ಆಯ್ಕೆ ಮಾಡಿಕೊಳ್ಳಿ. ಇಲ್ಲಿ ದೊಡ್ಡನೆಯ ಕ್ಯೂ ಇರುವುದಿಲ್ಲ. ಅಪರಿಚಿತರು ಇರುವುದಿಲ್ಲ. ನೇರವಾಗಿ ವೈದ್ಯರನ್ನು ಕಾಣಬಹುದು. ಪ್ರಶ್ನೆ ಮಾಡಿ ವಿವರಗಳನ್ನು ಪಡೆಯಬಹುದು. ಔಷಧಿ – ಚಿಕಿತ್ಸಾ ವಿವರಗಳ ಬಗ್ಗೆ ಅನುಮಾನಗಳನ್ನು ಪರಿಹರಿಸಿಕೊಳ್ಳಬಹುದು. ಫೀಸ್ ಕಡಿಮೆ ಇರುತ್ತದೆ. ಅದೇ ಹೈಟೆಕ್ ಆಸ್ಪತ್ರೆಗಳು ನರ್ಸಿಂಗ್ ಹೋಂಗಳಲ್ಲಿ 'ನೀವು ಅಪರಿಚಿತರಾಗಿ ಅನಾಥರಾಗುತ್ತೀರಿ. ಇವುಗಳು ಕೇಳುವ ಫೀಸ್ ಕೊಡುವ ಬಿಲ್‌ಗಳು ನಿಮ್ಮ ಜೇಬಿಗೆ ಕತ್ತರಿಹಾಕುತ್ತವೆ. ಅವುಗಳಿಗೆ ಹೋಗದಿರುವುದೇ ಕ್ಷೇಮ. ಸರ್ಕಾರಿ ಆಸ್ಪತ್ರೆಗಳು. ಸೇವಾಸಂಸ್ಥೆಗಳು ನಡೆಸುವ ಆಸ್ಪತ್ರೆಗಳ ತಜ್ಞರು ಉತ್ತಮ.

ಆಸ್ಪತ್ರೆಗಳು ಅಥವಾ ಒಂದು ನಿರ್ದಿಷ್ಟ ಅಂಗಾಂಗಕ್ಕೆ ಒಂದು ಸೂಪರ್‌ಸ್ಪೆಶಾಲಿಟಿ ಆಸ್ಪತ್ರೆಗಳು ನಗರ ಪಟ್ಟಣ ಪ್ರದೇಶಗಳಲ್ಲಿ ತಲೆ ಎತ್ತಿ ನಿಂತಿವೆ. ಶೇಕಡಾ ೮೦ರಷ್ಟು ಹೆಚ್ಚಿನ ಆಸ್ಪತ್ರೆಗಳು ಖಾಸಗೀ ವಲಯದಲ್ಲಿದ್ದು, ಒಂದು ದೊಡ್ಡ ಉದ್ಯಮ (Medical Industry)ವಾಗಿ ಮಾರ್ಪಟ್ಟಿವೆ. ಉದ್ಯಮ ಎಂದ ಮೇಲೆ ಲಾಭವೇ ಪರಮಗುರಿ. ಉತ್ತಮ ಸೇವೆಯ ಖಾತ್ರಿ ನೀಡಿ, ದೊಡ್ಡ ಮೊತ್ತದ ಬಿಲ್ ನೀಡುತ್ತವೆ. ಸೇವೆ ಹೆಸರಿನಲ್ಲಿ ವ್ಯಾಪಾರ – ಮೋಸ – ವಂಚನೆ – ಅಕ್ರಮ – ಅನೈತಿಕ ವ್ಯವಹಾರ ನಡೆಯುತ್ತಿದೆ. ಹೈಟೆಕ್ ತಪಾಸಣಾ ವಿಧಾನಗಳು, ಔಷಧಿಗಳು, ಶಸ್ತ್ರಚಿಕಿತ್ಸೆಗಳು, ಒಬ್ಬ ರೋಗಿಯನ್ನು ನೋಡಿಕೊಳ್ಳಲು ಹಲವು ತಜ್ಞ ವಿಭಾಗಗಳು ಸೃಷ್ಟಿಯಾಗಿ ವೈದ್ಯಕೀಯ ಚಿಕಿತ್ಸೆ ಅತಿ ದುಬಾರಿಯಾಗುತ್ತಿದೆ. ಶೇಕಡಾ ೬೦ರಷ್ಟು ಜನ ತಮ್ಮ ಮನೆ – ಆಸ್ತಿಪಾಸ್ತಿ ಮಾರಿ ಸಾಲ ಸೋಲ ಮಾಡಿ ಹಣ ಹೊಂದಿಸಿಕೊಳ್ಳುತ್ತಾರೆ. ಬಡತನಕ್ಕೆ ಜಾರುತ್ತಿದ್ದಾರೆ. ಕಾಯಿಲೆಯ ಜೊತೆಗೆ, ಆರ್ಥಿಕ ಸಂಕಷ್ಟಕ್ಕೆ ಸಿಲುಕಿಕೊಳ್ಳುತ್ತಾರೆ.



ಹೊಟ್ಟೆ ತುಂಬಿದ ಮೇಲೆ ಸಾಕು ಎನಿಸುತ್ತದೆ
ನಾಲಿಗೆಗೆ ರುಚಿ ಹತ್ತಿದರೆ ಇನ್ನಷ್ಟು ಬೇಕು ಎನಿಸುತ್ತದೆ
ಹೊಟ್ಟೆಯ ಮಾತು ಕೇಳಿ
ನಾಲಿಗೆ ಮಾತನ್ನು ಕೇಳಬೇಡಿ
ಆರೋಗ್ಯವಾಗಿರುತ್ತೀರಿ.

ಡಾ॥ ಸಿ. ಆರ್. ಚಂದ್ರಶೇಖರ್
ಬೆಂಗಳೂರು

ಆದ್ದರಿಂದ ಯಾವುದೇ ರೋಗಲಕ್ಷಣ ಕಾಣಿಸಿಕೊಂಡಾಗ, ವೈದ್ಯರನ್ನು ಕಾಣುವ, ಆಸ್ಪತ್ರೆಗೆ ಹೋಗುವ ನಿರ್ಧಾರ ಮಾಡುವಾಗ, ಈ ಅಂಶಗಳನ್ನು ಗಮನಿಸಿ.

ನಿಮ್ಮ ವಾಸಸ್ಥಳದ ಸಮೀಪದಲ್ಲಿ, ಜನರಲ್ ಪ್ರಾಕ್ಟೀಶನರ್ ಯಾರಿದ್ದಾರೆ. ಅವರು ಎಷ್ಟು ಕಾಲದಿಂದ ಅಲ್ಲಿ ಪ್ರಾಕ್ಟೀಸ್ ಮಾಡುತ್ತಿದ್ದಾರೆ. ಅವರ ವಿದ್ಯಾರ್ಹತೆ ಏನು? ಜನ ಅವರ ಬಗ್ಗೆ ಏನು ಅಭಿಪ್ರಾಯ ಕೊಡುತ್ತಾರೆ? ಅವರ ಫೀಸ್ ಎಷ್ಟು? ಕಡಿಮೆ ಔಷಧಿ ಬರೆದು ಕೊಡುತ್ತಾರಾ? ಹೆಚ್ಚಿನ ಔಷಧಿಗಳನ್ನು ಬರೆದುಕೊಡುತ್ತಾರಾ? ಒಂದು ನಿರ್ದಿಷ್ಟ ಔಷಧಿ ಅಂಗಡಿಯಲ್ಲೇ ತೆಗೆದುಕೊಳ್ಳಲು ಸೂಚಿಸುತ್ತಾರಾ? ರೋಗಿಗಳೊಂದಿಗೆ ಸರಾಗವಾಗಿ ಮಾತನಾಡಿ, ರೋಗಿಗಳ ಪ್ರಶ್ನೆಗಳಿಗೆ ಉತ್ತರ ಕೊಡುತ್ತಾರಾ? ಯಾವ ತಜ್ಞ ವೈದ್ಯರನ್ನು ಕಾಣಲು ಹೇಳುತ್ತಾರೆ? ಒಂದು ನಿರ್ದಿಷ್ಟ ಆಸ್ಪತ್ರೆಗೆ ಹೋಗಲು ಸೂಚಿಸುತ್ತಾರಾ? ಫೋನ್ ನಂಬರ್ ಕೊಡುತ್ತಾರಾ? ತುರ್ತು ಅಗತ್ಯ ಬಿದ್ದರೆ ಮನೆಗೆ ಬಂದು ನೋಡುತ್ತಾರಾ? ಎಂದು ವಿಚಾರಿಸಿ. ಒಬ್ಬ 'ಜನ ಸ್ನೇಹಿ ವೈದ್ಯರನ್ನು' ಆಯ್ಕೆ ಮಾಡಿಕೊಳ್ಳಿ. ಹೋಗಿ ಪರಿಚಯ ಮಾಡಿಕೊಳ್ಳಿ. ಆ ವೈದ್ಯ ಅಲೋಪತಿ ವೈದ್ಯನಾಗಿರಬಹುದು, ಆಯುರ್ವೇದ, ಹೋಮಿಯೋಪತಿ ವೈದ್ಯನಾಗಿರಬಹುದು. ಆಯ್ಕೆ ನಿಮ್ಮದೇ. ಪ್ರಚಾರದ ಭರಾಟೆಯಲ್ಲಿ ಟಿ.ವಿ. ಸುದ್ದಿ ಪತ್ರಿಕೆಗಳ ಮೂಲಕ ಆರ್ಯುರ್ವೇದ, ಹೋಮಿಯೋ ವೈದ್ಯರು ತಾವೇ ಸರ್ವೋತ್ತಮರು, ತಮ್ಮಲ್ಲಿ ಎಲ್ಲ ರೋಗಗಳಿಗೆ ರಾಮಬಾಣದಂತಹ ಸಿದ್ಧೌಷಧಗಳಿವೆ, ಗುಣ ಗ್ಯಾರಂಟಿ ಎಂದು ರೀಲು ಬಿಡುತ್ತಾರೆ. ಹುಷಾರು, ಅಡ್ಡ ಪರಿಣಾಮಗಳಿಲ್ಲ ವಾಸಿಯಾಗದ ಕಾಯಿಲೆಗೂ ತಮ್ಮಲ್ಲಿ ಪರಿಣಾಮಕಾರಿ ಔಷಧ ಚಿಕಿತ್ಸೆ ಇದೆ ಎಂದಾಗ ಅದಕ್ಕೆ ಸಾಕ್ಷ್ಯಾಧಾರ evidence ಕೇಳಿ. ವ್ಯಾಪಾರೀಕರಣಗೊಂಡಿರುವ ಈ ಕ್ಷೇತ್ರದಲ್ಲಿ ಸಾಕ್ಷ್ಯಾಧಾರ ಕೇಳುವುದು ನಿಮ್ಮ ಹಕ್ಕು ಮತ್ತು ಅಗತ್ಯ ಕೂಡ. ನಂಬಲರ್ಹವಾದ ವೈದ್ಯರೊಬ್ಬರನ್ನು ಹಾಗೂ ಚಿಕ್ಕ – ಸಣ್ಣ ಪ್ರಮಾಣದ ಆಸ್ಪತ್ರೆಯನ್ನು ಆಯ್ಕೆ ಮಾಡಿಕೊಳ್ಳಿ. ಇಲ್ಲಿ ದೊಡ್ಡನೆಯ ಕ್ಯೂ ಇರುವುದಿಲ್ಲ. ಅಪರಿಚಿತರು ಇರುವುದಿಲ್ಲ. ನೇರವಾಗಿ ವೈದ್ಯರನ್ನು ಕಾಣಬಹುದು. ಪ್ರಶ್ನೆ ಮಾಡಿ ವಿವರಗಳನ್ನು ಪಡೆಯಬಹುದು. ಔಷಧಿ – ಚಿಕಿತ್ಸಾ ವಿವರಗಳ ಬಗ್ಗೆ ಅನುಮಾನಗಳನ್ನು ಪರಿಹರಿಸಿ ಕೊಳ್ಳಬಹುದು. ಫೀಸ್ ಕಡಿಮೆ ಇರುತ್ತದೆ. ಅದೇ ಹೈಟೆಕ್ ಆಸ್ಪತ್ರೆಗಳು ನರ್ಸಿಂಗ್ ಹೋಂಗಳಲ್ಲಿ 'ನೀವು ಅಪರಿಚಿತರಾಗಿ ಅನಾಥರಾಗುತ್ತೀರಿ. ಇವುಗಳು ಕೇಳುವ ಫೀಸ್ ಕೊಡುವ ಬಿಲ್‌ಗಳು ನಿಮ್ಮ ಜೇಬಿಗೆ ಕತ್ತರಿಹಾಕುತ್ತವೆ. ಅವುಗಳಿಗೆ ಹೋಗದಿರುವುದೇ ಕ್ಷೇಮ. ಸರ್ಕಾರಿ ಆಸ್ಪತ್ರೆಗಳು. ಸೇವಾಸಂಸ್ಥೆಗಳು ನಡೆಸುವ ಆಸ್ಪತ್ರೆಗಳ ತಜ್ಞರು ಉತ್ತಮ.



ನಿಮಗೆ ಯಾವುದೇ ರೋಗಲಕ್ಷಣ / ಲಕ್ಷಣಗಳು ಕಾಣಿಸಿಕೊಂಡಾಗ ಅವು ಹೇಗೆ ಶುರುವಾದವು. ತೀವ್ರತೆ ಎಷ್ಟಿದೆ ಗಮನಿಸಿ. ಉದಾಹರಣೆಗೆ ತಲೆನೋವು ಶುರುವಾದರೆ, ಯಾವಾಗ, ಯಾವ ಸನ್ನಿವೇಶದಲ್ಲಿ ಶುರುವಾಯಿತು. ಸ್ವಲ್ಪ ನೋವೇ ಅಥವಾ ಅತ್ಯಲ್ಪ ಕಾಲದಲ್ಲಿ ತೀವ್ರಮಟ್ಟಕ್ಕೆ ಹೋಯಿತೇ ಜೊತೆಗೆ ವಾಕರಿಕೆ ವಾಂತಿ, ತಲೆಸುತ್ತು ಇತ್ಯಾದಿ ಇತರ ಲಕ್ಷಣಗಳು ನೆಗಡಿ ಶೀತ ಸೀನುಗಳು ಬಂದುವೇ ಗಮನಿಸಿ. ಒಂದು ಪೆರಾಸಿಟ್‌ಮಾಲ್ ಮಾತ್ರೆ ನುಂಗಿ, ನೋವು ತಗ್ಗುತ್ತದೆಯಾ ನೋಡಿ. ವೈದ್ಯರಲ್ಲಿಗೆ ಹೋಗಿ. ವಾಂತಿ–ಭೇದಿಯಾದರೆ, ವಾಂತಿಯಲ್ಲಿ ಭೇದಿಯಲ್ಲಿ ಏನು ಇತ್ತು, ಎಷ್ಟು ಸಲ ಆಯಿತು? ನೀರಿನಂಶ ಹೆಚ್ಚಿರುವ ದ್ರವ ಆಹಾರವನ್ನು ಸೇವಿಸಿ ವಿಶ್ರಾಂತಿ ಪಡೆಯಿರಿ. ಕಾರಣ ಏನಿರಬಹುದೆಂದು ನೀವೇ ಊಹಿಸಬೇಡಿ. ಇನ್ನೊಬ್ಬರಿಗೆ ಈ ರೀತಿ ಆಗಿ ಅವರು ಆಸ್ಪತ್ರೆಗೆ ಸೇರಿ ಸೀರಿಯಸ್ ಆದದ್ದನ್ನು ನೆನೆಸಿಕೊಳ್ಳಬೇಡಿ. ಎದೆ ಉರಿ, ಎದೆ ನೋವು ಬಂದರೆ ಹೃದ್ರೋಗದ ಚಿಂತೆ, ಹೊಟ್ಟೆ ನೋವು ಬಂದರೆ, ಅಪೆಂಡಿಸೈಟಿಸ್, ಕೈಕಾಲು ಜೋಮು ಬಂದರೆ ಲಕ್ವಾ ಹೊಡೆಯುತ್ತೆ ಎಂದುಕೊಂಡು ಭಯಪಡಬೇಡಿ. ರೋಗಲಕ್ಷಣಗಳನ್ನು ಬರೆದುಕೊಂಡು ಹೋಗಿ ಯಾವುದು ಮೊದಲು ಯಾವುದು ಆಮೇಲೆ, ಯಾವುದು ಶುರುವಾಯಿತು. ನಿಮಗೆಷ್ಟು ತೊಂದರೆಯಾಗಿದೆ, ಏನು ಮನೆಮದ್ದು ಮಾಡಿದಿರಿ ಹೇಳಿ. ನಿಮ್ಮ ತಿಳುವಳಿಕೆ ಪ್ರಕಾರ, ಯಾವ ಅಂಗಕ್ಕೆ ಸಂಬಂಧಿಸಿದ ಕಾಯಿಲೆ ಏನು ಕಾಯಿಲೆ ಎಂದು ಕೇಳಿ, ನೀವೇ ತಪಾಸಣೆಯನ್ನು ಸೂಚಿಸಬೇಡಿ. ವೈದ್ಯರು ತಪಾಸಣೆಗೆ ಬರೆದರೆ, ಏಕೆ ತಪಾಸಣೆ ಮಾಡಿಸಲು ಸೂಚಿಸಿದ್ದಾರೆ. ಫಲಿತಾಂಶ ನೆಗೆಟಿವ್ ಆದರೆ ಏನರ್ಥ, ಪಾಸಿಟಿವ್ ಆದರೆ ಏನರ್ಥ, ಟೆಸ್ಟ್‌ನ, ನಾರ್ಮಲ್‌ರೇಂಜ್ ಏನು, ಅಬ್‌ನಾರ್ಮಲ್ ರೇಂಜ್‌ನಲ್ಲಿದ್ದರೆ ಏನು ಅರ್ಥ ಕೇಳಿ ತಿಳಿದುಕೊಳ್ಳಿ. ಔಷಧಿ ಬರೆದುಕೊಟ್ಟರೆ, ಬ್ರಾಂಡ್ ನೇಮ್ ಜೊತೆಗೆ ಜನೆರಿಕ್ ಹೆಸರನ್ನು – ಕ್ಯಾಪಿಟಲ್ ಅಕ್ಷರಗಳಲ್ಲಿ ಬರೆಯಲು ವಿನಂತಿ ಮಾಡಿ. ಜನೌಷಧಿ ಮಳಿಗೆಗಳಲ್ಲಿ ಅತ್ಯಂತ ಕಡಿಮೆ ಬೆಲೆಗೆ ಕೊಂಡು ಕೊಳ್ಳಬಹುದು. ಔಷಧಿ ಸೇವನೆ ಚಿಕಿತ್ಸೆ ಪಡೆಯುವಾಗ ನೀವು ಅನುಸರಿಸಬೇಕಾದ ನೀತಿ – ನಿಯಮಗಳನ್ನು ಅರ್ಥಮಾಡಿಕೊಳ್ಳಿ, ಸ್ಪಷ್ಟಮಾಡಿಕೊಳ್ಳಿ, ಏನು ಮಾಡಬೇಕು, ಏನು ಮಾಡಬಾರದೆಂದು ತಿಳಿದು ಚಾಚೂ ತಪ್ಪದೆ ಪಾಲಿಸಿ. ಯಾವುದೇ ರೋಗ ಹತೋಟಿಗೆ ಬರಲು, ಗುಣವಾಗಲು ವೈದ್ಯರು, ಅವರು ನೀಡುವ ಚಿಕಿತ್ಸೆ ಎಷ್ಟು ಮುಖ್ಯವೋ ಅಷ್ಟೇ ಮುಖ್ಯ ನಿಮ್ಮ ಮನೋಬಲ ಹಾಗೂ ನಂಬಿಕೆಯಿಂದ ಚಿಕಿತ್ಸೆಯನ್ನು ಪಡೆಯುವುದು ಮತ್ತು ಅದರಲ್ಲಿ ಸಕ್ರಿಯವಾಗಿ ಭಾಗವಹಿಸುವುದು.

**ಯಾವಾಗ ತಜ್ಞರನ್ನು ಮತ್ತು ವಿಶೇಷ ತಜ್ಞರನ್ನು ಕಾಣಬೇಕು?**

ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ, ದೊಡ್ಡ ಮತ್ತು ಹೈಟೆಕ್ ಆಸ್ಪತ್ರೆಗಳಲ್ಲಿ ತಜ್ಞರು, ವಿಶೇಷ ತಜ್ಞರು (ಸ್ಪೆಶಲಿಸ್ಟ್ ಮತ್ತು ಸೂಪರ್ ಸ್ಪೆಶಲಿಸ್ಟ್) ಇರುತ್ತಾರೆ. ಅವರನ್ನು ಯಾವಾಗ, ಕಾಯಿಲೆಯ ಯಾವ ಹಂತದಲ್ಲಿ ಕಾಣಬೇಕು?

ರೋಗದ ಪ್ರಾರಂಭ ಹಂತದಲ್ಲೇ ಸ್ಪೆಶಲಿಸ್ಟ್‌ಗಳನ್ನು ಕಾಣುವ ಅಗತ್ಯವಿಲ್ಲ. ಸಾಮಾನ್ಯ ವೈದ್ಯರ ಸಾಮಾನ್ಯ ಚಿಕಿತ್ಸೆಯಿಂದ ರೋಗಲಕ್ಷಣಗಳು ಕಡಿಮೆಯಾಗದೇ, ತೀವ್ರವಾದಾಗ ಅಥವಾ ಯಾವ ಅಂಗ ರೋಗಪೀಡಿತವಾಗಿದೆ. ರೋಗವೇನು

ಎಂದು ಸಾಮಾನ್ಯ ವೈದ್ಯನಿಗೆ ಗೊತ್ತಾಗದಾದಾಗ ಅಥವಾ ಒಂದಕ್ಕಿಂತ ಹೆಚ್ಚಿನ ಅಂಗಗಳು ರೋಗಗ್ರಸ್ತವಾಗಿರಬಹುದು ಎನಿಸಿದಾಗ, ಸ್ಟಾಂಡರ್ಡ್ ಔಷಧಿ – ಚಿಕಿತ್ಸೆ ಕೆಲಸ ಮಾಡದೇ ಹೋದಾಗ ಮತ್ತು ತುರ್ತು ಸ್ಥಿತಿ ಉಂಟಾದಾಗ, ವಿಶೇಷ ತಜ್ಞರ ಅಗತ್ಯ ಬೀಳುತ್ತದೆ. ಯಾವ ತಜ್ಞ ವೈದ್ಯರನ್ನು ಕಾಣಬೇಕೆಂದು ನಿಮ್ಮ ಪರಿಚಯದ ವೈದ್ಯರೇ ನಿಮಗೆ ಹೇಳಲಿ. ಅವರಿವರ ಮಾತು / ಬುದ್ಧಿವಾದವನ್ನು ಕೇಳಿ ನೀವು ಆಯ್ಕೆ ಮಾಡದಿರುವುದೇ ಕ್ಷೇಮ. ಉದಾಹರಣೆಗೆ ತೀವ್ರವಾದ ತಲೆನೋವು ಕಾಣಿಸಿಕೊಂಡರೆ, ನ್ಯೂರಾಲಜಿಸ್ಟರನ್ನು ಕಾಣಬೇಕೇ? ನ್ಯೂರೋ ಸರ್ಜನ್‌ರನ್ನು ಕಾಣಬೇಕೇ? ಕಿವಿ – ಮೂಗಿನ ತಜ್ಞರನ್ನು ಕಾಣಬೇಕೇ? ಮನೋವೈದ್ಯರನ್ನು ಕಾಣಬೇಕೇ? ಎಂಬುದನ್ನು ನಿಮ್ಮ ವೈದ್ಯರು ಹೇಳಲಿ. ಸಿಹಿಮೂತ್ರರೋಗ ಹತೋಟಿಗೆ ಬರದಾದಾಗ, ಬಿಪಿ ಹತೋಟಿಗೆ ಬರದಾದಾಗ, ಎಂ. ಡಿ. ಫಿಸಿಶಿಯನ್‌ರನ್ನು ಕಾಣಬೇಕೇ? ಡಯಾಬಿಟಾಲಜಿಸ್ಟರನ್ನು ಕಾಣಬೇಕೇ? ಹೃದ್ರೋಗ ತಜ್ಞರನ್ನು ಕಾಣಬೇಕೇ ಎಂದು ನೀವೇ ನಿರ್ಧರಿಸಬೇಡಿ. ನಿಮ್ಮ ಕಾಯಿಲೆಗೆ ಒಬ್ಬ ಸರ್ಜನ್ ಆಪರೇಶನ್ ಮಾಡಿಸಿ ಎಂದರೆ, ಎರಡನೇ ಅಭಿಪ್ರಾಯಕ್ಕೆ ಯಾರನ್ನು ಕಾಣಬೇಕೆಂದು ನಿಮ್ಮ ವೈದ್ಯರನ್ನು ಕೇಳಿ. ಹಾಗೆಯೇ ಒಂದು ವೈದ್ಯ ಪದ್ಧತಿಯ ಚಿಕಿತ್ಸೆ ವಿಫಲವಾದಾಗ, ಮತ್ಯಾವ ವೈದ್ಯ ವ್ಯವಸ್ಥೆ ಸಹಾಯ ಮಾಡಬಲ್ಲದು ಎಂಬುದನ್ನು ನಿಮ್ಮ ಫ್ಯಾಮಿಲಿ ಡಾಕ್ಟರೇ ಹೇಳಲಿ. ಎರಡು ಮೂರು ವ್ಯವಸ್ಥೆಗಳನ್ನು ಏಕಕಾಲದಲ್ಲಿ ಸಂಪರ್ಕಿಸುವುದೂ ಉಚಿತವಲ್ಲ. ಆಸ್ತಮಾಗೆ ಕೀಲುನೋವಿಗೆ ಕೆಲವರು ಅಲೋಪತಿ / ಆಯುರ್ವೇದ / ಹೋಮಿಯೋ ಪದ್ಧತಿಯನ್ನು ಏಕಕಾಲಕ್ಕೆ ಕನ್ಸಲ್ಟ್ ಮಾಡುತ್ತಾರೆ. ಇದು ಸರಿ ಅಲ್ಲ. ಈ ಮೂರೂ ಪದ್ಧತಿಗಳವರು ನಿಮಗೆ ಕೊಡುವ ಔಷಧಗಳು ಪರಸ್ಪರ ಪೂರಕವೇ ಅಥವಾ ವಿರೋಧವನ್ನುಂಟುಮಾಡುತ್ತವೆಯೇ ಎಂಬುದನ್ನು ಯಾರೂ ವ್ಯವಸ್ಥಿತವಾಗಿ ಸಂಶೋಧನೆ ಮಾಡಿಲ್ಲ.

**ಯಾವ ವೈದ್ಯರಲ್ಲಿಗೆ ಹೋಗಲೇ ಬಾರದು?**

ನಮ್ಮ ದೇಶದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ, ನಗರ – ಪಟ್ಟಣಗಳ ಬಡವರು – ಅವಿದ್ಯಾವಂತರು ವಾಸಿಸುವ ಭಾಗಗಳಲ್ಲಿ ಢೋಂಗಿ – ನಕಲಿ ವೈದ್ಯರ ಹಾವಳಿ ಸಾಕಷ್ಟಿದೆ. ಯಾವ ವೈದ್ಯ ಕಾಲೇಜಿಗೂ ಹೋಗದೆ ಯಾವುದೇ ಕ್ರಮಬದ್ಧ ತರಬೇತಿ ಪಡೆಯದೇ 'ವೈದ್ಯ'ರೆಂದು ಬೋರ್ಡ್ ಹಾಕಿ ಪ್ರಾಕ್ಟೀಸ್ ಮಾಡುವವರಿದ್ದಾರೆ. ಸುಳ್ಳು ಸರ್ಟಿಫಿಕೇಟ್‌ಗಳು ಅವರಲ್ಲಿರುತ್ತವೆ ಅಥವಾ ತಮ್ಮ ವಂಶಸ್ಥರು, ತಮ್ಮ ಕುಟುಂಬ ವೈದ್ಯ ವೃತ್ತಿ ಮಾಡುತ್ತಿತ್ತು. ಅದನ್ನು ತಾನು ಕಲಿತಿದ್ದೇನೆ. ನಾರು–ಬೇರು–ಗಿಡಬಳ್ಳಿ ಕಾಯಿಗಳಿಂದ ಔಷಧಿ ಮಾಡಲು ಬರುತ್ತೆ ಎಂದು ಹೇಳಿಕೊಂಡು ಪ್ರಾಕ್ಟೀಸ್ ಮಾಡುವವರಿದ್ದಾರೆ. ತಲೆನೋವಿಗೆ ತಲೆಗೆ, ಕಾಲು ನೋವೆಂದರೆ ಕಾಲಿಗೆ, ಹೊಟ್ಟೆ ಬಾಧೆಗೆ ಹೊಟ್ಟೆಗೇ ಸೂಜಿ ಚುಚ್ಚುತ್ತಾರೆ. ಭಸ್ಮ, ಕಷಾಯ, ತಾಯಿತ, ದಾರ, ಪುಡಿ, ಲೇಹ್ಯ ಜೀವಂತ ಮೀನುಗಳ ಮೂಲಕ ಔಷಧಿ ನೀಡುವ ಭೂಪರಿವರು. ಈ ನಕಲಿ ವೈದ್ಯರಿಂದ ದೂರವಿರಿ ಅಥವಾ ನಿಮ್ಮ ಕಣ್ಣಿಗೆ ಬಿದ್ದರೆ ಪೊಲೀಸರಿಗೆ ದೂರು ಕೊಡಿ. ನಕಲಿ–ಲೈಂಗಿಕ ತಜ್ಞರ ಹಾವಳಿ ಬಹುಶಃ ಎಲ್ಲ ಊರು–ಕೇರಿ ನಗರಗಳಲ್ಲಿದೆ. ಲೈಂಗಿಕ ಶಕ್ತಿ ಹೆಚ್ಚಿಸುವ ಮುಲಾಮು, ಎಣ್ಣೆ, ಪುಡಿ, ಮಾತ್ರೆ–ಸೂಜಿಮದ್ದು ಇವರಲ್ಲಿವೆ. ಅಮಾಯಕರಿಂದ ೧೦ ಸಾವಿರದಿಂದ ೫೦ ಸಾವಿರದವರೆಗೆ ಹಣ ಕೀಳುತ್ತಾರೆ. ಮೂಳೆ ಮುರಿತಕ್ಕೆ ನಾಟಿ ಪಟ್ಟು ಹಾಕುವ, ನೀವಿ ನಟಿಕೆ ತೆಗೆಯುವ 'ಪುತ್ತೂರು' ವೈದ್ಯರೆಂದು ಹೇಳಿಕೊಳ್ಳುವವರಿದ್ದಾರೆ ಎಚ್ಚರಿಕೆ.

ಇನ್ನು ನಿಮಗೆ ಕಾಯಿಲೆ – ಕಸಾಲೆ ಬರಲು ನಿಮ್ಮ ಪೂರ್ವಜನ್ಮದ ಪಾಪಶೇಷ, ಗ್ರಹಚಾರ, ಗ್ರಹಗತಿ – ಶನಿಕಾಟ, ದೆವ್ವ–ಭೂತಗಳ ಉಪದ್ರ, ದೇವರ ಮುನಿಸು, ಶಾಪ, ನಾಗದೋಷ, ಕೆಟ್ಟಕಣ್ಣು, ಮದ್ದೀಡು, ಮಾಟ ಶೂನ್ಯಗಳೇ ಕಾರಣ ಎಂದು ನಂಬಿಸಿ, ಪೂಜೆ, ಹೋಮ, ಭೂತೋಚ್ಚಾಟನೆ ಹೆಸರಿನಲ್ಲಿ ಸಾವಿರಾರು ರೂಪಾಯಿಗಳನ್ನು ಕಿತ್ತುಕೊಳ್ಳುವ ಜ್ಯೋತಿಷ್ಯರು, ಪೂಜಾರಿಗಳು, ದೇವಸ್ಥಾನ, ದರ್ಗಾಗಗಳಲ್ಲಿ ಮಂತ್ರವಾದಿಗಳಿದ್ದಾರೆ. ಅವರ ಹತ್ತಿರ ಸುಳಿಯಲೇಬೇಡಿ.

ಇನ್ನು ಕೆಲವು ಆಯುರ್ವೇದ, ಹೋಮಿಯೋ, ಸಿದ್ಧ, ಯುನಾನಿ ವೈದ್ಯರು ನಿಮಗೆ ಕೊಡುವುದು, ಅಲೋಪತಿ ಔಷಧಿಗಳು – ಇನ್‌ಜೆಕ್ಷನ್‌ಗಳು. ಅವರಿಂದಲೂ ದೂರವಿರಿ.

ಅಸಲಿ ವೈದ್ಯರಾದರೂ, ನಿಮ್ಮ ಪ್ರಶ್ನೆಗಳಿಗೆ ಉತ್ತರಿಸದ, ಸೌಜನ್ಯ ಸಹಾನುಭೂತಿಯಿಂದ ವರ್ತಿಸದ, ಹಣದಾಹಿ ವೈದ್ಯರಲ್ಲಿಗೂ ಹೋಗಬೇಡಿ.

**ಆರೋಗ್ಯ ಸಂರಕ್ಷಣೆ**

ನಿಮಗೆ ಗೊತ್ತೆ? ನಮ್ಮನ್ನು ಕಾಡುವ ಶೇಕಡಾ ೭೫ರಷ್ಟು ಕಾಯಿಲೆ–ಕಸಾಲೆಗಳು



ಬರದಂತೆ ತಡೆಗಟ್ಟಬಹುದು! ಮುಂಜಾಗ್ರತಾ ಕ್ರಮಗಳನ್ನು ಕೈಗೊಂಡರೆ, ಜೀವನ ಶೈಲಿಯನ್ನು ಬದಲಿಸಿಕೊಂಡರೆ ಇದು ಸಾಧ್ಯವೆಂದು ವಿಶ್ವ ಆರೋಗ್ಯ ಸಂಸ್ಥೆ ಸಾರಿ ಹೇಳಿದೆ.

೧) ಹಿತ–ಮಿತ–ಕ್ರಮಬದ್ಧ ಆಹಾರ ಸೇವನೆ – ಹೆಚ್ಚು ಹಣ್ಣು–ತರಕಾರಿ ಸೊಪ್ಪು, ಬೇಳೆ–ಕಾಳುಗಳು, ಕಡಿಮೆ ಎಣ್ಣೆ/ಜಿಡ್ಡು/ಕೊಬ್ಬಿನ ಪದಾರ್ಥಗಳು, ಸಂಸ್ಕರಿಸಿ ಡಬ್ಬಿ/ಪಾಕೇಟಿನಲ್ಲಿ ಮಾರಾಟವಾಗುವ ಜಂಕ್ ಆಹಾರಗಳನ್ನು ಸೇವಿಸದಿರುವುದು. ಕೋಲ್ಡ್–ಹಾಟ್ ಡ್ರಿಂಕ್ಸ್ ಕುಡಿಯದಿರುವುದು. ಸದಾ ವೇಳೆಗೆ ಸರಿಯಾಗಿ ಶುದ್ಧ–ಸ್ವಚ್ಛ ಆಹಾರ–ನೀರನ್ನು ಸೇವಿಸುವುದನ್ನು ಅಭ್ಯಾಸ ಮಾಡಿಕೊಳ್ಳಿ.

೨) ನಿತ್ಯ ವ್ಯಾಯಾಮ – ಶಾರೀರಿಕ ಚಟುವಟಿಕೆ : ದೇಹದಲ್ಲಿ ಹರಿಯುವ ಒಟ್ಟು ೫½ ಲೀಟರ್ ರಕ್ತ, ದೇಹದ ಮೂಲೆಯನ್ನು ತಲುಪಬೇಕಾದರೆ, ಶರೀರ ಚಲಿಸಬೇಕು. ವಾಕಿಂಗ್–ಜಾಗಿಂಗ್–ಕ್ರೀಡೆಗಳು ಈಜುವಿಕೆ, ಸೈಕ್ಲಿಂಗ್ ಸಹಾಯಕಾರಿ.

೩) ಸ್ವಚ್ಛತೆ – ವೈಯಕ್ತಿಕ ಮತ್ತು ಮನೆ ಹಾಗೂ ಸುತ್ತಮುತ್ತಲಿನ ಪರಿಸರ ಸ್ವಚ್ಛತೆಯಿಂದ ರೋಗಾಣುಗಳು ಹೆಚ್ಚುವುದಿಲ್ಲ. ನಿತ್ಯ ಸ್ನಾನ, ಮಡಿ ಬಟ್ಟೆ, ಕಸದ ವಿಲೇವಾರಿ, ಕೊಳೆಯುವ ಜೈವಿಕ ವಸ್ತುಗಳನ್ನು ದೂರ ಸಾಗಿಸುವ ವ್ಯವಸ್ಥೆ, ಸ್ವಚ್ಛ ಶೌಚಾಲಯ ನಮಗೆ ಅಗತ್ಯ.

೪) ಪ್ರಶಾಂತ ಮನಸ್ಸು – ನಿಧಾನಗತಿಯ ಜೀವನ ಶೈಲಿ ಮತ್ತು ತೃಪ್ತಿ– ಅತಿ ಆಸೆ – ಚಿಂತೆ – ದುಗುಡ – ನಿರಾಶೆ – ದುಃಖ – ಭಯ – ಕೋಪಗಳಿಗೆ ಮನಸ್ಸಿನಲ್ಲಿ ಆಶ್ರಯ ನೀಡಬಾರದು. ಸರಳ ಜೀವನವೇ ಸುಂದರ, ನೆಮ್ಮದಿದಾಯಕ, ಭೋಗ–ವೈಭೋಗ, ಸ್ಪರ್ಧೆ, ಅತೃಪ್ತಿಗಳು ಅನಾರೋಗ್ಯವನ್ನು ಹೆಚ್ಚಿಸುತ್ತವೆ. ದುಶ್ಚಟಗಳು ದೇಹ–ಮನಸ್ಸಿಗೆ ಹಾನಿಯನ್ನುಂಟುಮಾಡುತ್ತವೆ. ಎಲ್ಲರೊಡನೆ ಪ್ರೀತಿ–ಸ್ನೇಹ–ವಿಶ್ವಾಸ, ನೀತಿ ನಿಯಮಗಳ ಪಾಲನೆ, ದಯೆ ಅನುಕಂಪ ಸಹಾನುಭೂತಿಗಳು, ಸಾಮಾಜಿಕ ಹೊಂದಾಣಿಕೆ, ಶಿಸ್ತು – ಸಂಯಮಗಳಿಂದ ಮನಸ್ಸು ಪ್ರಸನ್ನವಾಗಿ, ಆರೋಗ್ಯವನ್ನು ರಕ್ಷಿಸುವುದಲ್ಲದೆ ವೃದ್ಧಿಸುತ್ತದೆ.

ನಮ್ಮ ಆರೋಗ್ಯ ನಮ್ಮ ಕೈಯಲ್ಲೇ. ಆರೋಗ್ಯಭಾಗ್ಯವನ್ನು ನಾವೇ ಸಂಪಾದಿಸಬೇಕು.

**ಡಾ|| ಸಿ. ಆರ್. ಚಂದ್ರಶೇಖರ್**
೩೮, ೨ನೇ ಕ್ರಾಸ್, ಸಿಂಡಿಕೇಟ್ ಬ್ಯಾಂಕ್ ಕಾಲೋನಿ
ಬನ್ನೇರುಘಟ್ಟ ರಸ್ತೆ, ಬೆಂಗಳೂರು – ೫೬೦ ೦೭೬

# ಮೋದಿ ಆಡಳಿತ – ವಿದೇಶೀ ನೀತಿ ಎತ್ತ ಸಾಗುತ್ತಿದೆ

ಎರಡು ಸಾವಿರದ ಹತ್ತೊಂಬತ್ತರ ಲೋಕಸಭಾ ಚುನಾವಣೆಗಳಲ್ಲಿ ಭಾರತೀಯ ಜನತಾ ಪಕ್ಷ ಭಾರಿ ಬಹುಮತ ಗಳಿಸಿ ಮತ್ತೆ ಅಧಿಕಾರಾರೂಢವಾಗಿದೆ. ಎರಡನೇ ಬಾರಿಗೆ ಪ್ರಧಾನಿಯಾಗಿ ಅಧಿಕಾರ ವಹಿಸಿಕೊಂಡಿರುವ ನರೇಂದ್ರ ಮೋದಿ ಸರಕಾರದ ವಿದೇಶಾಂಗ ನೀತಿ ಮತ್ತಷ್ಟು ಬಲಪಂಥೀಯವಾಗಲಿದೆ. ನಿರೀಕ್ಷಿಸಿದ್ದಂತೆ ಮೋದಿ ತಮ್ಮ ಮಿತ್ರ ಭಾಜಪ ಅಧ್ಯಕ್ಷ ಅಮಿತ್ ಷಾರನ್ನು ಗೃಹ ಸಚಿವರನ್ನಾಗಿ ಮಾಡಿದ್ದಾರೆ. ಮೋದಿ–ಷಾ ಜೋಡಿ ಗುಜರಾತ್‌ನಲ್ಲಿ ನಡೆಸಿದ ಆಡಳಿತ ವೈಖರಿಯನ್ನು ನೋಡಿದ್ದೇವೆ. ಷಾ ಮತ್ತೊಂದು ವರ್ಷ ಭಾಜಪ ಅಧ್ಯಕ್ಷರಾಗಿ ಮುಂದುವರಿಯಲಿದ್ದಾರೆ. ಒಟ್ಟಿನಲ್ಲಿ ಮುಂದಿನ ಐದು ವರ್ಷಗಳು ಮೋದಿ–ಷಾ ಜೋಡಿಯದೇ ದರ್ಬಾರು. ಭಾರತದ ವಿದೇಶಾಂಗ ನೀತಿ ಈಗಾಗಲೇ ಅಮೆರಿಕದೊಂದಿಗೆ ಎಲ್ಲ ಬಗೆಯಲ್ಲೂ ಸಹವರ್ತಿಸುತ್ತಿದೆ. ಹಿಂದಿನ ಐದು ವರ್ಷಗಳಲ್ಲಿಯೇ ಮೋದಿ ಸರಕಾರ ಅಮೆರಿಕದ ಸ್ಟ್ರಾಟೆಜಿಕ್ ಪಾರ್ಟ್‌ನರ್ ಆಗಿತ್ತು.

ಭಾರತ ಸ್ವಾತಂತ್ರ್ಯಗೊಂಡನಂತರ ಭಾರತದ ವಿದೇಶಾಂಗ ನೀತಿ ಹಲವು ತಿರುವುಗಳನ್ನು ಪಡೆದುಕೊಂಡಿದೆ. ಪಶ್ಚಿಮ ರಾಷ್ಟ್ರ ಪರನೀತಿಗೆ ಒಲವಿದ್ದಾಗ್ಯೂ ಅಂದಿನ ಅಂತರರಾಷ್ಟ್ರೀಯ ಪರಿಸ್ಥಿತಿಯಲ್ಲಿ ಅದು ಸಾಧ್ಯವಾಗಲಿಲ್ಲ. ಅಧಿಕಾರದಲ್ಲಿದ್ದ ಕಾಂಗ್ರೆಸ್ ಪಕ್ಷ ಸ್ವತಂತ್ರ ವಿದೇಶೀ ನೀತಿಯನ್ನು ಅನುಸರಿಸಬೇಕಾಗಿ ಬಂತು. ಶೀತಯುದ್ಧ ಕಾಲದಲ್ಲಿ ಹುಟ್ಟಿಕೊಂಡದ್ದೇ ಅಲಿಪ್ತನೀತಿ. ಅದು ಹೊಸದಾಗಿ ಸ್ವತಂತ್ರಗೊಂಡ ರಾಷ್ಟ್ರಗಳಿಗೆ ಮಾದರಿಯಾಗಿದ್ದು ಒಂದು ಚಳವಳಿಯಾಗಿ ರೂಪುಗೊಂಡಿತು. ವಿಶ್ವಸಂಸ್ಥೆಯ ಭದ್ರತಾ ಮಂಡಳಿ ಬಲಿಷ್ಠ ರಾಷ್ಟ್ರಗಳ ಕೈಗೊಂಬೆಯಾಗಿದ್ದರೂ ಅಲಿಪ್ತ ಚಳುವಳಿ ಅಂತರರಾಷ್ಟ್ರೀಯ ವಿದ್ಯಮಾನಗಳ ಮೇಲೆ ಪ್ರಭಾವ ಬೀರುವಷ್ಟು ಪ್ರಬಲವಾಗಿತ್ತು. ಶೀತಯುದ್ಧ ಅಂತ್ಯಗೊಂಡಮೇಲೆ, ಅಂದರೆ ಸೋವಿಯೆತ್ ಒಕ್ಕೂಟದ ವಿಘಟನೆಯ ನಂತರ ಜಗತ್ತು ಮತ್ತೆ ಏಕಕೇಂದ್ರಿತ ವ್ಯವಸ್ಥೆಯತ್ತ ಜಾರಿತು. ಅಮೆರಿಕ ಅತ್ಯಂತ ಪ್ರಬಲರಾಷ್ಟ್ರವಾಗಿ ಹೊಮ್ಮಿತು. ಸಹಜವಾಗಿಯೇ ಅಲಿಪ್ತ ಚಳವಳಿ ತನ್ನ ಅಸ್ತಿತ್ವ ಕಳೆದುಕೊಂಡಿತು. ಭಾರತದ ವಿದೇಶಾಂಗ ನೀತಿಯು ಹೆಚ್ಚು ಹೆಚ್ಚಾಗಿ ಅಮೆರಿಕದ ವಿದೇಶೀ ನೀತಿಗೆ ಹೊಂದಿಕೊಳ್ಳತೊಡಗಿತು, ಅವಲಂಬನೆಯೂ ಅಧಿಕಗೊಂಡಿತು.

ಭಾರತದಲ್ಲಿ ಸಮ್ಮಿಶ್ರ ಸರಕಾರದ ಯುಗ ಪ್ರಾರಂಭವಾದ ನಂತರ ಅಮೆರಿಕದ ಮರ್ಜಿಗೆ ಅನುಸಾರವಾಗಿ ನಡೆದುಕೊಳ್ಳುವುದು ಇನ್ನಷ್ಟು ವರ್ಧಿಸಿತು. ಮನಮೋಹನ ಸಿಂಗ್ ನೇತೃತ್ವದ ಯುನೈಟೆಡ್ ಪ್ರೋಗ್ರೆಸಿವ್ ಅಲಯನ್ಸ್ (ಯುಪಿಎ) ಸರಕಾರ ಅಮೆರಿಕದೊಂದಿಗೆ ಮಾಡಿಕೊಂಡ, ಇನ್ನೂ ಅಮಲಿಗೆ ಬಾರದ ನಾಗರಿಕ ಪರಮಾಣು ಒಪ್ಪಂದ ಅದಕ್ಕೊಂದು ನಿದರ್ಶನ. ೧೯೯೮ರಲ್ಲಿ ಅಧಿಕಾರಕ್ಕೆ ಬಂದ ಭಾಜಪ ನೇತೃತ್ವದ ವಾಜಪೇಯಿ ಸರಕಾರ ಅಮೆರಿಕದೊಂದಿಗೆ ಸಂಬಂಧಗಳನ್ನು ಮತ್ತಷ್ಟು ಬೆಸೆಯಿತು. ಇಸ್ರೇಲಿನೊಂದಿಗೆ ಭಾರತ ಮೊದಲ ಬಾರಿಗೆ ರಾಜತಾಂತ್ರಿಕ ಸಂಬಂಧಗಳನ್ನು ಸ್ಥಾಪಿಸಿ ಮಾನ್ಯತೆ ನೀಡಿತು. ಅಲ್ಲಿಗೆ ಪ್ಯಾಲಸ್ತೈನ್ ರಾಜ್ಯದ ಸ್ಥಾಪನೆ ಹಿಂದಕ್ಕೆ ಸರಿಯಿತು. ೨೦೧೪ರಲ್ಲಿ ಭಾಜಪ ನೇತೃತ್ವದಲ್ಲಿ ಮೋದಿ ಸರಕಾರ ಅಧಿಕಾರಕ್ಕೆ ಬಂದಾಗ ಇಸ್ರೇಲಿನೊಂದಿಗೆ ಸಂಬಂಧಗಳು ಇನ್ನಷ್ಟು ದೃಢವಾದವು. ಇಸ್ರೇಲಿ ಪ್ರಧಾನಿ ನೆತಾನ್ಯಹು ಮೋದಿಯವರ ಪರಮ ಮಿತ್ರರಾದರು. ಭಾರತದ ಗಣರಾಜ್ಯ ದಿನೋತ್ಸವದ ಸಂದರ್ಭದಲ್ಲಿ ಮುಖ್ಯ ಅತಿಥಿಯೂ ಆಗಿದ್ದರು. ಪ್ಯಾಲಸ್ತೈನ್ ಅರಬ್ಬರ ಸ್ವತಂತ್ರ ರಾಷ್ಟ್ರ ಸ್ಥಾಪನೆಯ ಹೋರಾಟಕ್ಕೆ ಭಾರತದ ಬೆಂಬಲ ಅದೃಶ್ಯವಾಯಿತು. ಒಂದು ಕಾಲದಲ್ಲಿ ಪ್ಯಾಲೆಸ್ತೈನಿನ ಸ್ವತಂತ್ರ ಹೋರಾಟದ ನಾಯಕ ಯಾಸೆರ್ ಅರಾಫತ್ ಅಲಿಪ್ತ ರಾಷ್ಟ್ರಗಳ ಕೂಟದ ಪೂರ್ಣ ಸದಸ್ಯರಾಗಿದ್ದರು. ಕಳೆದ ವರ್ಷ ಅಮೆರಿಕದ ಅಧ್ಯಕ್ಷರು ಇಸ್ರೇಲಿನ ರಾಜಧಾನಿ ಟೆಲ್ ಅವೀವ್‌ನಿಂದ ಜೆರೂಸಲೆಮ್‌ಗೆ ಅಮೆರಿಕದ ರಾಯಭಾರಿ ಕಚೇರಿಯನ್ನು ವರ್ಗಾವಣೆ ಮಾಡಿದಾಗ ಭಾರತ ಸರಕಾರ ಚಕಾರವೆತ್ತಲಿಲ್ಲ. ವಿಶ್ವಸಂಸ್ಥೆಯ ಹಂಗಾಮಿ ಸದಸ್ಯತ್ವವನ್ನು ಪಡೆದುಕೊಂಡಿದ್ದ ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆ ಈಗ ಒಂದೊಂದಾಗಿ ಅದರ ಅಂಗಸಂಸ್ಥೆಯ ಸದಸ್ಯತ್ವವನ್ನು ಕಳೆದುಕೊಳ್ಳುತ್ತಿದೆ. ಇತ್ತೀಚೆಗೆ ವಿಶ್ವಸಂಸ್ಥೆಯ ಎಕನಾಮಿಕ್ ಅಂಡ್ ಸೋಷಿಯಲ್ ಕೌನ್ಸಿಲ್, ಹ್ರಸ್ವವಾಗಿ 'ಇಕೊಸಾಕ್'ನ ಸದಸ್ಯತ್ವಕ್ಕೆ ಭಾರತ ಬೆಂಬಲಿಸದಿದ್ದರಿಂದ ಸದಸ್ಯತ್ವವನ್ನು ಕಳೆದುಕೊಂಡಿತು. ಪ್ಯಾಲಸ್ತೈನ್ ವಿಮೋಚನೆಗೆ ಹೋರಾಟ ನಡೆಸುತ್ತಿರುವ ಹಮಾಸ್‌ನೊಂದಿಗೆ ಸಂಬಂಧ ಹೊಂದಿರುವುದೇ ಅಪರಾಧ. ಇಸ್ರೇಲಿ ಪ್ರಧಾನಿ ನೆತಾನ್ಯಹು ವೈಯಕ್ತಿಕವಾಗಿ ಪ್ರಧಾನಿ ಮೋದಿಯವರಿಗೆ ಕೃತಜ್ಞತೆ ವ್ಯಕ್ತಗೊಳಿಸಿದ್ದಾರೆ. ಭಾರತ ಈ ಸಂಸ್ಥೆಯಲ್ಲಿ ಮೊದಲ ಬಾರಿಗೆ ಅಮೆರಿಕ ಮತ್ತು ಇತರ ರಾಷ್ಟ್ರಗಳೊಂದಿಗೆ ಇಸ್ರೇಲಿನ ಪರವಾಗಿ 'ಇಕೊಸಾಕ್'ನಿಂದ ಪ್ಯಾಲಸ್ತೈನ್‌ಅನ್ನು ಹೊರ ಹಾಕಲು ಮತ ನೀಡಿತು. ಭಾರತದಲ್ಲಿ ಮೋದಿ ಅಧಿಕಾರದಲ್ಲಿರುವವರೆಗೆ ಅಡ್ಡಿಯಿಲ್ಲ ಎಂಬುದಾಗಿ ಅಮೆರಿಕದ ವಿದೇಶಾಂಗ ಕಾರ್ಯದರ್ಶಿ ಮೈಕ್ ಷಾಂಪಿಯೋ ಭಾರತದ ನಿಲುವಿಗೆ ಅಭಿನಂದಿಸಿದ್ದಾರೆ.

ಡೋನಾಲ್ಡ್ ಟ್ರಂಪ್ ಅಮೆರಿಕದ ಅಧ್ಯಕ್ಷರಾಗಿ ಆಯ್ಕೆಗೊಂಡಮೇಲೆ ಇರಾನಿನೊಂದಿಗೆ ಹಿಂದಿನ ಅಧ್ಯಕ್ಷರು ಮಾಡಿಕೊಂಡಿದ್ದ ಒಪ್ಪಂದವನ್ನು ರದ್ದುಗೊಳಿಸಿದ್ದು, ಮತ್ತೆ ಆರ್ಥಿಕ ದಿಗ್ಬಂಧನ ಹೇರಿದ್ದನ್ನು ಭಾರತ ವಿರೋಧಿಸದೆ ಸಮ್ಮತಿ ನೀಡಿತು. ಭಾರತಕ್ಕೆ ದೊಡ್ಡ ಪ್ರಮಾಣದಲ್ಲಿ ತೈಲ ಸರಬರಾಜು ಮಾಡುತ್ತಿದ್ದ ದೇಶ ಇರಾನ್. ಪ್ರಾರಂಭದಲ್ಲಿ ನೀಡಿದ್ದ ವಿನಾಯಿತಿಯನ್ನು ರದ್ದುಗೊಳಿಸಿ, ಪ್ರತಿಬಂಧ ಹೇರಿದ್ದನ್ನು ಭಾರತ ಪ್ರತಿಭಟಿಸದೇ ಅಂಗೀಕರಿಸಿದೆ. ಭಾರತದಲ್ಲಿ ತೈಲದ ಬೆಲೆ ಏರಿಕೆಗೆ ಇದೂ ಒಂದು ಕಾರಣ. ಭಾರತ–ಇರಾನ್ ಸಂಬಂಧಗಳಿಗೆ ಮೋದಿ ಸರಕಾರ ನೀಡಿರುವ ಪ್ರಾಶಸ್ತ್ಯ ಇಂಥದ್ದು.

ಕಳೆದ ವರ್ಷದಿಂದಲೇ ಅಮೆರಿಕ ಪ್ರಾರಂಭಿಸಿದ ವಾಣಿಜ್ಯ ಸಮರ ಈಗ ವಿಶ್ವವ್ಯಾಪಿಯಾಗಿ ಪ್ರಸರಿಸಿದೆ. ಭಾರತದಿಂದ ಆಮದು ಮಾಡಿಕೊಳ್ಳುತ್ತಿದ್ದ ಉಕ್ಕು ಮತ್ತು ಅಲ್ಯೂಮಿನಿಯಮ್ ಮೇಲೆ ಕಳೆದ ವರ್ಷ ಮಾರ್ಚ್ ತಿಂಗಳಲ್ಲಿ ಅಮೆರಿಕ ಶುಲ್ಕ ವಿಧಿಸಿತ್ತು. ಅದು ಯೂರೋಪಿನ ದೇಶಗಳಿಗೂ ವಿಸ್ತರಿಸಿತ್ತು. ಅಮೆರಿಕ–ಚೀಣ ವಾಣಿಜ್ಯ ಸಮರ ತೀವ್ರಗೊಂಡಿರುವುದು ಎಲ್ಲರಿಗೂ ತಿಳಿದಿರುವ ವಿಷಯ. ಒಂದು ವರ್ಷದಿಂದ ನಡೆದ ಮಾತುಕತೆಗಳು ಫಲಪ್ರದವಾಗದ್ದರಿಂದ ಭಾರತ ಕೊನೆಗೂ ಈ ವರ್ಷ ಜೂನ್ ತಿಂಗಳಲ್ಲಿ ಪ್ರತೀಕಾರ ಕ್ರಮಕೈಗೊಂಡಿದೆ. ಈಚೆಗೆ ಅಮೆರಿಕದಿಂದ ಆಮದು ಮಾಡಿಕೊಳ್ಳುತ್ತಿರುವ ೨೯ ಸರಕುಗಳ ಮೇಲೆ ಸುಂಕ ವಿಧಿಸಿದೆ. ಇದು ಅನಿವಾರ್ಯವಾಗಿ ಭಾರತ ತೆಗೆದುಕೊಂಡಿರುವ ಕ್ರಮ, ಆದರೂ ಸ್ವಾಗತಾರ್ಹ. ಅಮೆರಿಕ ಈಚೆಗೆ ಹೆಚ್ಚು ಹೆಚ್ಚು ವಾಣಿಜ್ಯ ರಕ್ಷಣಾ ಕ್ರಮಗಳನ್ನು ಕೈಗೊಳ್ಳುತ್ತಿದೆ. ಇದು ಎಲ್ಲಿಗೆ ಮುಟ್ಟುತ್ತದೆ ನೋಡಬೇಕು.

ಈ ಸಲ ಮೋದಿ ಪಟ್ಟಾಭಿಷೇಕಕ್ಕೆ ಬೇರೊಂದು ಪ್ರಾದೇಶಿಕ ಸಂಸ್ಥೆಯ ವರಿಷ್ಠರು ಭಾಗಿಯಾಗಿದ್ದರು. ಭೂತಾನ, ನೇಪಾಳ, ಮ್ಯಾನ್ಮಾರ್, ಶ್ರೀಲಂಕಾ, ಮಾಲ್ಡೀವ್ಸ್ ಮುಂತಾದ ದೇಶಗಳ ಅಧಿಪತಿಗಳು ಪಾಲ್ಗೊಂಡಿದ್ದರು. ಮೊದಲ ಸಲ ಪ್ರಧಾನಿಯಾಗಿದ್ದಾಗ ಮೋದಿ ಸರಕಾರದ ಪ್ರಮಾಣವಚನ ಸಮಾರಂಭಕ್ಕೆ 'ಸಾರ್ಕ್' ದೇಶಗಳ ವರಿಷ್ಠರು ಭಾಗಿಯಾಗಿದ್ದರು. ಪಾಕಿಸ್ತಾನದೊಂದಿಗೆ ನಂತರ ಸಂಬಂಧಗಳು ಹಳಸಿಕೊಂಡದ್ದರಿಂದ 'ಸಾರ್ಕ್'ಗೆ ಹಿನ್ನಡೆಯಾಯಿತು. ಪಾಕಿಸ್ತಾನ 'ಸಾರ್ಕ್' ಅಧ್ಯಕ್ಷ ಸ್ಥಾನ ಸರದಿಯ ಮೇಲೆ ಪಡೆದಿರುವುದರಿಂದ ಸದ್ಯಕ್ಕೆ ಅದರ ಶೃಂಗಸಭೆ ನಡೆಯುವುದು ಅನುಮಾನ. ಐದು ವರ್ಷ ಕಳೆದರೂ ಸಭೆ ನಡೆದಿಲ್ಲ. ಹಾಗಾಗಿ 'ಸಾರ್ಕ್'ನ ಭವಿಷ್ಯ ಏನಾದೀತು?

**ಸೀಯಾರ್ಕೆ**
'ಸೂರ್ಯ ರೆಸಿಡೆನ್ಸಿ', ಫ್ಲಾಟ್ ೧, ನಂ. ೩೧೩೩, ೩ನೇ ಅಡ್ಡರಸ್ತೆ
ಗಿರಿನಗರ ೪ನೇ ಫೇಸ್, ಬೆಂಗಳೂರು – ೫೬೦ ೦೮೫







# ಮೇ ಸಾಹಿತ್ಯ ಮೇಳದಲ್ಲಿ ಅರಳಿದ ಕಲಾಕೃತಿಗಳು

ಗದಗದಲ್ಲಿ ನಡೆದ ಆರನೇ ಮೇ ಸಾಹಿತ್ಯ ಮೇಳ 'ಅಭಿವೃದ್ಧಿ ಭಾರತ' ಎಂಬ ಸಂಕಲ್ಪದೊಂದಿಗೆ ಕವಲುದಾರಿಗಳ ಮುಖಾಮುಖಿಯಾಗಿತ್ತು. ರಾಜ್ಯದ ಪ್ರತಿಭಾವಂತ ಯುವ ಕಲಾವಿದರು ತಮ್ಮ ಕಲಾಕೃತಿಗಳಲ್ಲಿ ಅಭಿವೃದ್ಧಿ ಭಾರತದ ಕನಸುಗಳನ್ನು ಅದ್ಭುತವಾಗಿ ಕಟ್ಟಿಕೊಟ್ಟಿದ್ದಾರೆ. ಬುದ್ಧ ಬಸವ ಗಾಂಧಿ ಅಂಬೇಡ್ಕರ್ ಫುಲೆ ಪೆರಿಯಾರ್ ಮುಂತಾದ ಸಂತ ಶರಣರ ಆಶಯಗಳನ್ನೇ ಮುಖ್ಯವಾಗಿಟ್ಟುಕೊಂಡು ಕ್ಯಾನವಾಸ್‌ಗೆ ಬಣ್ಣ ತುಂಬಿ ಅಭಿವೃದ್ಧಿ ಭಾರತಕ್ಕಾಗಿ ಕಲಾವಿದರು ಕನವರಿಸಿದ್ದಾರೆ.

ಯುವ ಕಲಾವಿದ ವಿಜಯ ಕಿರೇಸೂರವರ ನೇತೃತ್ವದಲ್ಲಿ ನಡೆದ ಕಲಾಶಿಬಿರದಲ್ಲಿ ಸಲೀಂ ತೆಗ್ಗಿನಮನಿ, ಸಂಗಮೇಶ ಹರ್ಲಾಪುರ, ಸಂಜೀವ ಕಾಳೆ, ಸಂತೋಷ ಪತ್ತಾರ, ಸುನಿಲ್ ಮುಳಗುಂದ, ವೀರಣ್ಣ ಕರಡಿ, ಸೂರ್ಯಕಾಂತ ನಂದೂರ, ಲಕ್ಷ್ಮೀದೇವಿ ಗವಾಯಿ, ಎನ್. ಬಿ. ಪರತಗೌಡ್ರ, ನಜೀರ್ ಡಂಬಳ, ರಾಜು ತೆರದಾಳ, ರಮೇಶ ಗಾರವಾಡ, ಮಹೇಶ್ ಸಂದಿಗೋಡ, ಬಸವರಾಜ ಕಂಠಿ, ಎನ್. ವಿ. ಬೆಡಗೌಡ್ರ ಮುಂತಾದ ಪ್ರತಿಭಾವಂತ ಕಲಾವಿದರು ಶಿಬಿರದಲ್ಲಿ ಪಾಲ್ಗೊಂಡಿದ್ದರು.

– ಕೆ.ಬಿ.ವೀರಲಿಂಗನಗೌಡ್ರ.
ಎಸ್.ಆರ್.ಜಿ.ಹೆಚ್.ಎಂ. ಪ್ರೌಢಶಾಲೆ, ಸಿದ್ದಾಪುರ–581355., ಉ.ಕ ಜಿಲ್ಲೆ. ದೂ: 9448186099.





Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru.
Editor : Dr. Siddanagouda Patil. 

